ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ

**ಸಾಹಿತ್ಯ ಸಮಿತಿ ಪ್ರಕಟನ ಮಾಲೆ : ೫**

ಪ್ರಧಾನ ಸಂಪಾದಕರು :

**ಶಿ. ಶಿ. ಬಸವನಾಳ, ಎಂ.ಎ.,**

ಪ್ರಾಧ್ಯಾಪಕ, ಲಿಂಗರಾಜ ಕಾಲೇಜ, ಬೆಳಗಾವಿ

# ಶಂಕರದಾಸಿಮಯ್ಯ ಪುರಾಣ

ಮಲ್ಲಿಕಾರ್ಜುನಕವಿ

ವಿರಚಿತ

# ಶಂಕರದಾಸಿಮಯ್ಯ ಪುರಾಣ




ಸಂಪಾದಕ:

ವೀರಭದ್ರಪ್ಪಾ ಬಸವಪ್ಪಾ ಹಾಲಬಾವಿ

ಬಿ.ಎ., ಎಲ್‌ಎಲ್.ಬಿ.,

ನಿವೃತ್ತ ೧ನೆಯ ವರ್ಗ ನ್ಯಾಯಾಧೀಶ



೧೯೪೧

ಧಾರವಾಡ

ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ



# ಪ್ರಕಾಶಕರ

# ಮೊದಲ ಮಾತು

**ಶ್ರೀಮಾನ್ ಹಾಲಭಾವಿ ವೀರಭದ್ರಪ್ಪನವರು,** ಬಿ.ಎ., ಎಲ್‌ಎಲ್.ಬಿ., ನಿವೃತ್ತ ೧ನೆಯ ವರ್ಗ ಸಬ್‌ಜಜ್, ಧಾರವಾಡ, ಇವರು ಇಳಿವಯಸ್ಸಿನವರಾದರೂ ಬಹು ಶ್ರಮ ಪಟ್ಟು ಒಳ್ಳೆಯ ಆಸ್ಥೆಯಿಂದ ಸಂಪಾದಿಸಿದ '**ಶಂಕರದಾಸಿಮಯ್ಯ ಪುರಾಣ**' ವೆಂಬ ಹಿರಿ ಹೊತ್ತಗೆಯನ್ನು **ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿಗೆ** ಮುದ್ರಣ ವೆಚ್ಚವನ್ನೆಲ್ಲ ತಾವೇ ವಹಿಸಿಕೊಂಡು ಕಾಣಿಕೆಯಾಗಿ ಸಲ್ಲಿಸುವದಕ್ಕಾಗಿ ಸಮಿತಿಯ ಪರವಾಗಿ ನಮ್ಮ ಅಪಾರ ಕೃತಜ್ಞತೆಯನ್ನು ಈ ಮೂಲಕ ವ್ಯಕ್ತಪಡಿಸಲು ಬಯಸುತ್ತೇವೆ.

ವೀರಶೈವ ಸಮಾಜದ ಬೆಳವಣಿಗೆಯ ತಿಳುವಳಿಕೆಗೆ ಈ ಗ್ರಂಥವು ತುಂಬಾ ಸಹಾಯಕವಾದುದು. ವಿಶಾಲವಾದ, ಬೋಧಪ್ರದವಾದ ಪ್ರಸ್ತಾವನೆ, ಕಥಾಸಾರ, ಕೋಶ ಮುಂತಾದ ಉಪಯುಕ್ತ ವಿಷಯಗಳನ್ನೊಳಗೊಂಡ ಈ ಗ್ರಂಥವು ಸರ್ವಜನಾದರಣೀಯವಾಗುವುದೆಂದು ನಾವು ನಂಬಿದ್ದೇವೆ.

ಶ್ರೀ ಹಾಲಭಾವಿಯವರು ಇದರಂತೆಯೇ ಹೆಚ್ಚೆಚ್ಚು ಸಾಹಿತ್ಯ ಸಮಾಜ ಸೇವೆಯನ್ನು ಮಾಡಲು ಪರಮಾತ್ಮನು ಅವರಿಗೆ ಆಯುರಾರೋಗ್ಯವನ್ನು ದಯಪಾಲಿಸಲೆಂದು ನಮ್ಮ ಹಾರೈಕೆ.

ವೈಶಾಖ ಶುದ್ಧ ತೃತೀಯ
(ಬಸವ ಜಯಂತಿ),
ತಾ. ೨೯-೪-೧೯೬೦

**ಶಿ. ಶಿ. ಬಸವನಾಳ**
**ಕಾರ್ಯಾಧ್ಯಕ್ಷ**
**ಸಾಹಿತ್ಯ ಸಮಿತಿ, ಧಾರವಾಡ**

# ಮುನ್ನುಡಿ

ಪುರಾಣಗಳು ಸಾಮಾನ್ಯವಾಗಿ ಅವುಗಳ ಕಥಾನಾಯಕರ ಎಷ್ಟೋ ಚರಿತ್ರಾಂಶ ಗಳನ್ನು ಅದ್ಭುತವಾದ ಪವಾಡರೂಪದಿಂದ ವರ್ಣಿಸುವುವು. ಈ ಪದ್ಧತಿಗೆ ಈ ಪುರಾಣವು ಅಪವಾದವಲ್ಲದಿದ್ದರೂ ಇದರಲ್ಲಿ ಕೆಲವು ವೈಶಿಷ್ಟ್ಯಗಳಿವೆ. ಅವು ಯಾವು ವೆಂದರೆ, ಇದರಲ್ಲಿ ಲಿಂಗಾಯುತಮತತತ್ವಗಳು ಓದುಗಾರರ ಮನದಟ್ಟಾಗುವಂತೆ ವಿಸ್ತಾರವಾಗಿಯೂ ವಿಶದವಾಗಿಯೂ ವಿವರಿಸಲ್ಪಟ್ಟಿರುತ್ತವೆ. ಅದೇ ರೀತಿಯಲ್ಲಿ ಅಷ್ಟಾವರಣಗಳಲ್ಲಿಯ ಪ್ರತಿಯೊಂದರ ಮಹತ್ವವು ಪ್ರಸಂಗಾನುಸಾರ ಅಲ್ಲಲ್ಲಿ ವರ್ಣಿತ ವಾಗಿದೆ. ಇದರ ಕಥಾನಾಯಕನಾದ ಶಂಕರದಾಸಿಮಯ್ಯನು ೧೧ ನೆಯ ಶತಮಾನ ದವನು. ಇದರಲ್ಲಿ ಆ ಕಾಲದ ಐತಿಹಾಸಿಕ ಸಂಗತಿಗಳ ಮತ್ತು ಆಗ್ಗೆ ಪ್ರಚಾರ ದಲ್ಲಿದ್ದ ಕೆಲವು ಮತಗಳ ಉಲ್ಲೇಖವಿರುವುದರಿಂದ ಆಗಿನ ಸ್ಥಿತಿಯ ಬಗ್ಗೆ ಸಂಶೋಧನ ಮಾಡುವವರಿಗೆ ಈ ಪುರಾಣವು ಬಹಳ ಉಪಯೋಗ ಬೀಳುವಂತಿದೆ.

ಲಿಂಗಾಯತರಲ್ಲಿ ಕುಲಕೊಬ್ಬ ಶರಣನೆಂದೆನ್ನುವ ವಾಡಿಕೆಯುಂಟು. ಕುಲ ವೆಂದರೆ ಒಂದೇ ಉದ್ಯೋಗವನ್ನು ಮಾಡುವವರ ವರ್ಗ ಅಥವಾ ಜಾತಿ. ಶರಣ ನೆಂದರೆ ಆ ವರ್ಗದ ಅಥವಾ ಜಾತಿಯ ಜನರ ಆದರ್ಶ ಪುರುಷ. ಇಂಥವರು ಲಿಂಗಾಯತರಲ್ಲಿ ಅನೇಕರು ಆಗಿ ಹೋಗಿರುವರು. ಇವರಲ್ಲಿ ಮಡಿವಾಳ ಮಾಚಯ್ಯ, ತುರುಗಾಹಿ ರಾಮಯ್ಯ, ಮೋಳಿಗೆಯ ಮಾರಯ್ಯ, ಕಿನ್ನರಿಯ ಬ್ರಹ್ಮಯ್ಯ, ಆಯ್ದಕ್ಕಿ ಮಾರಯ್ಯ, ಕುಂಬಾರ ಗುಂಡಯ್ಯ, ಮಾದಾರ ಚೆನ್ನಯ್ಯ, ಬಾಚಿ ಕಾಯಕದ ಬಸವಯ್ಯ, ಗಾಣದ ಕನ್ನಪ್ಪ, ಮೇದಾರ ಕೇತಯ್ಯ, ನುಲಿಯ ಚೆಂದಯ್ಯ, ಸೂಜಿ ಕಾಯಕದ ಶಂಕರದಾಸಿಮಯ್ಯ, ಜೇಡರ ದಾಸಿಮಯ್ಯ, ಹಡಪದ ಅಪ್ಪಣ್ಣ, ಸುಂಕದ ಬಂಕಣ್ಣ, ವೈದ್ಯ ಸಂಗಣ್ಣ, ಡೋಹರ ಕಕ್ಕಯ್ಯ, ಸಮಗಾರ ಹರಳಯ್ಯ, ಗಾಜಲ ಬೊಮ್ಮಯ್ಯ, ಅಂಬಿಗರ ಚೌಡಯ್ಯ, ಮೌಕ್ತಿಕ ಸಂಗಯ್ಯ, ಕದಿರ ರೇಮವ್ವೆ, ಕೊಟ್ಟಣದ ಸೋಮವ್ವೆ ಮುಂತಾದವರು ಪ್ರಮುಖರು. ಇವರೆಲ್ಲರ ಚರಿತ್ರಗಳು ಬೈಲಿಗೆ ಬಿದ್ದರೆ ಲಿಂಗಾಯತರ ಧಾರ್ಮಿಕ ಇತಿಹಾಸದ ಮೇಲೆ ಹೆಚ್ಚಿನ ಬೆಳಕು ಬೀಳುವುದು.

ಈ ಎಲ್ಲ ಕಾರಣಗಳಿಂದ ಈ ಶರಣರಲ್ಲೊಬ್ಬನಾದ ಶಂಕರದಾಸಿಮಯ್ಯನ ಚರಿತ್ರವಾದ ಈ ಪುರಾಣವನ್ನು ಪ್ರಕಟಿಸುವ ಕಾರ್ಯವನ್ನು ಈಗ ಕೈಕೊಂಡಿ ರುತ್ತದೆ.

ಈ ಪುರಾಣದ ಸಂಸ್ಕರಣಕ್ಕಾಗಿ ನಾಲ್ಕು ಪ್ರತಿಗಳನ್ನು ಉಪಯೋಗಿಸಿದೆ. ಅವು ಯಾವುವೆಂದರೆ:

**ಅ**— ಕ್ರಿ. ಶ. ೧೮೪೭ ನೆಯ ಇಸ್ವಿಯ ಪ್ರತಿಯ ಮೇಲಿಂದ ೧೮೬೮ ನೆಯ ಇಸ್ವಿಯಲ್ಲಿ ಬರೆದ ಪ್ರತಿಯು, ಮ| ರಾ| ವೀರಪ್ಪನವರು ಬಿಳಿಯಂಗಡಿ, ವಕೀಲ, ಹುಬ್ಬಳ್ಳಿ, ಇವರಿಂದ ದೊರೆತದ್ದು.

**ಇ**— ಕ್ರಿ. ಶ. ೧೮೬೫ ನೆಯ ಇಸ್ವಿಯಲ್ಲಿ ಬರೆದ ಪ್ರತಿಯು, ಮ| ರಾ| ವೀರಪ್ಪನವರು ಮಿಣಜಗಿ, ವಿಜಾಪುರ, ಇವರಿಂದ ದೊರೆತದ್ದು.

**ಉ**— ಪ್ರತಿಮಾಡಿದ ಕಾಲ ಕೊಟ್ಟಿಲ್ಲ. ಶ್ರೀ ಸಿದ್ಧರಾಮಸ್ವಾಮಿಗಳು ಹಿರೇಮಠ, ಬೆಲವಂತರ, ತಾ. ಕಲಘಟಗಿ, ಜಿಲ್ಹಾ ಧಾರವಾಡ, ಇವರಿಂದ ದೊರೆತದ್ದು.

**ಎ**— ಕ್ರಿ. ಶ. ೧೮೮೭ ನೆಯ ಇಸ್ವಿಯಲ್ಲಿ ಬರೆದ ಪ್ರತಿಯು, ಮ| ರಾ| ಆಲೂರ ಚೆನ್ನಪ್ಪನವರು, ಹಿರೇಹಡಗಲಿ, ತಾ. ಹಡಗಲಿ, ಜಿಲ್ಹಾ ಬಳ್ಳಾರಿ, ಇವರಿಂದ ದೊರೆತದ್ದು.

**ಉ** ಪ್ರತಿಯಲ್ಲಿ ಮೊದಲಿನ ೨೮ ಪದ್ಯಗಳಿರುವುದಿಲ್ಲ. ಇದು ತಾಳೆಗರಿಯ ಮೇಲಿದ್ದು ಉಳಿದವುಗಳು ಕಾಗದದ ಮೇಲಿರುವುವು. **ಅ** ಮತ್ತು **ಎ** ಪ್ರತಿಗಳು ಸುವಾಚ್ಯವಿದ್ದು ಅವುಗಳ ಪಾಠಗಳು ಬಹುತರ ಒಂದೇ ತೆರನಾಗಿರುವುವು. **ಎ** ಪ್ರತಿಯು ಎಲ್ಲಕ್ಕಿಂತ ಶುದ್ಧವದೆ. **ಇ** ಪ್ರತಿಯು ಬಹಳ ಅಶುದ್ಧವಿದ್ದು ಅಕ್ಷರಗಳು ಚೆನ್ನಾಗಿಲ್ಲದಿದ್ದರೂ ಕೆಲವು ಶಬ್ದಗಳನ್ನು ಗೊತ್ತುಪಡಿಸಲಿಕ್ಕೆ ಇದು ಬಹು ಸಹಾಯಕಾರಿಯಾಯಿತು. ಇನ್ನೊಂದು ೧೮೫೮ ನೆಯ ಇಸ್ವಿಯ ಪ್ರತಿಯು ಹುನಗುಂದ ತಾಲೂಕಿನ ಇಳಕಲ್ಲ ಗ್ರಾಮದ ಮ| ರಾ| ದೊಡ್ಡಪ್ಪಾ ಶಿವಬಲ್ಲ ಇವರಿಂದ ಪುರಾಣದ ಅಚ್ಚಿನ ಕೆಲಸವು ಮುಗಿಯುತ್ತ ಬಂದಾಗ್ಗೆ ದೊರೆತದ್ದರಿಂದ ಇದರ ಉಪಯೋಗ ಮಾಡುವ ಸಮಯವು ಒದಗಲಿಲ್ಲ. ಇದರಲ್ಲಿ ಮತ್ತು **ಇ, ಉ** ಪ್ರತಿಗಳಲ್ಲಿ ಒಟ್ಟು ಪದ್ಯಗಳ ಸಂಖ್ಯೆಯು ೧೧೭೪ ಇದ್ದು **ಅ, ಎ** ಪ್ರತಿಗಳಲ್ಲಿ ಒಂದು ಪದ್ಯವು ಕಡಿಮೆಯಿರುವುದು. ಕಳೆದ ಫೆಬ್ರುವರಿ ತಿಂಗಳಲ್ಲಿ ಇನ್ನೊಂದು ಪ್ರತಿಯು ಜಮಖಂಡಿ ಸಂಸ್ಥಾನದ ಬನಹಟ್ಟಿಗ್ರಾಮದ ನನ್ನ ಚಿಕ್ಕ ಬಂಧು ಚಿ| ಸಿದ್ಧರಾಮಪ್ಪಾ ಕರಿಬಸವಪ್ಪಾ ಹೇರಲಗಿ ಈತನಿಂದ ದೊರೆಯಿತು. ಇದರಲ್ಲಿ ಒಂದೊಂದು ಸಂಧಿಯಲ್ಲಿ ೯ರಿಂದ ೧೧ ರ ವರೆಗೆ ಪದ್ಯಗಳು ಹೆಚ್ಚಿದ್ದು ಒಟ್ಟು ಪದ್ಯಗಳ ಸಂಖ್ಯೆಯು ೧೩೩೪ ಇರುವುದು. ಕವಿಯು ಪುರಾಣವನ್ನು ಮುಗಿಸಿದ ಕಾಲವನ್ನು ಹೇಳುವ ಪದ್ಯದಲ್ಲಿ ಇದರಲ್ಲಿಯೂ ಇತರ ಪ್ರತಿಗಳಲ್ಲಿಯೂ ಏನೂ ಹೆಚ್ಚುಕಡಿಮೆಯಿಲ್ಲ. ಆದರೂ ಇದರಲ್ಲಿ ಒಟ್ಟು ಪದ್ಯಗಳ ಸಂಖ್ಯೆಯು ಇಷ್ಟು ಹೆಚ್ಚು ಹೇಗಾಯಿತೆಂಬುದು ತಿಳಿಯುವುದಿಲ್ಲ. ಈ ಪ್ರತಿಯ ಮೊದಲಿನ ೨ ಪುಟಗಳು ಇಲ್ಲದಿರುವುದರಿಂದ ಮತ್ತು ಮುಂದಿನ ಕೆಲವು ಮತ್ತು ಕಡೆಯ ಕೆಲವು ಪುಟಗಳು ಖಿಲವಾಗಿರುವುದರಿಂದ ಹೀಗೆ ಹೆಚ್ಚಾಗಿರುವ ಪದ್ಯಗಳನ್ನು ಸಂಗ್ರಹಿಸಿ ಒಂದು ಪರಿಶಿಷ್ಟವನ್ನು ಪ್ರಸ್ತುತ ಪ್ರಕಟನೆಗೆ ಜೋಡಿಸುವ ಉದ್ದೇಶವು ಸಾಧ್ಯವಾಗಲಿಲ್ಲ.

ಅ, ಎ ಪ್ರತಿಗಳ ಆರಂಭದಲ್ಲಿ ಸೂತಶೌನಕಾದಿ ಋಷಿಗಳಿಗೆ ವ್ಯಾಸನು ನಾಗಲೀ(ರೀ)ಕರ ಉತ್ಪತ್ತಿಯ ವಿಷಯವಾಗಿ ಹೇಳಿದಂತೆ ೧೧ ಸಂಸ್ಕೃತ ಶ್ಲೋಕಗಳಿರುವುವು. ಇವುಗಳ ಸಾರಾಂಶವೇನೆಂದರೆ - "ಶಿವನಾಗಲೀಕ ಮತ್ತು ವರನಾಗಲೀಕ ಇವರು ಸಾಕ್ಷಾತ್ ಶಿವಸ್ವರೂಪಿಗಳು, ಸಿಂಪಿಗಕಾಯಕದವರು. ಇವರ ಅನುಯಾಯಿಗಳು ನಾಗಲೀಕರು. ನಾಲ್ಕು ವರ್ಣ ಹದಿನೆಂಟು ಕುಲ ನೂರೊಂದು ಜಾತಿಗಳಲ್ಲಿ ಇವರೇ ಶ್ರೇಷ್ಠರು." ಈ ರೀತಿ ನಾಗಲೀಕರ (ಈಗಿನ ಬಣ್ಣಗಾರರ) ಶ್ರೇಷ್ಠತ್ವವು ಎಲ್ಲ ಧರ್ಮ, ಮತ, ಪಂಥ, ಜಾತಿಯವರು ತಮ್ಮ ತಮ್ಮ ಶ್ರೇಷ್ಠತ್ವವನ್ನು ಹೇಳುವಂತೆ ಹೇಳಲ್ಪಟ್ಟಿರುವುದು.

ಮೇಲೆ ಹೇಳಿದ ಎಲ್ಲ ಪ್ರತಿಗಳನ್ನು ನನಗೆ ಕಳುಹಿದ ಮಹನೀಯರಿಗೆ ನಾನು ಋಣಿಯಾಗಿರುವೆನು.

ಈ ಪುರಾಣವನ್ನು ತಿದ್ದುವ ಮತ್ತು ಅದರ ಅಚ್ಚಿನ ಕರಡುಗಳನ್ನು ನೋಡುವ ಕೆಲಸದಲ್ಲಿ ಬೆಳಗಾಂವಿಯ ಲಿಂಗರಾಜ ಕಾಲೇಜದ ಪ್ರಾಧ್ಯಾಪಕರಾದ ಶ್ರೀಮಾನ್ ಶಿವಲಿಂಗಪ್ಪನವರು ಬಸವನಾಳ, ಎಮ್. ಎ., ಧಾರವಾಡದ ಕರ್ನಾಟಕ ಕಾಲೇಜದ ಪ್ರಾಧ್ಯಾಪಕರಾದ ಶ್ರೀಮಾನ್ ಸಂಗಪ್ಪನವರು ಮಾಳವಾಡ, ಎಮ್. ಎ., ಮತ್ತು ಶ್ರೀಮಾನ್ ಸಂಗಯ್ಯನವರು ಭೂಸನೂರಮಠ, ಎಮ್. ಎ., ಇವರು ಬಹಳ ಸಹಾಯವಿತ್ತರು. ಈ ಸಹಾಯವಿಲ್ಲದೆ ಈ ಪುರಾಣವು ಈ ರೀತಿ ಪ್ರಕಟವಾಗುವುದು ಶಕ್ಯವಿದ್ದಿಲ್ಲ. ಕಂದಗಲ್ಲು ಮತ್ತು ನವಿಲೆ ಎಂಬ ಗ್ರಾಮುಗಳು ಜೋಡಾಗಿ ಎರಡು ಕಡೆ ಇರುವುವು. ಇವುಗಳಲ್ಲಿ ಶಂಕರದಾಸಿಮಯ್ಯನ ಜನ್ಮಸ್ಥಾನವಾದ ಕಂದಗಲ್ಲು ಯಾವುದು, ಶ್ರೀ ಜಡೆಯ ಶಂಕರನ ನವಿಲೆಯು ಯಾವುದು ಎಂಬುದನ್ನು ಗೊತ್ತುಪಡಿಸುವುದು ಅವಶ್ಯವಿತ್ತು. ಬೆಳಗಾಂವಿಯ ಲಿಂಗರಾಜ ಕಾಲೇಜದ ಪ್ರಧಾನಾಧ್ಯಾಪಕ ಡಾಕ್ಟರ್ ಶಿವಲಿಂಗಯ್ಯನವರು ನಂದೀಮಠ, ಎಮ್. ಎ., ಪಿಎಚ್. ಡಿ., ಇವರು ಶ್ರಮವಹಿಸಿ ಎರಡೂ ಕಡೆ ಇರುವ ನವಿಲೆಗೆ ಹೋಗಿ ಅಲ್ಲಿಯ ಶಿಲಾಶಾಸನಗಳ ಪಡಿಯಚ್ಚುಗಳನ್ನು ತೆಗೆದುಕೊಂಡು ಅವುಗಳ ಅಕ್ಷರಗಳನ್ನು ಗುರುತಿಸಿ ಓದಿ ಶ್ರೀ ಜಡೆಯ ಶಂಕರನ ಸ್ಥಾನವನ್ನೂ ಶಂಕರದಾಸಿಮಯ್ಯನ ಜನ್ಮಸ್ಥಾನವನ್ನೂ ನಿಶ್ಚಯಿಸಿಕೊಟ್ಟರು. ಸಾತಾರೆಯ ೧ ನೆಯ ವರ್ಗ ನ್ಯಾಯಾಧೀಶ ಶ್ರೀಮಾನ್ ಭಾಗನಗೌಡರು ಪಾಟೀಲ, ಬಿ. ಎ., ಎಲ್ಎಲ್. ಬಿ., ಇವರು ಮೈಲಾರನ ಸ್ಥಾನವಾದ ಪೆಂಬೇರನ್ನು ಗೊತ್ತುಪಡಿಸುವ ಸಾಧನಗಳನ್ನು ದೊರಕಿಸಿಕೊಟ್ಟರು. ವಿಜಾಪುರದ ರಾವ ಬಹಾದ್ದೂರ ಫಕೀರಪ್ಪನವರು ಹಳಕಟ್ಟಿ, ಬಿ. ಎ., ಎಲ್ಎಲ್. ಬಿ., ಇವರೂ ಧಾರವಾಡವಾಸಿಗಳಾದ ಶ್ರೀಮಾನ್ ಬುದ್ಧಯ್ಯಾಸ್ವಾಮಿ ಪುರಾಣಿಕ ಇವರೂ ಅನೇಕ ಉಪಯುಕ್ತವಾದ ಸಲಹೆ ಸೂಚನೆಗಳನ್ನು ಕೊಟ್ಟರು. ಇವರೆಲ್ಲರಿಗೆ ನನ್ನ ಅಂತಃಕರಣಪೂರ್ವಕ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತೇನೆ. ಈ ಗ್ರಂಥದಲ್ಲಿ ಸೇರಿಸಿದ ಶ್ರೀ ಜಡೆಯ ಶಂಕರನ ದೇವಸ್ಥಾನದ ಮತ್ತು ಶಿಲಾಶಾಸನಗಳ ಛಾಯಾಚಿತ್ರಗಳನ್ನು ತೆಗೆ

ದುಕೊಟ್ಟ ಮತ್ತು ಉಳಿದ ಚಿತ್ರಗಳನ್ನು ಬರೆದುಕೊಟ್ಟ ನನ್ನ ಚಿ| ದಾನಪ್ಪ, ಏ. ಎಮ್., ಜಿ. ಡಿ. ಆರ್ಟ, ಪ್ರಧಾನಾಧ್ಯಾಪಕ, ಕಲಾಮಂದಿರ, ಧಾರವಾಡ, ಈತನ ಹೆಸರನ್ನು ಇಲ್ಲಿ ಹೇಳುವುದು ನನ್ನ ಕರ್ತವ್ಯವೆಂದು ಭಾವಿಸುತ್ತೇನೆ. ಈ ಪುರಾಣವನ್ನು ಮುದ್ದಾಗಿ ಮುದ್ರಿಸಿ ಅದಕ್ಕೆ ಅಚ್ಚುಕಟ್ಟಾದ ಮೈಕಟ್ಟನ್ನು ಕೊಟ್ಟ ಲಿಂಗರಾಜ ಮುದ್ರಣಾಲಯದ ವ್ಯವಸ್ಥಾಪಕರ ಉಪಕಾರವನ್ನು ನೆನೆಯುತ್ತೇನೆ.

ಕಡೆಗೆ, ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿಯವರು ಈ ಪುಸ್ತಕವನ್ನು ತಮ್ಮ ಗ್ರಂಥಮಾಲೆಯಲ್ಲಿ ಸೇರಿಸಲು ಒಡಂಬಟ್ಟದ್ದಕ್ಕಾಗಿ ಅವರಿಗೆ ನನ್ನ ವಂದನೆಗಳನ್ನರ್ಪಿಸುತ್ತೇನೆ.

ನನ್ನ ಈಗಿನ ಶಾರೀರಿಕ ಸ್ಥಿತಿಯಲ್ಲಿ ನನ್ನಿಂದ ಈ ಗ್ರಂಥದ ಕಾರ್ಯವು ಪೂರಯಿಸುವಂತೆ ಅನುಗ್ರಹಿಸಿದ ಶ್ರೀ ಜಡೆಯ ಶಂಕರನನ್ನು

ಮಂಗಳಂ ಶ್ರೀಗೌರಿಯರಸಗೆ ।
ಮಂಗಳಂ ತ್ರಿಜಗಾಧಿನಾಥಗೆ ।
ಮಂಗಳಂ ಫಣಿದೊಡಗೆ ಪಾಪಾಂತಕಗೆ ಪವಿಧರಗೆ ॥
ಮಂಗಳಂ ದೇವೇಂದ್ರನಮಿತಗೆ ।
ಮಂಗಳಂ ಭಾಳಾಗ್ನಿನೇತ್ರಗೆ ।
ಮಂಗಳಂ ಹರಿಯಜರರಸಿ ಕಾಣದ ಮಹಾತ್ಮಂಗೆ ॥

ಎಂಬ ಕವಿಯ ಪದ್ಯದಿಂದಲೇ ಅನನ್ಯಭಾವದಿಂದ ಸ್ಮರಿಸಿ ಈ ಮುನ್ನುಡಿಯನ್ನು ಮುಗಿಸುವೆನು.

ಧಾರವಾಡ, ೧೦ ಎಪ್ರಿಲ ೧೯೪೧
ಶಾ|ಶ|| ೧೮೬೩, ವಿಷುಸಂವತ್ಸರ, ಚೈತ್ರ ಶುದ್ಧ ೧೫)
(ಅಕ್ಕನ ಹುಣ್ಣಿವೆ)

**ವೀರಭದ್ರಪ್ಪಾ ಹಾಲಬಾವಿ**

# ಪರಿವಿಡಿ

## ಚಿತ್ರಗಳು



---

# ಶಂಕರದಾಸಿಮಯ್ಯನ ಪುರಾಣ

## ಕ ಥಾ ಸಾ ರ

ಮೇರುಪರ್ವತದ ದಕ್ಷಿಣದಿಗ್ಭಾಗದಲ್ಲಿರುವ ರಮಣೀಯವಾದ ಕುಂತಳದೇಶದೊಳಗೆ ಕಂದಶಿಲೆಯೆಂಬ ಪುಣ್ಯಕ್ಷೇತ್ರವಿರುವುದು. ಅಲ್ಲಿ ಗೋವಿಂದಭಟ್ಟನೆಂಬ ಬ್ರಾಹ್ಮಣೋತ್ತಮನು ದುಮ್ಮವ್ವೆಯೆಂಬ ಪತಿವ್ರತೆಯಾದ ತನ್ನರಸಿಯೊಡನೆ ಗೃಹಸ್ಥಾಶ್ರಮದ ಷಟ್ಕರ್ಮವನ್ನು ದಿನಾಲು ತಪ್ಪದೆ ಆಚರಿಸುತ್ತ ಸುಖದಿಂದಿರುತ್ತಿರಲು, ಒಂದು ದಿನ ಗೋವಿಂದದೇವನು ತನ್ನ ಹೆಂಡತಿಗೆ ಅಂದದ್ದು :

“ ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳಲ್ಲಿ ಗೃಹಸ್ಥಾಶ್ರಮವು ಜನನಮರಣ ಭ್ರಮಣಕ್ಕಾಸ್ಪದವಾಗಿ ಸಂಸಾರಮಾರ್ಗದ ಭ್ರಾಂತಿಯನ್ನು ಹೆಚ್ಚಿಸುವುದರಿಂದ ಮೋಕ್ಷಮಾರ್ಗಸಾಧಕವಾಗುವುದಿಲ್ಲ. ಆದುದರಿಂದ ನಾನು ದೇಶಾಟನವನ್ನು ಮಾಡುತ್ತ ಕಾಶೀವಿಶ್ವೇಶ್ವರನ ದರ್ಶನವನ್ನು ಪಡೆಯಲು ಹೋಗುತ್ತೇನೆ.”

ಈ ಮಾತು ಕೇಳಿ ದುಮ್ಮವ್ವೆಯು – “ ನನ್ನ ಜೀವನದ ಸರ್ವಸ್ವವಾದ ನೀವು ಹೋಗಿ ನಾನು ಅನಾಥಳಾಗುಳಿದು ಪಾಪಾತ್ಮಳಾಗಿರಬೇಕೇ? ನಿಮ್ಮಿಂದಲೇ ನಾನು ಸದ್ಗತಿಯನ್ನು ಹೊಂದತಕ್ಕವಳು, ಪತಿಯ ಸುಖದುಃಖಗಳೇ ಸತಿಯ ಸುಖದುಃಖಗಳು, ಸತಿಯು ಪತಿಯ ನೆರಳಿನಂತೆ ಆತನನ್ನು ಯಾವಾಗಲೂ ಹಿಂಬಾಲಿಸಬೇಕೆಂದು ನೀವೇ ನನಗೆ ಉಪದೇಶಿಸಿದಿರಿ, ಆರೀತಿಯಲ್ಲಿರುವುದೇ ನನಗೆ ಉಚಿತವು,” ಎಂದ ನುಡಿಯನ್ನು ಕೇಳಿ ಗೋವಿಂದದೇವನ ಮನ ಕರಗಿತು. ತಾನು ಗಳಿಸಿದ ದ್ರವ್ಯವನ್ನು ವಿಪ್ರರಿಗೆ ಬಾಂಧವರಿಗೆ ಅನಾಥರಿಗೆ ದಾನ ಮಾಡಿ ಕಾಶಿಗೆ ಹೋಗಬೇಕೆಂದು ಪತ್ನಿಯನ್ನೊಡಗೊಂಡು ಉತ್ತರಾಭಿಮುಖವಾಗಿ ಹೊರಟನು. ದಾರಿಯಲ್ಲಿ ಶುಭಸೂಚನೆಗಳು ತೋರಿದುವು. ಸಾಯಂಕಾಲಕ್ಕೆ ಪುಣ್ಯದಾಗರವಾದ ಎರಡನೇ ವಾರಣಾಸಿಯೆನಿಸುವ ನವಿಲೆಯೆಂಬ ಗ್ರಾಮವನ್ನು ಮುಟ್ಟಿದರು. ಅದರ ಮಧ್ಯದಲ್ಲಿರುವ ಶ್ರೀ ಜಡೆಯ ಶಂಕರ ದೇವಾಲಯದಲ್ಲಿ ಶಂಕರನ ಪೂಜೆಯು ಒಳ್ಳೇ ಸಡಗರದಿಂದ ನಡೆದಿತ್ತು. ಗೋವಿಂದರಸನು ಎವೆಯಾಡದೆ ಸದ್ಭಕ್ತಿಭಾವದಿಂದ ಪೂಜೆಯನ್ನು ನೋಡಿ ರೋಮಾಂಚಿತನಾಗಿ ಆನಂದಾಶ್ರುಗಳುದುರಿ ಸ್ವಾನುಭಾವದಲ್ಲಿ ಮೈಮರೆದನು.

ಈ ಸ್ಥಿತಿಯಲ್ಲಿರುವಾಗಲೇ ಬೆಳಗಾಯಿತು. ದುಮ್ಮವ್ವೆಯು "ಬೆಳಗಾಯಿತು, ಏಳಿರಿ" ಎಂಡು ಗಂಡನನ್ನು ಎಬ್ಬಿಸಲು, ಅವನು - "ಕಾಸಿನಾರ್ಜನೆಗೈದುತಂ ಧನ ರಾಶಿಯಂ ಕಂಡಂತೆಯಂಬಲಿಯಾಸೆಯೊಳು ತೊಳಲುತ್ತ ಮೃಷ್ಟಾನ್ನವನು ಪಡೆದಂತೆ ಕಂಡೆನು ಜಡೆಯ ಶಂಕರನ, ಈತನೇ ನನಗಿಷ್ಟದೈವಂ ಈತನೇ ಪ್ರಾಣಾಧಿನಾಥಂ ಈತನೇ ಕಾಮ್ಯಾರ್ಥಮೋಕ್ಷಾರ್ಥಕ್ಕೆ ಸಾಧಕನು, ಕಂದಶಿಲೆಗುಂ ನವಿಲೆಗುಂ ಕೇಳೊಂದು ಯೋಜನ, ನಾನು ನಿಚ್ಚಂ ಬಂದು ನಿನ್ನಂ ಪೊಗಳುವೆ ಪೂಜಿಸುವೆ ಪಾಡುವೆ" ಎಂದು ದೇವರಿಗೆ ಕೈಮುಗಿದು ಅವನ ಧ್ಯಾನದಲ್ಲಿಯೇ ಕಂದಶಿಲೆಗೆ ಮುಟ್ಟಿ ತನ್ನ ಮನೆಯನ್ನು ಸೇರಿದನು. ಸಂಜೆಯಾಯಿತು. ಶರಣ ಸತಿ ಲಿಂಗ ಪತಿ ಎಂಬ ಆಚರಣೆಯು ನಿಶ್ಚಯವಾಗಿ ಪತಿಯ ವಿಯೋಗದಿಂದ ಸತಿಯು ಬಳಲುವಂತೆ ಗೋವಿಂದರಸನು ವಿಕಳಾವಸ್ಥೆಯಿಂದ ಮೈಮರೆದು ಮೂರ್ಛೆಹೊಂದಿದನು. ಇದನ್ನು ಕಂಡು ಜಡೆಯ ಶಂಕರನು ಜಡೆ ಭಸ್ಮ ರುದ್ರಾಕ್ಷಿ ತ್ರಿಶೂಲ ಯೋಗದಂಡ ಖಟ್ವಾಂಗ ಗಳಿಂದ ಭೂಷಿತನಾದ ಜಂಗಮ ವೇಷದಿಂದ ಮೈದೋರಿದನು. ದುಮ್ಮವ್ವೆಯು ಅವನನ್ನು ಕಂಡು ನಮಸ್ಕರಿಸಿ ಪಾದಗಳನ್ನು ತೊಳೆದು ಉಚ್ಚಾಸನದಲ್ಲಿ ಕುಳ್ಳಿರಿಸಿ ಗಂಡನನ್ನು ಎಚ್ಚರಿಸಿದಳು. ಅವನು ಮೂರ್ಛೆ ತಿಳಿದೆದ್ದು ಜಂಗಮನನ್ನು ನೋಡಿ ಸಾಷ್ಟಾಂಗನಮಸ್ಕಾರ ಮಾಡಿ ಸ್ತುತಿಸುತ್ತಿರಲು, ಜಂಗಮವೇಷಧಾರಿಯಾದ ಶಂಕರನು ಅವನನ್ನು ಅಪ್ಪಿಕೊಂಡು ಮುಂಡಾಡಿ ನುಡಿದುದೇನೆಂದರೆ:

"ಹರ ಹರಾ, ಲಿಂಗದ ವಿರಹದಲ್ಲಿ ನೀ ಬೆಂದೆಯಲಾ! ಹೀಗಾದವರನ್ನು ಹಿಂದೂ ಕಂಡಿಲ್ಲ, ಮುಂದೂ ಕಾಣುವುದಿಲ್ಲ. ಲಿಂಗವಿಲ್ಲದಿರುವುದು ನಿನಗುಚಿತವಲ್ಲ. ಶ್ರೀಗುರು ವಿನಿಂದ ಲಿಂಗದೀಕ್ಷೆಯನ್ನು ಪಡೆ. ದೀಕ್ಷೆಯಾದ ಮಹಾಪುರುಷನು ಸಾಕ್ಷಾತ್ ಭಾಳಾಕ್ಷನೇ. ಅವನು ಮೂರು ಲೋಕದ ಶಿಕ್ಷೆರಕ್ಷೆಗೆ ಅಧಿಕಾರಿಯು. ದೀಕ್ಷೆಯಿಲ್ಲ ದವನು ಕಾಲನ ಶಿಕ್ಷೆಗೊಳಗಾಗಿ ಮೋಕ್ಷಹೊಂದದೆ ನರಕದಲ್ಲಿ ಬೀಳುವನು. ವಿಪ್ರ ನಾದರೂ ದೀಕ್ಷೆಯಿಲ್ಲದಿದ್ದರೆ ಅಪ್ರಯೋಜನ. ಅವನು ಚಾಂಡಾಲನಿಗಿಂತಲೂ ಕಡೆ. ದೀಕ್ಷೆಯಾದ ಚಾಂಡಾಲನು ವಿಪ್ರನಿಗಿಂತಲೂ ಅಧಿಕ. ದೀಕ್ಷೆಯು ತಾಪತ್ರಯ ಗಳನ್ನೂ ಸಂಸಾರದ ವಿಘ್ನಗಳನ್ನೂ ನಾಶಮಾಡಿ ಮೋಕ್ಷವನ್ನು ಕೊಡುವುದು. ಗುರುಮುಖದಿಂದ ಶರೀರದಲ್ಲಿ ವಿಭೂತಿಯನ್ನು ಉದ್ಧೂಳಿಸು, ರುದ್ರಾಕ್ಷಿಗಳನ್ನು ತೊಡು, ಪಂಚಾಕ್ಷರಿಯನ್ನು ಉಚ್ಚರಿಸು, ನಿನ್ನ ಪ್ರಾಣಕ್ಕೊಡೆಯನಾದ ಇಷ್ಟಲಿಂಗ ವನ್ನು ಧರಿಸು. ಹೀಗೆ ಮಾಡಿದರೆ ಮಾಯಾಸಂಗ ಬಿಟ್ಟು ಜನನಮರಣಗಳು ತೊಲಗಿ ಮೋಕ್ಷಪ್ರಾಪ್ತಿಯಾಗವುದು."

ಈ ನಿರೂಪವನ್ನು ಕೇಳಿ ಗೋವಿಂದಭಟ್ಟನು ಬಿನ್ನಯಿಸಿದ್ದೇನೆಂದರೆ:- "ಎಲುವು ನೆಣ ಬೆವರು ಮಾಂಸ ರಕ್ತ ತೊಗಲು ಕೂದಲುಗಳೆಂಬ ಸಪ್ತಧಾತುಗಳಿಂದಲೂ ವಾತ ಪಿತ್ತ ಕಫಗಳಿಂದಲೂ ಕೂಡಿ ಮಲಮೂತ್ರ ಕ್ರಿಮಿಕೀವುಗಳ ನಿಲಯವಾಗಿ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳ ಬೀಡಾಗಿ ದಿನದಿನಕ್ಕೂ ನಾಶ

ವಾಗುವಂಥ ಅಪವಿತ್ರ ಶರೀರದ ಮೇಲೆ ನಿರ್ಗುಣನಿರ್ವಿಕಾರವಾದ ಲಿಂಗವನ್ನು ಧರಿಸ ಬಹುದೇ ? ಜಲ ಪರಿಮಳ ವಸ್ತ್ರ ಮುಂತಾದ ಪದಾರ್ಥಗಳು ಸೋಂಕಿದ ಮಾತ್ರದಿಂದ ಅವುಗಳನ್ನು ಅಪವಿತ್ರ ಮಾಡುವ ಗುಣವುಳ್ಳ ಶರೀರದ ಮೇಲೆ ಪವಿತ್ರಲಿಂಗವನ್ನು ಧರಿಸಬಹುದೇ ? ಈಶ್ವರನನ್ನು ಸ್ತುತಿಸಬೇಕು. ತಪಸ್ಸಿನಿಂದ ದೇಹವನ್ನು ದಂಡಿಸಬೇಕು. ಇಷ್ಟವಸ್ತುವನ್ನು ನೆನೆಯಬೇಕು. ಮನಸ್ಸನ್ನು ಅಧೀನಲ್ಲಿಟ್ಟುಕೊಳ್ಳಬೇಕು. ಆ ಮೇಲೆ ಶಿವನನ್ನು ಪೀಠದಲ್ಲಿ ಸ್ಥಾಪಿಸಿ ಹೃದಯದಲ್ಲಿ ಧ್ಯಾನಿಸಿ ಚಿತ್ತವನ್ನು ಶಿವನಲ್ಲಿ ನೆಲೆಗೊಳಿಸಿ ಮಂತ್ರೋಕ್ತವಾಗಿ ಅವನನ್ನು ಪೂಜಿಸುವುದೇ ಶೈವಾಗಮಪದ್ಧತಿಯು. ಮಲಯುಕ್ತವಾಗಿರುವ ಅಂಗದಲ್ಲಿ ಇಷ್ಟಲಿಂಗವನ್ನು ಧರಿಸುವುದು ಯುಕ್ತವೇ ? "

ಎಂದ ಮಾತನ್ನು ಕೇಳಿ ಜಂಗಮರೂಪಿಯಾದ ಗುರುವು ಹೀಗೆಂದನು : "ಶೈವದಲ್ಲಿ ಶ್ರುತ ಅಶ್ರುತ ಎಂದು ಎರಡು ತೆರ. ಶ್ರುತ ಶೈವದಲ್ಲಿ ಶೈವ ಕಾಪಾಲ ಪಾಶುಪತ ಕಾಲಾಮುಖ (ಕಾಳಾಮುಖ) ಎಂಬ ನಾಲ್ಕು ಭೇದಗಳು. ಇವುಗಳಲ್ಲಿ ಆದಿಶೈವ ಮುಂತಾದ ಇತರ ಭೇದಗಳುಂಟು. ಈ ಎಲ್ಲವುಗಳಿಗಿಂತ ವೀರಶೈವವು ಮಿಗಿಲಾದದ್ದು. ಕೆಲವು ಮತಗಳಲ್ಲಿ ಜ್ಞಾನವೇ ಉಪಾಸ್ಯಸಾಧನವು. ಕೆಲವುಗಳಲ್ಲಿ ಸತ್ಕ್ರಿಯೆಯೇ ಇಂಥ ಸಾಧನವು. ಆದರೆ ವೀರಶೈವಮತದಲ್ಲಿ ಜ್ಞಾನಕ್ರಿಯಾ ಸಂಗವೇ ಇಂಥ ಸಾಧನವು. ಇದರ ವಿವರವು ಹೇಗೆಂದರೆ :- ಸದ್ಗುರುವು ತೋರಿದ ಲಿಂಗಮಾರ್ಗದ ತೇಜಸ್ಸು ಸ್ಥೂಲಶರೀರದಲ್ಲಿ ಇಷ್ಟಲಿಂಗರೂಪದಿಂದಲೂ ಸೂಕ್ಷ್ಮ ಶರೀರದಲ್ಲಿ ಪ್ರಾಣಲಿಂಗರೂಪದಿಂದಲೂ ಕಾರಣಶರೀರದಲ್ಲಿ ಭಾವಲಿಂಗರೂಪ ದಿಂದಲೂ ಸರ್ವಾಂಗಪೂರಣವಾಗಿರುವುದು. ಹೀಗೆ ಮೂದೆರವಾದ ಲಿಂಗವು ಇಂದ್ರಿಯಗಳ ನಿಮಿತ್ತ ಹೃದಯದಲ್ಲಿ ಮಹಾಲಿಂಗ, ಕಿವಿಯಲ್ಲಿ ಪ್ರಸಾದಲಿಂಗ, ಚರ್ಮದಲ್ಲಿ ಜಂಗಮಲಿಂಗ, ಕಣ್ಣಿನಲ್ಲಿ ಶಿವಲಿಂಗ, ನಾಲಿಗೆಯಲ್ಲಿ ಗುರುಲಿಂಗ, ಮೂಗಿನಲ್ಲಿ ಆಚಾರಲಿಂಗ ಎಂದು ಆರು ತೆರನಾಗಿಹುದು. ಇವುಗಳಲ್ಲಿ ಕಡೆಯ ಐದು ಜ್ಞಾನೇಂದ್ರಿಯಗಳು ಐದು ಕರ್ಮೇಂದ್ರಿಯಗಳ ಕೂಡ ಬೆಸುಗೆಯಾಗಿರುವುವು. ಇವುಗಳ ವಿಷಯ, ಮೂಲತತ್ವ, ಅಧಿಪತಿಗಳು ಕೆಳಗೆ ಬರೆದಂತೆ :

| ಜ್ಞಾನೇಂದ್ರಿಯ | ಕರ್ಮೇಂದ್ರಿಯ | ವಿಷಯ | ಮೂಲತತ್ವ | ಅಧಿಪತಿ |
|---|---|---|---|---|
| ಕಿವಿ | ವಾಕ್ಕು | ಶಬ್ದ | ಆಕಾಶ | ಈಶಾನ |
| ಚರ್ಮ | ಪಾಣಿ | ಸ್ಪರ್ಶ | ವಾಯು | ತತ್ಪುರುಷ |
| ಕಣ್ಣು | ಪಾದ | ರೂಪು | ಅಗ್ನಿ | ಅಘೋರ |
| ನಾಲಿಗೆ | ಗುಹ್ಯ | ರಸ | ಉದಕ | ವಾಮದೇವ |
| ಮೂಗು | ಪಾಯು | ಗಂಧ | ಪೃಥ್ವಿ | ಸದ್ಯೋಜಾತ |

ಈ ಜ್ಞಾನಕರ್ಮೇಂದ್ರಿಯಗಳೆರಡಕ್ಕೂ ಹೃದಯವೇ ಆಧಾರವಾಗಿ ಮಹಾಲಿಂಗ ಸ್ಥಾನವಾಗಿರುವುದು. ಈ ಷಡ್ವಿಧಲಿಂಗಗಳಲ್ಲಿ ದೇಹಿಯು ಐಕ್ಯನಾಗಿ ಅನುಭವ ಪಡೆಯುವುದು ಹೇಗೆಂದರೆ :

" ದೇಹಿಯು ಪೃಥ್ವೀತತ್ವದಲ್ಲಿ ನಿಂತು ಸುಚಿತ್ತವೆಂಬ ಹಸ್ತದಿಂದ ಗಂಧವನ್ನು ಸದ್ಭಕ್ತಿಯೊಳು ಆಚಾರಲಿಂಗಕ್ಕರ್ಪಿಸುವವನೇ ಭಕ್ತನು. ಉದಕತತ್ವದಲ್ಲಿ ನಿಂತು ಸುಬುದ್ಧಿಯೆಂಬ ಹಸ್ತದಿಂದ ರುಚಿಯನ್ನು ನೈಷ್ಠಿಕಾಭಕ್ತಿಯೊಳು ಗುರುಲಿಂಗ ಕ್ಕರ್ಪಿಸುವವನೇ ಮಹೇಶನು. ಅಗ್ನಿತತ್ವದಲ್ಲಿ ನಿಂತು ನಿರಹಂಕಾರ ಹಸ್ತದಿಂದ ವರ್ಣವನ್ನು ಅವಧಾನಭಕ್ತಿಯೊಳು ಶಿವಲಿಂಗಕ್ಕರ್ಪಿಸುವವನೇ ಪ್ರಸಾದಿಯು. ವಾಯುತತ್ವದಲ್ಲಿ ನಿಂತು ಸುಮನ ಹಸ್ತದಿಂದ ಸ್ಪರ್ಶವನ್ನು ಅನುಭಾವಭಕ್ತಿಯೊಳು ಜಂಗಮಲಿಂಗಕ್ಕರ್ಪಿಸುವವನೇ ಪ್ರಾಣಲಿಂಗಿಯು. ಆಕಾಶತತ್ವದಲ್ಲಿ ನಿಂತು ಸುಜ್ಞಾನವೆಂಬ ಹಸ್ತದಿಂದ ಶಬ್ದವನ್ನು ಆನಂದಭಕ್ತಿಯೊಳು ಪ್ರಸಾದ (ಪ್ರಾಣ) ಲಿಂಗ ಕ್ಕರ್ಪಿಸುವವನೇ ಶರಣನು. ಆತ್ಮತತ್ವದಲ್ಲಿ ನಿಂತು ಭಾವ ಹಸ್ತದಿಂದ ಸರ್ವೇಂದ್ರಿಯ ಸೊಗಸನ್ನು ಸಮರಸಭಕ್ತಿಯೊಳು ಮಹಾಲಿಂಗಕ್ಕರ್ಪಿಸುವವನೇ ಐಕ್ಯನು."

" ಷಡಕ್ಷರಮಂತ್ರದೊಳಗಿನ **ನ** ಕಾರವು ಆಚಾರಲಿಂಗವಾಗಿ ಆಧಾರಚಕ್ರದಲ್ಲಿ ರುವುದು. **ಮ** ಕಾರವು ಗುರುಲಿಂಗವಾಗಿ ಸ್ವಾಧಿಷ್ಠಾನಚಕ್ರದಲ್ಲಿರುವುದು. **ಶಿ** ಕಾರವು ಶಿವಲಿಂಗವಾಗಿ ಮಣಿಪೂರಕಚಕ್ರದಲ್ಲಿರುವುದು. **ವಾ** ಕಾರವು ಜಂಗಮ ಲಿಂಗವಾಗಿ ಅನಾಹತಚಕ್ರದೊಳಗಿರುವುದು. **ಯ** ಕಾರವು ಪ್ರಸಾದಲಿಂಗವಾಗಿ ವಿಶುದ್ಧಿಚಕ್ರದೊಳಗಿರುವುದು. **ಜ** ಕಾರವು ಮಹಾಲಿಂಗವಾಗಿ ಆಗ್ನೇಯಚಕ್ರ ದೊಳಗಿರುವುದು. ಈ ವರ್ಣಗಳೇ ಅನುಕ್ರಮವಾಗಿ ರಕ್ತ ಮಾಂಸ ಮೇದಸ್ಸು ತೊಗಲು ಮಜ್ಜೆ ಸರ್ವಾಂಗವಾಗಿಹವು. ಈ ರೀತಿ ದೇಹವು ಲಿಂಗಮಯವಾಗಿರುವು ದರಿಂದ ಅದು ಜಡವೆಂದಾಗಲೀ ಅಪವಿತ್ರವೆಂದಾಗಲೀ ಅನ್ನಬಹುದೇ? ಕಬ್ಬಿಣವು ಅಗ್ನಿಯ ಸಂಗದಿಂದ ಕಾಯ್ದು ನೀರು ಕುಡಿಯುವಂತೆ ದೇಹವು ಆತ್ಮನ ಸಂಯೋಗ ದಿಂದ ಅಹಂಕಾರಿಯಾಗಿ ಕಷ್ಟಬಡುತ್ತಿಹುದು. ಬಣ್ಣವಿಲ್ಲದ ಬಂಗಾರಕ್ಕೆ ಕೆಮ್ಮಣ್ಣು ಲೇಪಿಸಿ ಕಾಸಿದರೆ ಆ ಬಂಗಾರಕ್ಕೆ ಬಣ್ಣ ಬರುವಂತೆ ದೇಹವನ್ನು ಧರಿಸಿದ ಆತ್ಮನು ಸತ್ಕ್ರಿಯೆಗಳ ಸಂಯೋಗದಿಂದ ಭ್ರಮೆಯಳಿದು ಶಿವನಾಗುವನು. ದೇಹವೇ ಪಾಪ ಪುಣ್ಯಗಳಿಗೆ ಸಾಧನವು. ಇಂಥ ದೇಹದ ಮೇಲೆ ಕೈ ಬಗಲು ಎದೆ ಮುಖ ಅಮುಳ್ಳೈಕ್ಯ ಜಡೆ ಈ ಆರು ಸ್ಥಾನಗಳೊಳಗೆ ಯಾವುದಾದರೊಂದರಲ್ಲಿ ಲಿಂಗವನ್ನು ಧರಿಸಬಹುದು. ಪೂರ್ವದ ದೇವ ಮನು ಮುನಿ ಯಕ್ಷ ರಾಕ್ಷಸರು ತಮ್ಮಿಷ್ಟದಂತೆ ಬೇರೆ ಬೇರೆ ಸ್ಥಲ ಗಳಲ್ಲಿ ಲಿಂಗವನ್ನು ಸದಾಕಾಲ ಧರಿಸಿರುವರು."

ಈ ಸದ್ಬೋಧೆಯು ಗೋವಿಂದಭಟ್ಟನ ಮನಸ್ಸಿನಲ್ಲಿ ನಟ್ಟು ಚಿತ್ತವು ಶಾಂತ ವಾಗಿ ಲಿಂಗದ ಭ್ರಾಂತಿಯಿಂದ ಆನಂದಾಶ್ರುಗಳು ಸೂಸಹತ್ತಿದುವು. ಅವನು ಗುರು ವಿನ ಪಾದಕ್ಕೆ ಬಿದ್ದು ಕೈಮುಗಿದು ಈಗಲೇ ನನಗೆ ದೀಕ್ಷೆಯನ್ನು ಮಾಡಬೇಕೆಂದು ಬಿನ್ನವಿಸಲು, ಜಂಗಮವೇಷಧಾರಿಯಾದ ಗುರುವು ಅಮೃತಪ್ರಯೋಗಕಾಲದಲ್ಲಿ ಶಿಷ್ಯನ ಶರೀರ ಜೀವ ಆತ್ಮಗಳನ್ನು ಮಂತ್ರಮುಖದಿಂದ ಶುದ್ಧ ಮಾಡಿ ವಿಧ್ಯುಕ್ತವಾಗಿ ಅವನಿಗೆ ಲಿಂಗದೀಕ್ಷೆಯನ್ನು ಮಾಡಿ ತಾನೇ ಇಷ್ಟಲಿಂಗವಾಗಿ ರಮಿಸಿ ಗುರುಲಿಂಗ

ಜಂಗಮವು ಒಂದೇ ಎಂಬ ಶ್ರುತಿಯನ್ನು ಸಾರ್ಥಕಗೊಳಿಸಿದನು. ಆಮೇಲೆ ನಿನ್ನ ಹೆಂಡತಿಗೆ ನೀನು ದೀಕ್ಷೆಯನ್ನು ಮಾಡೆಂದು ಗುರುವು ಗೋವಿಂದಭಟ್ಟನಿಗೆ ಹೇಳಲಾಗಿ, ಅವನು ನಾನೇ ಹೀಗೆ ಮಾಡಬಹುದೇನೆಂದು ಕೇಳಲು, ಗುರುವು ಅಂದದ್ದು-''ಮಗನೇ, ಧನವನ್ನು ಜಂಗಮಕ್ಕೆ ಮನವನ್ನು ಲಿಂಗಕ್ಕೆ ತನುವನ್ನು ಗುರುವಿಗೆ ಅರ್ಪಿಸುವುದೇ ಶರಣರಿಗೆ ಉಚಿತವು. ಗಂಡನಿಗೆ ಹೆಂಡತಿಯು ತನ್ನ ಅಂಗವನ್ನು ಒಪ್ಪಿಸುವುದೇ ಯೋಗ್ಯವು. ಅದು ಕಾರಣ ನೀನು ನಿನ್ನ ಹೆಂಡತಿಗೆ ದೀಕ್ಷೆಯನ್ನು ಮಾಡಬಹುದು." ಹೀಗೆನ್ನಲಾಗಿ ಗುರುವಿನ ಅಪ್ಪಣೆಯ ಮೇರೆಗೆ ಗೋವಿಂದಭಟ್ಟನು ತನಗೆ ದೀಕ್ಷೆಮಾಡಿದ ರೀತಿಯಲ್ಲಿಯೇ ತನ್ನ ಹೆಂಡತಿಗೆ ದೀಕ್ಷೆಮಾಡಿ ಲಿಂಗವನ್ನು ಕೊಟ್ಟನು. ಅವರಿರ್ವರು ಹರುಷದಿಂದ ಗುರುವಿಗೆ ಕೈಮುಗಿದು ಅವನನ್ನು ಕೊಂಡಾಡಿದರು.

ತರುವಾಯ " ನಿಮ್ಮ ಶಿಷ್ಯನಾಗಿ ನನ್ನ ರೂಪು ಅಳಿಯಿತು, ನೀವು ಉಪದೇಶಿಸಿದ ಮಂತ್ರದಿಂದ ನನ್ನ ಕ್ರಿಯೆ ಅಳಿಯಿತು, ಈಗ್ಗೆ ನಾನು ಗೋವಿಂದನಾಮುವನ್ನು ಧರಿಸಿ ಜೀವಿಸಲಾರೆನು, ಮತ್ತೊಂದು ಒಳ್ಳೇ ಹೆಸರನ್ನು ನನಗೆ ಇಡಬೇಕು'' ಎಂದು ಗೋವಿಂದದೇವನು ಬಿನ್ನವಿಸಲು, ಗುರುವು ಅವನಿಗೆ ಶಂಕರದಾಸನೆಂದೂ ಅವನ ಹೆಂಡತಿಗೆ ಶಿವದಾಸಿಯೆಂದೂ ಹೆಸರಿಟ್ಟು ಕರೆದನು. ತರುವಾಯ ಶಂಕರದಾಸಿಮಯ್ಯನು ತನಗೊಂದು ಕಾಯಕವನ್ನು ನಿರೂಪಿಸಬೇಕೆಂದು ಕೇಳಲು, ಗುರುವು ಸೂಜಿಯ ಕಾಯಕವು ನಿನಗೆ ಯೋಗ್ಯವೆಂದು ಹೇಳಿ, ಬ್ರಾಹ್ಮಣನಿಂದ ಹೊಲೆಯನವರೆಗೆ ಹದಿನೆಂಟು ಜಾತಿಗಳ ರಚನೆಯನ್ನು ತಿಳಿಸಿ, ಚಿಪ್ಪಿಗರ ಮೂಲವನ್ನು ವಿಸ್ತರಿಸಿದನು. ಅದೆಂತೆನೆ :

''ಆದಿಯಲ್ಲಿ ಶೂನ್ಯವೆಂಬುದು ತಾನೇ ತಾನಾಗಿದ್ದು ಅದರಿಂದ ಶುದ್ಧ ಶಿವತತ್ವವು ಹುಟ್ಟಿತು. ಆ ಶಿವ ಪರಾಶಕ್ತಿಗಳಿಂದ ಸದಾಶಿವನು, ಆ ಸದಾಶಿವ ಆದಿಶಕ್ತಿಗಳಿಂದ ಮಹೇಶ್ವರ, ಆ ಮಹೇಶ್ವರ ಇಚ್ಛಾಶಕ್ತಿಗಳಿಂದ ಈಶ, ಆ ಈಶ ಜ್ಞಾನಶಕ್ತಿಗಳಿಂದ ಪಂಚಮುಖ ರುದ್ರ, ಆ ಪಂಚಮುಖರುದ್ರ ಕ್ರಿಯಾಶಕ್ತಿಗಳಿಂದ ವಿಷ್ಣು, ಆ ವಿಷ್ಣು ಲಕ್ಷ್ಮಿಯರಿಂದ ಬ್ರಹ್ಮ, ಆ ಬ್ರಹ್ಮ ಸರಸ್ವತಿಯರಿಂದ ಅತ್ರಿ ಮರೀಚಿ ಪುಲಸ್ತ್ಯ ಪುಲಹ ಕ್ರತು ಭೃಗು ದಕ್ಷ ಕಶ್ಯಪ ಆಂಗಿರಸರೆಂಬ ನವಬ್ರಹ್ಮರು ಹುಟ್ಟಿದರು. ಇವರು ಬ್ರಹ್ಮನ ಅನುಜ್ಞೆಯಿಂದ ಭೂಮಿ ಮೊದಲಾದ ಲೋಕಗಳನ್ನೂ ಸೋಮ ಸೂರ್ಯ ನಕ್ಷತ್ರಗಳನ್ನೂ ಭೂಮಿಯಲ್ಲಿ ನದಿ ಪರ್ವತ ಪಕ್ಷಿ ಮುಂತಾದವುಗಳನ್ನೂ ಎರಡೆರಡು ಜಾತಿಗಳಿಗೆ ಒಬೊಬ್ಬರು ಅಧಿಕರಾಗಿ ಹದಿನೆಂಟು ಜಾತಿಗಳ ಜನರನ್ನೂ ಹುಟ್ಟಿಸಿದರು.

ಇವರಲ್ಲಿ ಅತ್ರಿಬ್ರಹ್ಮನು ಚಿಪ್ಪಿಗವಂಶಕ್ಕೆ ಮೂಲಪುರುಷನು. ಅವನು ದೇಹಿಯಾದ ಜೀವಾತ್ಮನನ್ನು ಸೂಜಿಯನ್ನು ಮಾಡಿ ಮಾಯಾಪಾಶಗಳನ್ನು ಸೂತ್ರ ಮಾಡಿ ಕಾಲತ್ರಯಗಳೆಂಬ ಕತ್ತರಿಯಿಂದ ಭವಬಂಧವಸ್ತ್ರಗಳನ್ನು ಕತ್ತರಿಸುವನು.

ಮೋಹವೆಂಬ ಸರಿಯನ್ನು ಹಚ್ಚಿ ಅಜ್ಞಾನವೆಂಬ ಹತ್ತಿಯನ್ನು ಅಂತರಂಗದೊಳಗೆ ತುಂಬುವನು. ತಲೆಗೆ ಕಿರೀಟವಾಗುವಂತೆ ಚಿಪ್ಪುಗಳನ್ನು ಕೂಡಿಸಿ ಆಸೆಗಳೆಂಬ ಕಸಿಗಳಿಂದ ಕಟ್ಟುವನು. ಸಪ್ತಧಾತುಗಳೆಂಬ ಪಟ್ಟೆಗಳಲ್ಲಿ ಆಯುಃಕರ್ಮಗಳೆಂಬ ಎಳೆಗಳನ್ನು ಸೇರಿಸಿ ಆಕಾಶರೂಪವಾದ ಗೂಡಾರವನ್ನು ಮಾಡಿ ಕನಕಾದ್ರಿಯೆಂಬ ಕಂಬದಿಂದ ನಿಲ್ಲಿಸುವನು. ಇಂಥ ಚಿತ್ರಪತ್ರವನ್ನು ಹೊಲಿಯುವ ಅತ್ರಿಬ್ರಹ್ಮನ ವಂಶಜರೇ ವಸ್ತ್ರಭಿನ್ನಕರೆಂಬ ಸೂಜಿಯ ಕಾಯಕದವರು ಈ ಭೂಲೋಕದಲ್ಲಿ ಪ್ರಸಿದ್ಧರಾಗಿರುವರು. ನೀನಾದರೂ ತನುಮನಧನಗಳನ್ನು ತ್ರಿಲಿಂಗಗಳಿಗೆ ಅರ್ಪಿಸಿ ನಿರ್ಮಲವಾದ ಪದಾರ್ಥಗಳನ್ನು ಲಿಂಗಮುಖದಿಂದ ಭೋಗಿಸುತ್ತ ವೀರಾಗಮದಲ್ಲಿ ಹೇಳಿದ ಪದ್ಧತಿಯಂತೆ ನಡೆ. ಅಹಂಭಾವವನ್ನು ಬಿಡು. ದಾಸೋಹಿಯಾಗು. ಲಿಂಗದೇಹಿಗಳೆಲ್ಲರನ್ನು ಶಿವಲಿಂಗವೆಂದೇ ತಿಳಿ. ಭಸಿತವನ್ನು ಕ್ರಮದಿಂದ ಧರಿಸು. ವೃಡಭಕ್ತರು ಮನೆಗೆ ಬಂದರೆ ನೀನು ಶಿವಪೂಜೆಜಪಗಳನ್ನು ಮಾಡುತ್ತಿದ್ದರೂ ಅವುಗಳನ್ನು ಬಿಟ್ಟು ಅವರನ್ನು ಇದಿರುಗೊಂಡು ಸತ್ಕರಿಸು. ಪರಧನವನ್ನು ಹಿಡಿಯಬೇಡ. ಸುಳ್ಳಾಡಬೇಡ. ಹಿಡಿದ ನೇಮವನ್ನು ನಡೆಸು. ಸದ್ಭಕ್ತಸಂಗವನ್ನು ಬಿಡಬೇಡ. ಈರೀತಿ ಆಚರಿಸುತ್ತ ನೀನು ನಿನ್ನಿಷ್ಟಲಿಂಗವನ್ನು ಪೂಜಿಸುತ್ತಿದ್ದರೆ ನಿನಗೆ ಕಾಮ್ಯಾರ್ಥಮೋಕ್ಷಾರ್ಥಗಳು ಸಾಧಿಸುವುವು. ಲಿಂಗವು ತತ್ವಾದಿಮೂಲವು ಜ್ಞಾನಸ್ವರೂಪವು ಪರಬ್ರಹ್ಮವು. **ಲಿ** ತ್ವವು ನಿಃಕಲಸ್ವರೂಪವು, **ಗ** ತ್ವವು ಸಕಲಸ್ವರೂಪವು, ಮಧ್ಯಬಿಂದುವು ಸಕಲನಿಃಕಲಸ್ವರೂಪವು. ಇವು ಮೂರೂ ಕೂಡಿ ಮಹಾಲಿಂಗವೆನಿಸಿ ಸತ್ವರಾಜಸತಾಮಸಗುಣಗಳನ್ನು ಕಳೆಯುವುವು. ಲಿಂಗವೇ **ಅ** ಕಾರದಿಂದ **ಹ** ಕಾರದ ವರೆಗೆ ಸರ್ವಾಕ್ಷರಾತ್ಮಕವಾಗಿ ತ್ರಿಜಗದ್ಭರಿತವಾಗಿ ತತ್ವಮಸಿಪದವಾಗಿರುವುದು. ಅದರಲ್ಲಿ ನಿನ್ನ ಕಾಯವನ್ನು ಬೆರಿಸು. ಕಾಣಲಾರದ ನಿನ್ನ ವದನವು ಕೈಯಲ್ಲಿ ಕನ್ನಡಿಯನ್ನು ಹಿಡಿದು ನೋಡಿದರೆ ಕಾಣುವಂತೆ ಮಾಯಾಚ್ಛಾದಿತವಾದ ಜ್ಞಾನದೃಷ್ಟಿಗೆ ಕಾಣಿಸದ ನಿನ್ನ ನಿಜಸ್ವರೂಪವು ಲಿಂಗವನ್ನು ಚೆನ್ನಾಗಿ ನಿರೀಕ್ಷಿಸಲು ಕಾಣಬರುವುದು. ಮುಖದಲ್ಲಿ ಹತ್ತಿದ ಮಲಿನವನ್ನು ಮುಕರದಲ್ಲಿ ಕಂಡು ಒರಸುವಂತೆ ಆತ್ಮದೊಳಗಿದ್ದ ಅಜ್ಞಾನವೆಂಬ ಮಲಿನವನ್ನು ಲಿಂಗದಲ್ಲಿ ಕಂಡು ನಿರಹಂಕಾರ ಹಸ್ತದಿಂದ ಹೋಗಲಾಡಿಸಬಹುದು. ಎರಡು ದೀಪಗಳ ಕಾಂತಿಗಳು ಒಂದರೊಳಗೊಂದು ಕೂಡಿ ಒಂದೇಯಾಗುವಂತೆ ನಿನ್ನ ಚೇತನವು ಲಿಂಗಚೇತನದಲ್ಲಿ ಬೆರೆದು ಭಿನ್ನಭಾವವು ಅಳಿದರೆ ಅಕ್ಷಯ ಸಂಪತ್ತು ದೊರಕುವುದು. ದೃಶ್ಯಾಂಜನವನ್ನು ಕೈಯಲ್ಲಿ ಹಿಡಿದರೆ ಹೇಗೆ ಸರ್ವಾವಯವಗಳು ಕಾಣಿಸಲಾರವೋ ಅದರಂತೆ ಪ್ರಾಣದಲ್ಲಿ ಲಿಂಗವನ್ನು ಧರಿಸಿದರೆ ಕಾಲ ಕರ್ಮಗಳು ಕಾಣಿಸಲಾರವು. ಕಾರಣ ಇಷ್ಟಲಿಂಗದಲ್ಲಿಯೇ ಪ್ರಾಣವನ್ನು ನಿಲ್ಲಿಸು."

ಹೀಗೆ ನಿತ್ಯವೂ ಲಿಂಗಾಂಗದೊಳಿರೆಂದು ಉಪದೇಶಿಸಿ ಜಡೆಯ ಶಂಕರನು ತನ್ನ ಶಿಷ್ಯನ ಅಪ್ಪಣೆ ಪಡೆದು ನವಿಲೆಗೆ ಮರಳಿದನು.

ಆ ಮೇಲೆ ಶಂಕರದಾಸಿಮಯ್ಯನಿಗೆ ಜಂಗಮಾರ್ಚನೆ ಶಿವಶರಣರ ಸಂಗ ಅನುಭವಗೋಷ್ಠಿ ಲಿಂಗನಿಷ್ಠೆ ಪಾದೋದಕಪ್ರಸಾದಗಳ ನಿಯಮ ತತ್ವವಿಚಾರ ಇವೇ ಅಂಗವಾಗಿ ಅವನು ದಿನಾಲು ನವಿಲೆಗೆ ಹೋಗಿ ಜಡೆಯ ಶಂಕರನ ಪೂಜೆಯನ್ನು ಅತ್ಯಂತ ಭಕ್ತಿಯಿಂದ ಮಾಡಿ ಬರತೊಡಗಿದನು. ಒಂದು ದಿನ ಅವನು ನವಿಲೆಗೆ ಹೋಗುವ ಸಮಯದಲ್ಲಿ ಸಿಡಿಲುಮಿಂಚುಗಳಿಂದಲೂ ಬಿರುಗಾಳಿಯಿಂದಲೂ ಕೂಡಿ ಬಲುಮಳೆ ಹೊಡೆಯಲಾಗಿ ದಾರಿಯಲ್ಲಿ ಹಿರಿಹೊಳೆಯು ಎರಡೂ ದಂಡೆತುಂಬ ಹರಿಯ ಹತ್ತಿತು. ಅದನ್ನು ಲಕ್ಷಿಸದೆ ಶಂಕರದಾಸಿಮಯ್ಯನು ಶಂಕರನ ನೆನೆಯುತ್ತ ಸಾಗಲು, ಉದಕವು ಬಯಲಾಯಿತು. ಅವನು ದೇವಾಲಯವನ್ನು ಸೇರಿ ಪೂಜೆ ಮಾಡಿ ತಿರುಗಿ ಬಂದು ಯೋಗನಿದ್ರೆಯಲ್ಲಿರುವಾಗ ಶಂಕರನು ಅವನಿಗೆ ಸ್ವಪ್ನದಲ್ಲಿ ಗೋಚರಿಸಿ, "ಮಗನೆ, ನಿನ್ನ ಸದ್ಭಕ್ತಿಗೆ ಸರಿಯಿಲ್ಲ, ನೀನು ರುದ್ರಗಣದವನಲ್ಲದೆ ಮನುಷ್ಯನಲ್ಲ, ಕಂದಶಿಲೆಯನ್ನು ಬಿಟ್ಟು ನವಿಲೆಗೆ ಬಂದು ಸುಖದಿಂದಿರು, ನಾನು ನಿನಗೊಂದು ವರವನ್ನು ಪಾಲಿಸುವೆನು" ಎಂದು ಹೇಳಿ ಹೋದನು. ದಾಸಿಮಯ್ಯನು ಎಚ್ಚತ್ತು ತಾನು ಕನಸಿನಲ್ಲಿ ಕಂಡ ಸಂಗತಿಯನ್ನು ತನ್ನ ಹೆಂಡತಿಗೆ ಹೇಳಿ ಮುಂಜಾನೆ ಶಿವಪೂಜೆಯನ್ನು ಮಾಡಿ, ಅಲ್ಲಿಯ ಭಕ್ತಜನರ ಅಪ್ಪಣೆಯನ್ನು ಪಡೆದು ಹೆಂಡತಿಸಹಿತ ನವಿಲೆಗೆ ಹೋದನು. ಎಂದಿನಂತೆ ಅವನು ಶಂಕರನ ಪೂಜೆ ಮಾಡುವ ಕಾಲದಲ್ಲಿ ಒಂದು ದಿವಸ "ನಿನಗೆ ಹಿತವಾಗುವ ವರವನ್ನು ನಾಳೆ ಕೊಡುವನೆಂ"ಬ ವಾಣಿಯಾಯಿತು. ಅದನ್ನು ಕೇಳಿ ದಾಸಿಮಯ್ಯನು "ದೇವಾ, ಪರಸಮಯಗಳನ್ನು ಧೂಳಿಪಟಮಾಡಿ ಸುಡುವ ಹಣೆಗಣ್ಣನ್ನು ದಯಪಾಲಿಸು" ಎಂದು ಬೇಡಿಕೊಂಡು ತನ್ನ ಬಿಡಾರಕ್ಕೆ ಬಂದನು.

ಈ ಸುದ್ದಿಯನ್ನು ಕೇಳಿ ಮರುದಿವಸ ನೆರೆಹೊರೆಯ ಗ್ರಾಮದ ಭಕ್ತರು ಈ ಸಂಭ್ರಮವನ್ನು ನೋಡಬೇಕೆಂದು ಗುಂಪುಗುಂಪಾಗಿ ಕೂಡಿದರು. ದಾಸಿಮಯ್ಯನು ಮುಂಜಾನೆ ಜಳಕ ಮಾಡಿ ವಿಧ್ಯುಕ್ತವಾಗಿ ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ ಇಷ್ಟಲಿಂಗಪೂಜೆಯನ್ನು ತೀರಿಸಿ ಭಕ್ತಸಮೂಹದೊಡನೆ ಜಡೆಯ ಶಂಕರನ ದೇವಾಲಯಕ್ಕೆ ಬಂದು ಅಲ್ಲಿಯ ಲಿಂಗಕ್ಕೆ ಮೆಯ್ಯಿಕ್ಕಿ ಅಭಿಷೇಕವನ್ನುಮಾಡಿ ಪ್ರಣವ ಪಂಚಾಕ್ಷರಿಯನ್ನು ಜಪಿಸುತ್ತ ಸಮಾಧಿಸ್ಥನಾದನು. ಆ ಸಮಯದಲ್ಲಿ ಕೋಟಿಸೂರ್ಯ ಪ್ರಕಾಶದ ರಾಶಿಯೋ ಎಂಬಂತೆ ಲಿಂಗಮಧ್ಯದಲ್ಲಿ ಈಶ್ವರನು ಪ್ರತ್ಯಕ್ಷನಾಗಿ ಕರುಣೆಯಿಂದ ದಾಸಿಮಯ್ಯನನ್ನು ಬಿಗಿದಪ್ಪಿ ತನ್ನ ಹಣೆಯನ್ನು ಅವನ ಹಣೆಗೆ ತಿಕ್ಕಲು ಅಲ್ಲಿ ಹೊಸ ನೇತ್ರವು ಒಡಮೂಡಿತು. ಭ್ರಮರಧ್ಯಾನದಿಂದ ಕೀಟವು ಭ್ರಮರವಾಗುವಂತೆ ನಿಟಿಲಾಂಬಕನ ಧ್ಯಾನದಿಂದ ಶರಣನು ನಿಟಿಲನಯನನಾಗಿ ಕಲಿಯುಗದ ವೀರಭದ್ರನಂತೆ ಶೋಭಿಸಿದನು.

ಮುಂದೆ ಅವನು ನೆರೆಹೊರೆಯ ಅನ್ಯದೇವತೆಗಳನ್ನು ಸಿಟ್ಟಿನಿಂದ ನೋಡಲು ಅವನ ಹಣೆಗಣ್ಣಿನ ಉರಿಯು ಎಲ್ಲ ದಿಕ್ಕುಗಳಲ್ಲಿ ಹಬ್ಬಿ ಸುಡಲಾರಂಭಿಸಿತು. ಇದನ್ನು

ನೋಡಿ ಶಂಕರನು ತನ್ನ ಭಕ್ತನ ಬಳಿಗೆ ಬಂದು, "ನಿಷ್ಕಾರಣವಾಗಿ ನೀನು ಹೀಗೆ ಕೋಪ ಮಾಡಬೇಡ, ನಂದಿಯ ಮುಖದಂತಿರುವ ಆಚ್ಛಾದನವನ್ನು ನಿನ್ನ ಹಣೆಗೆ ಸೇರಿಸುತ್ತೇನೆ, ಎದುರು ವಾದಿಸಿದವರ ಮೇಲೆ ಈ ಆಚ್ಛಾದನವನ್ನು ತೆಗೆದು ಹಣೆಗಣ್ಣಿನ ಪ್ರಯೋಗ ಮಾಡು, ಅವರು ಶರಣು ಬಂದರೆ ಸುಮ್ಮನಿರು," ಎಂದು ಬುದ್ಧೀ ಹೇಳಿದನು. ಆಗ್ಗೆ ದಾಸಿಮಯ್ಯನು ತನ್ನ ಕಾವಲಿಗೆ ಒಬ್ಬ ಗಣನಾಥನನ್ನು ಬೇಡಲು, ಜಡೆಯ ಶಂಕರನು ವಕ್ತ್ರಪಾದಗಣೇಶನೆಂಬುವನನ್ನು ಅವನಿಗೆ ಕೊಟ್ಟು ತಾನು ಲಿಂಗದಲ್ಲಿ ಅಡಗಿದನು. ವಕ್ತ್ರಪಾದಗಣೇಶನು ಶರಣರ ಮನೆಗಳಲ್ಲಿ ಐಮಾನಕ್ಕಿಂತ ಹೆಚ್ಚಾಗದಂತೆ ಭಿಕ್ಷವನ್ನು ತರುತ್ತಿದ್ದನು. ಅದರಿಂದ ಗಣೇಶ ತಾನು ತನ್ನ ಹೆಂಡತಿ ಬಂದಂಥ ಬಕ್ತರು ತೃಪ್ತಿಹೊಂದುತ್ತಿದ್ದರು. ತನ್ನ ಸೂಜಿಯ ಕಾಯಕದಿಂದ ಬಂದ ಹಣವನ್ನು ವಸ್ತ್ರ ಮುಂತಾದ ಮೇಲುವೆಚ್ಚಕ್ಕೆ ಉಪಯೋಗಿಸುತ್ತ ದಾಸಿಮಯ್ಯನು ಕಾಲ ಕಳೆಯುತ್ತಿದ್ದನು. ಅನ್ಯಮತಗಳ ಸುಳುವು ತಗ್ಗಿ ವೀರಶೈವದ ಪ್ರಸಾರವಾಗಹತ್ತಿತು.

ಹೀಗಿರುತ್ತೊಂದು ದಿವಸ ದಾಸಿಮಯ್ಯನು ಶಂಕರನ ಆಲಯಕ್ಕೆ ಬಂದು ಲಿಂಗಭ್ರಾಂತಿಯೊಳಗಿರುವ ಸಮಯದಲ್ಲಿ ಶಂಕರನು ಅವನಿಗೆ ನಿರೂಪಿಸಿದ್ದೇನೆಂದರೆ- "ಮಗನೇ ಕೇಳು. ಮುದನೂರೊಳಗೆ ದೇವರದಾಸಿಮಯ್ಯನೆಂಬ ಶಿವಭಕ್ತ ಶಿರೋಮಣಿಯು ಇರುವನು. ಅವನು ಶಿವನನ್ನು ಮೆಚ್ಚಿಸಿ ತವನಿಧಿಯನ್ನು ಪಡೆದಿರುವನು. ಇದನ್ನು ಎರಡನೆಯುವರಾರೂ ಪಡೆದಿಲ್ಲವೆಂದು ತನ್ನನ್ನು ತಾನೇ ಹೊಗಳಿಕೊಳ್ಳುವ ಗುಣವೊಂದು ಅವನಲ್ಲುಂಟು. ನೀನು ಅವನಲ್ಲಿಗೆ ಹೋಗಿ ಅವನ ಅಹಂಕಾರವನ್ನು ಬಿಡಿಸು." ಈ ಮಾತನ್ನು ಕೇಳಿ ದಾಸಿಮಯ್ಯನು ಶಂಕರನ ಅಪ್ಪಣೆ ಪಡೆದು ತನ್ನ ಸತಿ ವಕ್ತ್ರಪಾದಗಣವರ ಭೂತಗಣ ಮೊದಲಾದವರನ್ನು ಕೂಡಿಕೊಂಡು ಸಂಭ್ರಮದಿಂದ ಹೊರಟು ಮುದನೂರ ಸಮೀಪಕ್ಕೆ ಬರಲ, ಅಲ್ಲಿಂದ ತಲೆಯ ಮೇಲೆ ಕುದುರೆ ಮೊದಲಾದ ವಾಹನಗಳ ಮೇಲೆ ಬಂಡಿಗಳ ಮೇಲೆ ಬತ್ತದ ಹೇರುಗಳನ್ನು ಹೇರಿಕೊಂಡು ತಂಡತಂಡದಿಂದ ಬರುವ ಜನರನ್ನು ಕಂಡು ಆಶ್ಚರ್ಯಪಡುತ್ತ ಮುಂದೆ ನಡೆದನು. ಇವನ ಬರವನ್ನು ಕೇಳಿ ದೇವರದಾಸಿಮಯ್ಯನು ತನ್ನೂರ ಭಕ್ತರ ಸಹಿತ ಸಂಭ್ರಮದಿಂದ ಇವನನ್ನು ಇದಿರುಗೊಂಡು ರಾಮನಾಥನ ಗುಡಿಗೆ ಕರೆದುಕೊಂಡು ಹೋದನು. ಶಂಕರದಾಸಿಮಯ್ಯನು ಅಲ್ಲಿಯೇ ತನ್ನ ಬಿಡಾರವನ್ನು ಮಾಡಿ ತನ್ನೊಡನೆ ಬಂದವರನ್ನು ಆ ಪುರವನದಲ್ಲಿಳಿಸಿ ದೇವರದಾಸಿಮಯ್ಯನನ್ನು ಹತ್ತರ ಕುಳ್ಳಿರಿಸಿಕೊಂಡು ಅನುಭವಗೋಷ್ಠಿಯಲ್ಲಿರುವ ಸಮಯದಲ್ಲಿ, ಶಿವದಾಸಿಯು ವಕ್ತ್ರಪಾದನಿಗೆ "ಮಗನೇ, ಧಾನ್ಯದ ಬಿಕ್ಷಕ್ಕೆ ಹೋಗು, ಎಲ್ಲರು ಆಯಾಸದಿಂದ ಬಳಲಿರುವರು, ಬೇಗ ಬಾ" ಎಂದ ನುಡಿಯನ್ನು ಕೇಳಿ, ದೇವರದಾಸಿಮಯ್ಯನು ಈ ಸದ್ಭಕ್ತನಿಗೆ ಈ ರೀತಿ ತೊಂದರೆಯಾಗುವುದು ಉಚಿತವಲ್ಲವೆಂದು ಮನದಲ್ಲಿ ಚಿಂತಿಸಿ ಅಂದದ್ದು - "ಬೇಡವಯ್ಯಾ, ನೀವು ಧಾನ್ಯವನ್ನು ಬೇಡಿ ತರುವ

ಪ್ರಯಾಸ ಮಾಡಿಕೊಳ್ಳಬೇಡಿರಿ. ನಮ್ಮೂರಲ್ಲಿರುವತನಕ ನಿಮಗೆ ಬತ್ತವನ್ನು ಬಂಡಿಯಲ್ಲಿ ಹೇರಿ ಕಳಿಸುವೆನು. ಶಿವನನ್ನು ಮೆಚ್ಚಿಸಿ ಹಣೆಗಣ್ಣನ್ನು ಪಡೆದಿರುವುದರಿಂದೇನು ಪ್ರಯೋಜನ ? ”

ಇದನ್ನು ಕೇಳಿ ಶಂಕರದಾಸಿಮಯ್ಯನು ಮುಗುಳ್ನಗೆಯಿಂದ ನುಡಿದದ್ದೇನೆಂದರೆ - “ ನಾವು ತಿರಿದುಂಬುವವರು. ನೀವು ಇದ್ದುಳ್ಳವರೆಂದು ನಿಮ್ಮ ಗ್ರಾಮಕ್ಕೆ ಬಂದಿರುವೆವು. ಹೀಗೆ ನಮ್ಮ ದಾರಿದ್ರ್ಯವನ್ನು ಕಳೆಯುವೆವೆಂದು ನೀವೆಂದರೆ ಬೇಡೆನ್ನಬಹುದೇ ? ಶಿವನನ್ನು ಮೆಚ್ಚಿಸಿ ನೀವು ತವನಿಧಿಯನ್ನು ಪಡೆದುದನ್ನು ಜಗವೆಲ್ಲ ಬಲ್ಲುದು. ಅದನ್ನು ಎರಡನೆಯವರಿಗೆ ಕೊಡುವ ಗುಣವು ಹೆಚ್ಚಿನದಲ್ಲವೇ ? ನೀವು ನಮಗೆ ಬತ್ತವನ್ನು ಕೊಡುತ್ತೇವೆಂದು ಹೇಳಿದ್ದೇ ಸಾಕು. ನಮಗೆ ಅದು ಬಂದಂತಾಯಿತು. ಬೇರೆ ಕೊಡಬೇಕೇ ? ” ಎಂದು ಹೇಳಿ ದೇವರದಾಸಿಮಯ್ಯನಿಗೆ ವಂದಿಸಿ ಕಳುಹಿಸಿಕೊಟ್ಟನು.

ಶಂಕರದಾಸಿಮಯ್ಯನು ಆಡಿದ ವ್ಯಂಗ್ಯ ಮಾತುಗಳನ್ನು ಕೇಳಿ ದೇವರದಾಸಿಮಯ್ಯನು ನಾಚಿ ಚಿಂತಿಸುತ್ತ ತಲೆ ಕೆಳಗೆ ಮಾಡಿಕೊಂಡು ಕಾಂತಿಹೀನನಾಗಿ ಬಂದುದನ್ನು ನೋಡಿ ಅವನ ಹೆಂಡತಿಯಾದ ದುಗ್ಗಳೆಯು ಹೀಗೇಕಾಯಿತೆಂದು ಪರಿಪರಿಯಾಗಿ ಕೇಳಲು, ಅವನು ನಡೆದ ಸಂಗತಿಯನ್ನು ಅರುಹಿದನು. ಅದಕ್ಕೆ ಆವಳು ಅಂದದ್ದು - “ ಚಂದ್ರನಿಗೆ ಶೈತ್ಯೋಪಚಾರವನ್ನು ಮಾಡುವವನಂತೆ ಕ್ಷೀರ ಸಮುದ್ರದಲ್ಲಿ ಒಂದು ಅದ್ದನ ಹಾಲು ಕೂಡಿಸುವವನಂತೆ ವೃಡಭಕ್ತರಿಗೆ ಧಾನ್ಯವನ್ನು ಕೊಡಹೋಗುವುದು ನಿಮಗುಚಿತವೇ ? ಶಿವಪೂಜಕರು ಬೇಡುವವರೇ ? ಅವರು ನಾಡಾಡಿ ಮಾನವರೋ ? ಅವರಲ್ಲಿ ಹೀಗೆ ಮಾತಾಡಬಹುದೇ ? ಈಶ್ವರನಲ್ಲ ಮೋಕ್ಷವನ್ನು ಬೇಡದೆ ನಾಲ್ಕು ಕಾಳು ಬತ್ತವನ್ನು ಬೇಡಿಕೊಂಡವರಿಗೆ ಇಂಥ ಅಹಂಕಾರವೇಕೆ ? ” ಹೀಗೆ ದುಗ್ಗಳೆಯು ಪತಿಗೆ ಹೇಳುತ್ತಿರುವ ಸಮಯದಲ್ಲಿ ವಕ್ರಪಾದ ಮುನಿಯು ಬಂದು ಧಾನ್ಯವನ್ನು ಬೇಡಿದನು. ದೇವರದಾಸಿಮಯ್ಯನೂ ಅವನ ಹೆಂಡತಿಯೂ ಗಣವರನ ಹತ್ತರ ಹೋಗಿ ಅವನ ಪಾದಗಳಿಗೆ ನಮಸ್ಕರಿಸಿ ತಮ್ಮ ತವನಿಧಿಯು ಬಯಲಾದ ಸಂಗತಿಯನ್ನು ತಿಳಿಸಿದರು. ಅದನ್ನು ಕೇಳಿ ಗಣೇಶನು ಮರಮರನೆ ಮರುಗಿ ಕಿವಿಗಳನ್ನು ಮುಚ್ಚಿಕೊಂಡು “ ಶಿವ ಶಿವಾ, ಭಕ್ತಾಗ್ರಗಣ್ಯರಾದ ನೀವು ಶಿವಶರಣರಿಗೆ ಹೀಗೆ ಆಡಬಹುದೇ ? ಅಹಂಕಾರದಿಂದ ಹಿಂದೆ ಯಾರ ಯಾರ ಗತಿ ಏನೇನಾಯಿತೆಂಬುದು ನಿಮಗೆ ಗೊತ್ತಿಲ್ಲವೇ ? ಶಂಕರದಾಸಿಮಯ್ಯನು ಕಂತುಹರನ ಅವತಾರವಲ್ಲವೇ.? ಗಿರಿಸುತೆಯ ಶಾಪದೊಳು ಪರಮೇಶ್ವರನು ಚಿಪ್ಪಿಗನಾಗಿ ಹುಟ್ಟಿರುವನು. ಮನುಜರಿಗೆ ಇಂಥ ಮಹತ್ವವುಂಟೇ ? ” ಎಂದುದನ್ನು ಕೇಳಿ ದೇವರದಾಸಿಮಯ್ಯನು ಹರನಿಗೆ ಪಾರ್ವತಿಯ ಶಾಪವಾದ ಕಥೆಯನ್ನು ಹೇಳಬೇಕೆಂದು ಬೇಡಿಕೊಂಡನು. ಆ ಮೇಲೆ ಗಣವರನು ಹೀಗೆ ಹೇಳಿದನು :-

“ ಒಂದು ದಿನ ಕೈಲಾಸದಲ್ಲಿ ಪರಮೇಶ್ವನು ಪಾರ್ವತಿಯನ್ನು ನಿನ್ನ ಮನಸಿನ ಬಯಕೆಯೇನೆಂದು ಕೇಳಲು, ಪಾರ್ವತಿಯು ಭೂಲೋಕದೊಳಗಿರುವ ಪುಣ್ಯಕ್ಷೇತ್ರ ತೀರ್ಥ ಮೊದಲಾದವುಗಳನ್ನು ನೋಡುವ ಇಚ್ಛೆಯಾಗಿರುವುದೆಂದು ಅರಿಕೆ ಮಾಡಿಕೊಂಡಳು. ಕೂಡಲೆ ಈಶ್ವರನು ಪಾರ್ವತಿಸಹವಾಗಿ ನಂದೀಶನನ್ನೇರಿ ದೇವಸಮೂಹದೊಡನೆ ಭೂಲೋಕಕ್ಕಿಳಿದು ಸಂಚರಿಸುತ್ತ ಬರುವಾಗ್ಗೆ ಒಂದು ಅಡವಿಯಲ್ಲಿ ವ್ಯಭಿಚಾರದಿಂದ ಹತರಾದ ಸ್ತ್ರೀಪುರುಷರನ್ನು ಪಾರ್ವತಿಯು ನೋಡಿ ಇವರಾರೆಂದು ಈಶ್ವರನನ್ನು ಕೇಳಿದಳು. ಅದಕ್ಕೆ ಅವನು “ ಜಾರಕರ್ಮದಿಂದ ಸತ್ತ ಇವರನ್ನು ನೋಡಬಾರದು, ಇವರನ್ನು ನೋಡಿದರೆ ಅಥವಾ ನೆನೆದರೆ ಘೋರಪಾತಕವು ” ಎಂದು ಹೇಳಿದರೂ ಪಾರ್ವತಿಯು, “ ನಿನಗೆ ಇದರ ಸಂಕಲ್ಪವೇಕೆ? ಪಾಪಪುಣ್ಯಗಳು ಮನೋವಿಕಾರವುಳ್ಳ ಮನುಷ್ಯರಿಗಲ್ಲದೆ ನಿನಗುಂಟೇ ? ನಿನ್ನರ್ಧಾಂಗಿಯಾದುದರಿಂದ ನನಗುಂಟೇ? ನಾನು ಪಾಪಕ್ಕಂಜುವಳಲ್ಲ, ಹೇಳಬೇಕು” ಎಂದು ಆಗ್ರಹ ಮಾಡಿದಳು. ಈಶ್ವರನು ನಾಳೆ ನಿನಗೆ ತಿಳಿಸುವೆನೆಂದು ಹೇಳಿ ಮುಂದೆ ಸಾಗಿ ಅವರು ಮಾಗಡವೆಂಬ ಕ್ಷೇತ್ರಕ್ಕೆ ಬಂದರು. ಈಶ್ವರನು “ ಇದು ಮಹಾಕ್ಷೇತ್ರವು, ಇದರಲ್ಲಿ ಐದು ದಿವಸ ಉಳಿಯದ ಹೊರ್ತು ಫಲವಿಲ್ಲ, ನಾನು ದೇಶಾಂತರಕ್ಕೆ ಹೋಗಿ ಬರುವೆನು ” ಎಂದು ಪಾರ್ವತಿಗೆ ಹೇಳಿ ಹೋಗಿ ರಾತ್ರಿಯಲ್ಲಿ ಪಾರ್ವತಿಯು ಉಡುವ ಹೆಚ್ಚಿನ ವಸ್ತ್ರಗಳನ್ನು ಇಲಿಗಳು ಕಡಿದು ಕತ್ತರಿಸುವಂತೆ ಮಾಡಿದನು. ಇದನ್ನು ನೋಡಿ ಪಾರ್ವತಿಯು ಚಿಂತಾಕ್ರಾಂತಳಾಗಿ ಕುಳಿತಿರುವ ಸಮಯದಲ್ಲಿ ಶಿವನು ವೃದ್ಧ ಚಿಪ್ಪಿಗನ ವೇಷದಿಂದ “ ಹರಿದ ವಸ್ತ್ರಗಳನ್ನು ಮೊದಲಿದ್ದ ಹಾಗೆ ಮಾಡಿಕೊಡುವೆನು ” ಎಂದು ಕೂಗುತ್ತ ಬಂದನು. ಸೇವಕರು ಅವನನ್ನು ಪಾವರ್ತಿಯ ಕಡೆಗೆ ಕರೆದೊಯ್ದು ಹರಿದ ವಸ್ತ್ರಗಳನ್ನು ತೋರಿಸಿದರು. ನಾನು ಬೇಡಿದ್ದನ್ನು ಕೊಟ್ಟರೆ ಇವುಗಳನ್ನು ಮೊದಲಿನಂತೆ ಮಾಡಿಕೊಡುವೆನೆಂದು ಅವನು ಅನ್ನಲು, ಹಾಗೇ ಆಗಲೆಂದು ದೇವಿಯು ನುಡಿದಳು. ಕೂಡಲೆ ಅವನು ಅವುಗಳನ್ನು ಮೊದಲಿದ್ದಂತೆ ಮಾಡಿಕೊಟ್ಟನು. ಇದಕ್ಕೇನು ಬೇಡುವೆಯೆಂದು ಪಾರ್ವತಿಯು ಕೇಳಲು, ಅವನು “ ನಿನ್ನ ವಿಲಾಸ ವಿಭ್ರಮಗಳಿಂದ ಕೂಡಿದ ಸೌಂದರ್ಯವನ್ನು ನೋಡಿ ನಾನು ಬೆರಗಾದೆನು, ನಿನ್ನ ರತಿಸುಖ ಸಾಗರದಲ್ಲಿ ನನ್ನನ್ನು ಓಲಾಡಿಸು ” ಎಂದ ಮಾತನ್ನು ಕೇಳಿ ಗಾಬರಿಯಾಗಿ ಪಾರ್ವತಿಯು ಅಂದದ್ದು – “ ಏನ ಬಯಸಿದೆ ಪಾಪಿ ? ನಿನಗದು ಹೀನವಲ್ಲವೆ? ಮುಪ್ಪಿನವನಿಗಿದೇಂ ವಿಚಾರ? ವಿವೇಕಿಗಳು ಪಾಪಕೆಳಸುವರೇ ? ಮಾನವಂತರು ಪರಸತಿಯರಭಿಮಾನಮಂ ಕೆಡಿಸುವರೆ ? ಭಾಗ್ಯವನೇನ ಬೇಡಿದೊಡೆ ಈಯೆನೇ? ಪೂರ್ವದ ಪ್ರಾಯಮಂ ಮರಳಿಸುವೆ. ತ್ರಿಜಗದ ರಾಯ ಪಟ್ಟವ ಕಟ್ಟುವೆ. ತಾಯಿ ನಾಂ ತ್ರೈಜಗಕೆ, ನಿನ್ನ ನಿಜಸ್ಥಿತಿಯ ನೀನು ಅರಿಯಲಿಲ್ಲವೆ ? ” ಈ ರೀತಿ ಎಷ್ಟು ಪರಿಯಿಂದ ಹೇಳಿದರೂ ಅವನ ಮನಸು ತಿರುಗದಿರುವದನ್ನು ಕಂಡು ಪಾರ್ವತಿಯು “ ಇವನಾಡಾಡಿ ಚಿಪ್ಪಿಗನಲ್ಲ, ಶಿವನೇ ಆಗಿರಬೇಕು, ಇದರ ಪರಿಯನ್ನು ತಿಳಿಯಬೇಕು ”

ಎಂದು ಊರ್ಧ್ವ ದೃಷ್ಟಿಯೊಳು ನೋಡಿ ಶಿವನೆಂದು ತಿಳಿದು ಚಿಂತಾಕ್ರಾಂತಳಾದಳು. ಇದನ್ನು ಕಂಡು ಈಶ್ವರನು ತನ್ನ ನಿಜ ಸ್ವರೂಪವನ್ನು ತೋರಿಸಿ ಗಿರಿಸುತೆಯನ್ನು ಬಿಗಿದಪ್ಪಿ ಮುದ್ದಿಸಿ ಚಿಂತಿಸಬೇಡವೆಂದು ಹೇಳಿದನು. ಆಕೆಯು ‘ ಕಪಟವೇಷದಿಂದ ಬಂದು ನನ್ನನ್ನು ಪತಿವ್ರತಾಹೀನೆಯನ್ನು ಮಾಡುವುದುಚಿತವೇ? ಹಿಡಿ ಶಾಪವನ್ನು" ಎಂದು ಸಿಟ್ಟಿನಿಂದ ನುಡಿದಳು. ಶಂಕರನು ಬೆದರಿ "ಸತಿಯೇ ಕೇಳು, ಮೊನ್ನೆ ನೀನು ಹಾದರದ ವಿಚಾರವನ್ನು ಕೇಳಿದೆಯಲಾ, ಅದನ್ನು ಆಡಿತೋರಿಸುವುದರ ಬದಲಾಗಿ ಮಾಡಿಯೇ ತೋರಿಸಬೇಕೆಂದು ಈ ರೀತಿ ಮಾಡಿದೆನೆಂ"ದೆನ್ನಲು ಪಾರ್ವತಿಯು ಅಂದದ್ದು – " ನೋಡಿದರೆ ಪಾಪ. ಆ ಬಗ್ಗೆ ಕೇಳಬೇಡೆಂದು ನನಗೆ ಹೇಳಿ ನೀನೇ ಮಾಡಿ ತೋರಿಸಿದೆ. ನುಡಿಯು ಹಾಗೆ, ನಡೆಯು ಹೀಗೆ. ನೋಡಬಾರದ ಪಾಪಗಳನ್ನು ಮಾಡಬಹುದೇ?" ಇದನ್ನು ಕೇಳಿ ತಾನು ಮಾಡಿದ ಅನ್ಯಾಯಕ್ಕೆ ಶಾಪವು ತಪ್ಪದೆಂದು ಬಗೆದು ನೀನು ಕೊಡುವ ಶಾಪದ ಕೂಡ ನಿಶ್ಯಾಪವನ್ನು ಸಹ ಕೊಡೆಂದು ಪಾರ್ವತಿಗೆ ಬೇಡಿಕೊಂಡನು. ಆಕೆಯು – "ನೀನು ಭೂಮಿಯೊಳಗೆ ಹುಟ್ಟಿ ಚಿಪ್ಪಿಗನಾಗಿ ಜೀವಿಸಿ ಗುರುಲಿಂಗಜಂಗಮುಸಮಾಗಮುದೊಳಿದ್ದು ಕಡೆಗೆ ಜಡೆಯ ಶಂಕರಲಿಂಗದಲ್ಲಿ ನಿನ್ನ ಶಾಪವನ್ನು ನೀಗು" ಎಂದಾಡಿದಳು. "ನಿನ್ನನ್ನು ಬಿಟ್ಟು ನಾನು ಅರಗಳಿಗೆಯಾದರೂ ಹ್ಯಾಗೆ ಇರಬೇಕು? " ಎಂದು ಅವನು ಕೇಳಿದ್ದಕ್ಕೆ ಅವಳು " ಕೆಲವು ದಿವಸಗಳ ಮೇಲೆ ನಾನೂ ಅಲ್ಲಿ ಬಂದು ನಿನ್ನ ಮದುವೆಯಾಗಿ ಕರೆದುಕೊಂಡು ಬರುವೆನು " ಎಂದು ಹೇಳಿದ ಮೇರೆಗೆ ಶಿವನು ಶಂಕರದಾಸಿಮಯ್ಯನಾಗಿ ಶಿವೆಯು ಶಿವದಾಸಿಯಾಗಿ ಜನಿಸಿರುವರು.

ಇವರ ವೃತ್ತಾಂತವು ಹೀಗಿರುವುದೆಂದು ವಕ್ತ್ರಪಾದಮುನಿಯು ಹೇಳಿದ್ದನ್ನು ಕೇಳಿ ದೇವರದಾಸಿಮಯ್ಯನು ಜಗ್ಗನೆ ಜರಿದು " ನಾನು ಅರಿಯದೆ ವೈಮರೆದು ನುಡಿದೆನು. ನಮ್ಮನ್ನು ಶಂಕರದಾಸಿಮಯ್ಯನಿದ್ದೆಡೆಗೆ ಕರೆದೊಯ್ದು ಅವನ ಪಾದದಲ್ಲಿರಿಸಿ ಕಾಪಾಡು " ಎಂದು ಬಿನ್ನವಿಸಿದ ಮೇರೆಗೆ, ಆ ದಂಪತಿಗಳನ್ನು ಅವನು ಶಂಕರ ದಾಸನಿದ್ದಲ್ಲಿಗೆ ಕರೆದೊಯ್ದನು. ಅವರು ನೆಲದ ಮೇಲೆ ಅಡ್ಡಬಿದ್ದು " ಹಸುಳ ಬೈದರೆ ಹಡೆದವರು ಲಾಲಿಸುವರಲ್ಲದೆ ಕೋಪಿಸುವರೇ? ಕರುಣಾನಿಧಿಯೇ ನಿಮ್ಮ ಪಾದದ ಗುರುತನ್ನು ಅರಿಯದಾದೆವು, ಮನ್ನಿಸು " ಎಂದು ಬೇಡಿಕೊಂಡರು. ಶಂಕರದಾಸಿ ಮಯ್ಯನ ಮನ ಕರಗಿ ಆ ದಂಪತಿಗಳ ಶಿರಗಳನ್ನು ಹಿಡಿದೆತ್ತಿ ವಂದಿಸಿ ಗದ್ದುಗೆಯ ಮೇಲೆ ಕೂಡ್ರಿಸಿದನು. ಶಿವದಾಸಿಯು ಕೂಡಲೆ ಭಸ್ಮವನ್ನು ಕೊಟ್ಟು ನಮಸ್ಕರಿಸಿ, ನೀವು ಲಿಂಗಪ್ರಸಾದವನ್ನು ಕೈಕೊಂಡು ಮಿಕ್ಕಪ್ರಸಾದವನ್ನು ನಮಗೆ ಕೊಡಬೇಕೆಂದು ಬಿನ್ನವಿಸಿದಳು. ಅದಕ್ಕೆ ದುಗ್ಗಳೆಯು– "ನಿಮ್ಮ ಶೇಷವನ್ನು ಸ್ವೀಕರಿಸುವುದು ನಮ್ಮ ಭಾಗ್ಯವು. ನೀವು ಮಹಾಮಹಿಮರೆಂಬುದನ್ನು ನಾವು ಅರಿಯದಾದೆವು. ಇಲ್ಲಿ ಕೂಡಿರುವ ಶರಣರೆಲ್ಲ ಉಪವಾಸದಲ್ಲಿರುವರು. ಅವರಿಗೆ ಮೊದಲು ನೀಡಬೇಕು. ಅವರ ಪ್ರಸಾದವನ್ನು ಸ್ವೀಕರಿಸುವುದು ನಮ್ಮ ಧರ್ಮ" ಎಂದುಸುರಲು, ಹಾಗೇ

ಆಗಲೆಂದು ಶಿವದಾಸಿಯು ಶಿವಶರಣರನ್ನು ಕರೆಯಿಸಿ ಅವರ ಪಾದಗಳನ್ನು ತೊಳೆದು ಮೂರ್ತಮಾಡಿಸಿ ಇವರಿಗೆ ಪೂಜೆಯ ಸಾಮಗ್ರಿಗಳು ಬೇಕೆಂದು ಗಂಡನಿಗೆ ಅರಿಕೆ ಮಾಡಿದಳು. ಅವನು ವಕ್ತ್ರಪಾದನಿಗೆ ಮನಿಯ ಮುಂದೆ ಅಗಿಯೆಂದು ಹೇಳಿ ಅಲ್ಲಿಂದ ಬಂಗಾರದ ಮಗಿ ಕಟ್ಟಿ ಅಡ್ಡಣಿಗೆ ಮುಂತಾದವುಗಳನ್ನು ತೆಗೆಯಿಸಿ ಶಿವಶರಣರ ಮುಂದಿರಿಸಿದನು. ಅವರು ಲಿಂಗಪೂಜೆಯನ್ನು ತೀರಿಸಿದ ಕೂಡಲೆ ಶಿವದಾಸಿಯು ಹಸ್ತಪರುಷವ ಮಾಡಿ ಐದು ಮಾನ ಧಾನ್ಯದಿಂದ ಅಡಿಗೆ ಮಾಡಿ ಶರಣರು ಬೇಡಿ ಬೇಡಿದ್ದನ್ನೆಲ್ಲ ನೀಡಿದರೂ ಮೊದಲಿನಂತೆಯೇ ಪಾತ್ರೆಗಳು ತುಂಬಿಯೇ ಇದ್ದವು. ಶರಣರು ಉಂಡುಳಿದದ್ದನ್ನು ಶಂಕರದಾಸಿಮಯ್ಯನೂ ದೇವರದಾಸಿಮಯ್ಯನೂ ವಕ್ತ್ರ ಪಾದಮುನಿಯೂ ಶಿವದಾಸಿಯೂ ದುಗ್ಗಳೆಯೂ ಸೇವಿಸಿ ಕೃತಾರ್ಥರಾದರು. ದೇವರದಾಸಿಮಯ್ಯನೂ ದುಗ್ಗಳೆಯೂ ಶಂಕರದಾಸಿಮಯ್ಯನಿಗೆ ವಂದಿಸಿ ಅವನ ಅಪ್ಪಣೆಯನ್ನು ಪಡೆದು ತಮ್ಮ ಬಿಡಾರಕ್ಕೆ ತಿರುಗಿ ಬರಲು, ಅಲ್ಲಿ ತಮ್ಮ ತವನಿಧಿ ಮೊದಲಿಗಿಂತಲೂ ಎಷ್ಟೋ ಪಟ್ಟು ಹೆಚ್ಚಾಗಿರುವುದನ್ನು ಕಂಡು ಸಂತೋಷಿಸಿದರು.

ಶಂಕರದಾಸಿಮಯ್ಯನು ಹೀಗೆ ಒಳ್ಳೇ ವೈಭವದಿಂದಿರುವಾಗ್ಗೆ ಕಲ್ಯಾಣ ಪಟ್ಟಣ ದಿಂದ ಒಬ್ಬ ಶರಣನು ಬಂದು ಒಂದು ರಾಯಸ (ಬಿನ್ನಹಪತ್ರ) ವನ್ನು ದಾಸಿ ಮಯ್ಯನಿಗೆ ಕೊಟ್ಟನು. ಅದನ್ನು ಅವನು ತನ್ನ ತಲೆಯ ಮೇಲಿಟ್ಟು ಆ ಮೇಲೆ ವಕ್ತ್ರಪಾದನಿಂದ ಓದಿಸಲು, ಅದರಲ್ಲಿ ಹೀಗೆ ಬರೆದಿತ್ತು - "ಸ್ವಸ್ತಿ. ಶ್ರೀಮದಮಲ ಚರಿತ ಶಂಕರದಾಸಿಮಯ್ಯಗಳ ಪದಾಬ್ಜಗಳಿಗೆ ಕಲ್ಯಾಣದ ಮಹೇಶ್ವರ ಸಮೂಹವು ದೀರ್ಘದಂಡನಮಸ್ಕಾರ ಮಾಡಿ ಬಿನ್ನವಿಸುವುದೇನೆಂದರೆ,- 'ನಮ್ಮ ನಗರದ ಅರಸ ನಾದ ಜಯಸಿಂಹರಾಯನು ನಮ್ಮನ್ನು ಕರೆಯಿಸಿ ಮುದನೂರೊಳಗೆ ಶಂಕರದಾಸಿ ಮಯ್ಯಗಳೆಂಬ ಶರಣಶ್ರೇಷ್ಠರಿರುವರಂತೆ, ನನಗೆ ಅವರ ದರ್ಶನವಾಗಬೇಕು, ನೀವು ಅವರನ್ನು ಕರೆಯಿಸಬೇಕೆಂದು ಹೇಳಿದನು. ನಾವು ಒಪ್ಪಿ ನಿಮ್ಮ ಪಾದಕಮಲಗಳಿಗೆ ಈ ಬಿನ್ನಹವನ್ನು ಬರೆಯಿಸಿ ಕಳುಹಿಸಿರುವೆವು. ಈ ನಮ್ಮ ಬಿನ್ನಹವನ್ನು ಮನ್ನಿಸಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡಬೇಕು."

ಇದನ್ನು ಕೇಳಿ ಸಂತೋಷಬಟ್ಟು ಶಂಕರದಾಸಿಮಯ್ಯನು ದೇವರದಾಸಿಮಯ್ಯ ನಿಗೂ ದುಗ್ಗಳೆಗೂ ಸದ್ಭಕ್ತರಿಗೂ ವಂದಿಸಿ ಅವರ ಅಪ್ಪಣೆ ಪಡೆದು ವಾದ್ಯಸಮೇತ ಒಳ್ಳೇ ವೈಭವದಿಂದ ಹೊರಟು ಕಲ್ಯಾಣಕ್ಕೆ ಬಂದನು. ಜಯಸಿಂಹರಾಯನು ಅವನನ್ನು ಸಂಭ್ರಮದಿಂದಿದಿರ್ಗೊಂಡು ಕಾಣಿಕೆ ಕೊಟ್ಟು ತನ್ನ ಪುರಕ್ಕೆ ಬರಮಾಡಿ ಕೊಂಡು ಅವನ ಸಲುವಾಗಿ ಸಿದ್ಧಮಾಡಿದ ಒಂದು ಮಂದಿರದಲ್ಲಿರಿಸಿ ಅವನ ಅಪ್ಪಣೆ ಪಡೆದು ತನ್ನರಮನೆಗೆಯ್ದಿದನು.

ಆ ಪಟ್ಟಣದ ಶಿವಶರಣರು ದಿನಾಲು ದಾಸಿಮಯ್ಯನ ಬಿಡಾರಕ್ಕೆ ಬಂದು ಅವನ ಕೂಡ ಸುಖಸಲ್ಲಾಪದೊಳಗಿರುತಿರುವಾಗ್ಗೆ ಒಂದು ದಿನ ಒಬ್ಬ ಶರಣನು ಚಿಂತಾಕ್ರಾಂತನಾಗಿರುವುದನ್ನು ಕಂಡು ದಾಸಿಮಯ್ಯನು ಅದರ ಕಾರಣವನ್ನು

ಕೇಳಲು, ಅವನು ಕೈಜೋಡಿಸಿ ಹೇಳಿದ್ದೇನೆಂದರೆ - " ಈ ಊರ ಅರಸನ ರಾಣಿಗೆ ಬೇನೆ ಹತ್ತಿ ನೆಟ್ಟಗಾಗದೆ ಕಾಡುತ್ತಿರುವಾಗ್ಗೆ ಅರಸನು ಒಬ್ಬ ಕಣೆಯುವಳನ್ನು (ದೇವರ ಹೇಳುವವಳನ್ನು) ಕರೆಯಿಸಿ ಕೇಳಿದನು. ಅವಳು - ' ಈ ಊರಿನ ಮಾರಿ ಮುಸಣಿಯರು ರಾಣಿಗೆ ಕಾಡುತ್ತಿರುವರು. ಅವರ ಮುಂದೆ ಎಲೆಗಳ ಉಡುಪನ್ನುಟ್ಟು ಬಾಯಿಗೆ ಬೀಗವನ್ನು ಹಾಕಿಕೊಂಡು ಮುಂದಲೆಯ ತೊಗಲನ್ನು ಕೊಯ್ದಿಟ್ಟು ಕುರಿ ಕೋಣ ಕೋಳಿ ಹಂದಿಗಳ ಶಿರಗಳನ್ನು ಕೊಯ್ದು ಅವುಗಳ ರಕ್ತದಿಂದ ಕೂಡಿದ ಅನ್ನದ ರಾಸಿಯನ್ನಿರಿಸಿ ಸಿಂದಿಯ ಕೊಡಗಳನ್ನು ಸಾಲಾಗಿಟ್ಟು ನೀನು ವಂದಿಸಿದರೆ ರಾಣಿಯ ರೋಗವು ತೊಲಗುವುದು ನಿಶ್ಚಯ. ಭೈರವನಾಣೆ. ಹೀಗಾಗದಿದ್ದರೆ ನಾನು ಈ ನನ್ನ ಕಾಯಕವನ್ನು ಬಿಡುವೆನು, ' ಎಂದು ಹೇಳಿದ್ದು ಕೇಳಿ ಅರಸಿಯು ಎಲ್ಲ ಮನೆಯವರಿಗೆ ಬತ್ತವನ್ನು ಕೊಟ್ಟು ಅದನ್ನು ಬೇಗ ಅಕ್ಕೀ ಮಾಡಿ ತರಹೇಳಿ ಅದರಂತೆ ನನಗೂ ಐದು ಮಾನ ಬತ್ತವನ್ನು ಕಳಿಸಿರುವಳು. ನನ್ನ ಹೆಂಡತಿಯು ಬಸುರಿದ್ದು ಅಕ್ಕೀ ಮಾಡಲಾರದ್ದಕ್ಕೆ ಚಿಂತಿಸುತ್ತಿದ್ದೇನೆ."

ಇದನ್ನು ಕೇಳಿ ದಾಸಿಮಯ್ಯನು ನಕ್ಕು ನಿಮ್ಮ ಪಾಲಿನ ಬತ್ತವನ್ನು ಅದೇ ಮಾರಿಮುಸಣಿಯರ ಮುಂದೆ ಸುರುವಿ ಅದರ ಅಕ್ಕಿಯನ್ನು ಮಾಡಿ ತರಲಿಕ್ಕೆ ನಾನು ಹೇಳಿದೆನೆಂದು ತಿಳಿಸೆಂದು ಹೇಳಿ ಕಳುಹಲು, ಆ ಶರಣನು ಆನಂದದಿಂದ ಹೋಗಿ ದಾಸಿಮಯ್ಯನು ಹೇಳಿದಂತೆ ಮಾಡಿದನು. ಆ ಮಾರಿಮುಸಣಿಯರು ಇದೊಂದು ದಾಸಿ ಮಯ್ಯನು ತಮ್ಮ ಮೇಲೆ ಮಾಡಿದ ದೊಡ್ಡ ಅನುಗ್ರಹವೆಂದು ಬಗೆದು ಬತ್ತವನ್ನು ಸರಿಯಾಗಿ ಅಕ್ಕೀ ಮಾಡಿ ಇಬ್ಬರೂ ಕಂಬಳೀ ಮುಟ್ಟಿಗಳಲ್ಲಿ ಅದನ್ನು ಕಟ್ಟಿಕೊಂಡು ಶರಣನ ಹೇಳಿಕೆಯಂತೆ ಅದನ್ನು ಅರಮನೆಗೆ ಒಯ್ದರು. ಅವರ ಭಯಾನಕ ಸ್ವರೂಪನ್ನು ಕಂಡು ನಗರದೊಳಗಿನ ಜನರು ತಪ್ಪಿಸಿ ಓಡಿಹೋದರು. ಅರಮನೆಯ ಕಾವಲುಗಾರರು ಬೆದರಿದರು. ಅರಸನಿಗೆ ಈ ಸುದ್ದಿಯು ಮುಟ್ಟದ ಕೂಡಲೆ ಅವನು ಅಂಜಿ ಬಾಗಿಲ ಮುಚ್ಚಿಸಿದನು. ಮಾರಿಮುಸಣಿಯರು ಅವನಿಗೆ ಅಂಜಬೇಡೆಂದು ಧೈರ್ಯಗೊಟ್ಟು ನೀನು ಶಿವಭಕ್ತನಿಗೆ ಕೊಟ್ಟ ಬತ್ತದ ಅಕ್ಕಿಯು ಇದೆಂದು ಸುರುವಿ ಹೋದರು.

ಅರಸನು ಇದರ ವಿಚಾರ ಮಾಡಿ ಇದು ಶಂಕರದಾಸಿಮಯ್ಯನ ಮಹತ್ವವೆಂದು ಬಗೆದು ಅವನಲ್ಲಿಗೆ ಬಂದು ವಂದಿಸಿ ನನ್ನ ಸರ್ವಾಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ದಾಸಿಮಯ್ಯನು ಅವನಿಗೆ ಶಿವಶರಣರ ಮಹತ್ವವನ್ನು ವಿಸ್ತರಿಸಿ, " ಅವರು ಸಾಕ್ಷಾತ್ ಶಿವಸ್ವರೂಪರು, ಅವರಿರುವ ಮನೆ ಶಿವಸದನ, ಅವರಿರುವ ಪಟ್ಟಣ ಕೈಲಾಸ, ಅವರಿಗಿಂತ ಶ್ರೇಷ್ಠರು ಈ ಲೋಕದೊಳಗಿಲ್ಲ, ಹಿಂದಾದದ್ದು ಆಗಲಿ, ಇನ್ನು ಮುಂದೆ ಹೀಗೆ ಮಾಡದೆ ಶಿವಭಕ್ತರನ್ನು ಕಂಡ ಕೂಡಲೆ ಅವರನ್ನು ಭಕ್ತಿಯಿಂದ ವಂದಿಸು, " ಎಂದು ಹೇಳಿ ಅವನನ್ನು ಕಳುಹಿಸಿಕೊಟ್ಟನು.

ಮರುದಿವಸ ಭೂಪಾಲನು ಸಭಾಸ್ಥಾನದಲ್ಲಿ ಸಿಂಹಾಸನವನ್ನಲಂಕರಿಸಿದನು. ಮಂತ್ರಿಗಳು ಸೇನಾಧಿಪತಿಗಳು ಸಾಮಂತರು ಪಂಡಿತರು ಕವಿಗಳು ಶಾಸ್ತ್ರಕೋವಿದರು ಮುಂತಾದವರು ನೆರೆದಿದ್ದರು. ಆಗ್ಗೆ ಅರಸನು ಶಂಕರದಾಸಿಮಯ್ಯನು ಅಂಗಳವನ್ನು ಅಗಿದು ಬಂಗಾರದ ಪಾತ್ರೆಗಳನ್ನು ತೆಗೆಸಿದ, ಹಣೆಗಣ್ಣನ್ನು ಪಡೆದ, ತವನಿಧಿಯನ್ನು ಬಯಲು ಮಾಡಿದ, ಮಾರಿಮಸಣಿಯರನ್ನು ತೊತ್ತು ಮಾಡಿದ, ಮುಂತಾದ ಮಹತ್ವಗಳನ್ನು ಅವರಿಗೆ ವಿಸ್ತಾರವಾಗಿ ವಿವರಿಸಿದನು. ಅದನ್ನು ಕೇಳಿ ಅಲ್ಲಿ ಕೂಡಿದ ಸಮಸ್ತ ಮತದವರು ಒಮ್ಮತವಾಗಿ ಇದೆಲ್ಲವೂ ಸಹಜವಾಗಿರದೆ ಕೃತಕವೆಂದು ಹಾಸ್ಯ ಮಾಡಿ ಜರಿದು ನುಡಿದರು. ಆ ಮಹಿಮಾಪುರುಷನನ್ನು ಹೀಗೆ ಜರಿಯುವುದು ಯೋಗ್ಯವಲ್ಲೆಂದು ಎಷ್ಟು ತಿಳಿಸಿ ಹೇಳಿದರೂ ಸಮಾಧಾನವಾಗದೆ ಅವರು ನುಡಿದದ್ದು - '' ಪೊಡವಿಪತಿಯೇ, ನಿನ್ನೆದುರಿಗೆ ನಾವು ಹೆಚ್ಚು ಮಾತಾಡಲಾರೆವು. ಪರದೇಶದಿಂದ ಬಂದವನಿವನು ಷಡುದರುಶನಾಚಾರ್ಯನೆಂದು ಕಹಳೆಗಳನ್ನು ಹಿಡಿಸಬಹುದೇ ? ಅವನು ನಮ್ಮೊಡನೆ ವಾದಕ್ಕೆ ಬರಲಿ. ಒಂದು ಮಾತಿನಲ್ಲಿ ಅವನನ್ನು ಬೂರಲರಳಿಯಂತೆ ಹಾರಿಸಿ ಬಿಡುವೆವು. ನಾವು ಸೋತರೆ ತೀಕ್ಷ್ಣವಾದ ಶೂಲಗಳನ್ನೇರುವೆವು. '' ಇದನ್ನು ಕೇಳಿ ಒಳ್ಳೇದೆಂದು ಅರಸನು ದಾಸಿಮಯ್ಯನ ಕಡೆಗೆ ತನ್ನ ದಂಡನಾಯಕನನ್ನು ಕಳುಹಿಸಿದನು. ದಂಡನಾಯಕನು ನಡೆದ ಸಂಗತಿಯನ್ನು ದಾಸಿಮಯ್ಯನಿಗೆ ಅರುಹಲು, ದಾಸಿಮಯ್ಯನು ರಾಜದ್ವಾರವನ್ನು ಯತಿಯು ಮೆಟ್ಟಿದರೆ ಮಹಾಪಾಪವು, ಇದಕ್ಕೆ ಹೇಗೆ ಮಾಡಬೇಕೆಂದಾಲೋಚಿಸುತ್ತಿರುವಷ್ಟರಲ್ಲಿ ವಕ್ತ್ರಪಾದಮುನಿಯು ತಾನು ಹೋಗಲಿಕ್ಕೆ ಅಪ್ಪಣೆಯಾಗಬೇಕೆಂದು ಬಿನ್ನವಿಸಿದನು. ದಾಸಿಮಯ್ಯನು ಅದಕ್ಕೆ ಒಪ್ಪಿ ಪಂಚಾಕ್ಷರೀ ಮಂತ್ರದ ಮಹತ್ವವನ್ನು ಅವನಿಗೆ ತಿಳಿಸಿ ಅದನ್ನು ಜಪಿಸುತ್ತ ಹೋಗೆಂದು ಅಪ್ಪಣೆಯಿತ್ತನು. ವಕ್ತ್ರಪಾದಮುನಿಯು ಅವನ ಅಪ್ಪಣೆ ಪಡೆದು ಶಿವದಾಸಿಯಮ್ಮನಿಗೆ ನಮಸ್ಕಾರ ಮಾಡಿ ಆಕೆಯು ಕೊಟ್ಟ ಜಂಗಮಪಾದತೀರ್ಥವನ್ನು ಸೇವಿಸಿ ಅವಳ ಆಶೀರ್ವಾದವನ್ನು ಪಡೆದು ಮಹೇಶ್ವರರ ಗಡಣದೊಡನೆ ಅರಸನೆಡೆಗೆ ಹೊರಟನು. ಭೂಪಾಲನು ಅವನನ್ನು ಆದರದಿಂದ ಸತ್ಕರಿಸಿ ವಂದಿಸಿ ಮಣಿಮಯಪೀಠದಲ್ಲಿ ಕುಳ್ಳಿರಿಸಿದನು. ತನ್ನನ್ನು ಇಲ್ಲಿ ಕರೆಯಿಸಿದ ಕಾರಣವೇನೆಂದು ವಕ್ತ್ರಪಾದಮುನಿಯು ಅರಸನನ್ನು ಕೇಳಲು, ಅರಸನು ನಡೆದ ಸಂಗತಿಯನ್ನು ತಿಳಿಸಿದನು. ಇಲ್ಲಿ ನೆರೆದವರು ಯಾವ ಯಾವ ಮತದವರೆಂದು ಕೇಳಲು, ಅರಸನು '' ಇವರು ವೈಷ್ಣವರು ಇವರು ಪಾಶುಪತರು ಇವರು ಗಾಣಾಪತ್ಯರು ಇವರು ಶಾಕ್ತೇಯರು ಇವರು ಶೈವರು ಇವರು ಪಾಂಚರಾತ್ರಿಕರು ಇವರು ಸಾಂಖ್ಯರು ಇವರು ಕಣಾದಮತದವರು ಇವರು ಕಾಪಾಲಿಕರು ಇವರು ವೈಖಾನಸರು ಇವರು ಮೀಮಾಂಸಕರು ಇವರು ಶೂನ್ಯವಾದಿಗಳು ಇವರು ನೈಯಾಯಿಕರು ಇವರು ಯೋಗಿಗಳು ಇವರು ವೇದಾಂತಿಗಳು ಇವರು ಸಿದ್ಧಾಂತಿಗಳು ಇವರು ಬೌದ್ಧರು ಇವರು ಕರ್ಮವಾದಿಗಳು ಇವರು ಚಾರ್ವಾಕರು ಇವರು ದಿಗಂಬರರು ಇವರು

ಕಾಪಿಲರು ಇವರು ಕಾಲವಾದಿಗಳು ಇವರು ಪಾತಂಜಲರು" ಎಂಬ ಬೇರೆ ಬೇರೆ ಮತದವರನ್ನು ತೋರಿಸಿದನು.

ಆಗ ಗಣವರನು - "ಹೀಗೆ ಒಂದಕ್ಕೊಂದು ವಿರುದ್ಧವಾದ ನಾನಾ ಮತದವರು ಒಟ್ಟಾಗಿ ಕೂಡಿರುವುದು ಉಚಿತವೇ? ಆದರೂ ಚಿಂತೆಯಿಲ್ಲ. ಇವರಲ್ಲಿ ನನಗಿದಿರಾಗಿ ಮಾತನಾಡುವವರು ಯಾರು?" ಎಂದು ಕೇಳಲು, ಒಬ್ಬ ವೈಷ್ಣವನು ವಾದಕ್ಕೆ ಮುಂದೆ ಬಂದನು. ಅವನ ಮತ್ತು ವಕ್ತ್ರಪಾದಮುನಿಯ ನಡುವೆ ಶ್ರುತ್ಯಾಧಾರಗಳಿಂದ ವಾದವು ನಡೆದು ವೈಷ್ಣವನು ಸೋತು ಕಡೆಗೆ ಹೀಗೆಂದನು - "ನಿಮ್ಮ ಗುರುವು ಅಗ್ನಿನೇತ್ರದಿಂದ ದೇವತೆಗಳನ್ನು ಸುಡುತ್ತಿರುವನೆಂದು ಹೇಳುವರು. ಅವನು ನಮ್ಮ ಒಡೆಯನಾದ ನರಸಿಂಹದೇವತೆಯನ್ನು ಅದರಿಂದ ಸುಟ್ಟರೆ ನಾವು ನಿಮ್ಮ ಗುರುವಿನ ಪಾದಕಮಲಗಳಿಗೆರಗುವೆವು. ಇಲ್ಲವಾದರೆ ನೀವು ವೀರಶೈವರೆಲ್ಲ ನಮ್ಮ ಚರಣಕ್ಕೆರಗಬೇಕು." ಇದನ್ನು ಕೇಳಿ ಹಾಗೇ ಆಗಲೆಂದು ವಕ್ತ್ರಪಾದಗಣೇಶನು ಅರಸನ ಅಪ್ಪಣೆಯಿಂದ ತನ್ನ ಆಲಯಕ್ಕೆ ತೆರಳಿದನು.

ಮರುದಿವಸ ಅರಸನು ಒಡ್ಡೋಲಗಂಗೊಟ್ಟು ವೈಷ್ಣವನಿಗೆ - "ಇಂದಿನ ದಿವಸ ಶಂಕರದಾಸಿಮಯ್ಯನ ನೊಸಲಕಣ್ಣಿಗೂ ನಾರಸಿಂಹನಿಗೂ ಆಗುವ ಕಾದಾಟದಲ್ಲಿ ನಿಮಗೆ ಜಯ ಸಿಗುವ ಯಾವ ಉಪಾಯವನ್ನು ಕಂಡಿರುವಿರಿ? ನಿಮಗೆ ಜಯ ದೊರಕುವ ಸಂಭವವಿಲ್ಲ, ಈ ಪಂಥಕ್ಕೆ ಬೀಳಬೇಡಿರಿ" ಎಂದು ಎಷ್ಟು ಬುದ್ಧಿವಾದವನ್ನು ಹೇಳಿದರೂ ವೈಷ್ಣವನು ಕೇಳಲಿಲ್ಲ. ಆ ಮೇಲೆ ಅರಸನು ಉಳಿದವರಿಗೆ ನರಸಿಂಹನ ದೇವಾಲಯದಲ್ಲಿರಹೇಳಿ ತಾನು ದಾಸಿಮಯ್ಯನ ಬಿಡಾರಕ್ಕೆ ಬಂದು ನಡೆದ ಸಂಗತಿಯನ್ನರುಹಿದನು. ಆಗ್ಗೆ ದಾಸಿಮಯ್ಯನ ಹತ್ತರಿದ್ದ ಭೂತಗಣಗಳು ನರಸಿಂಹನ ಸಮಾಚಾರವನ್ನು ತೆಗೆದುಕೊಳ್ಳಲು ನಾ ಮುಂದೆ ನೀ ಮುಂದೆ ಎಂದು ಬರಲು, ದಾಸಿಮಯ್ಯನು ಅವರನ್ನು ಸಮಾಧಾನಪಡಿಸಿ, ವಾದಿಗಳು ತನ್ನ ಹಣೆಗಣ್ಣಿನಿಂದಲೇ ತಮ್ಮ ದೇವರನ್ನು ಸುಡಬೇಕೆಂದು ಬಯಸಿದ ಕಾರಣ ತಾನೇ ಹೋಗಬೇಕೆಂದು ಹೇಳಿ ದೇವತೆಗಳ ಸಮೂಹದೊಡನೆ ತನ್ನ ಬಿರುದುಗಳನ್ನು ಹೊಗಳಿಸಿಕೊಳ್ಳುತ್ತ ವಾದ್ಯಗಳ ರಭಸದಿಂದ ಅರಸನನ್ನು ಕೂಡಿಕೊಂಡು ಬಂದು ನರಹರಿಯ ಎದುರಿನಲ್ಲಿ ನಿಂತು ವಾದಿಸುವವನಾರೆಂದು ಕೇಳಿದನು. ಅರಸನು ವಾದ ಮಾಡಿದ ವೈಷ್ಣವನನ್ನು ತೋರಿಸಿದನು. ಶಂಕರದಾಸಿಮಯ್ಯನು ಅವನನ್ನು ಕರೆದು -"ನೀನು ನರಹರಿಯನ್ನು ಸುಡಹೇಳಿ ದೈವದ್ರೋಹವನ್ನು ಮಾಡುವರೇ? ಹಿಂದೆ ಶರಭೇಶ್ವರನಿಂದ ನರಸಿಂಹನ ಅವತಾರವು ಮುಗಿಯಿತು. ಈಗ್ಗೆ ನಿನ್ನಿಂದ ಅವನಿಗೆ ಉಪದ್ರವವು ಉಂಟಾಗುವುದು" ಎಂದ ಮಾತು ಕೇಳಿ ವೈಷ್ಣವನು ಅಂದದ್ದು - "ಬಹಳ ಮಾತುಗಳಿಂದೇನು ಫಲ? ನಮ್ಮ ದೇವರ ಮುಂದೆ ನಿಂತವರು ಅವನ ಕೋಪಾಗ್ನಿಯಲ್ಲಿ ಸುಟ್ಟು ಹೋಗುವರು." ಇದನ್ನು ಕೇಳಿ ಹಾಗೇ ಆಗಲೆಂದು ಶಂಕರದಾಸಿಮಯ್ಯನು ಎದುರಿಗೆ ನಿಲ್ಲಲು ವೈಷ್ಣವನು ನರಹರಿಯ ಮುಂದಿನ ಪಡದೆಯನ್ನು ತೆಗೆದನು.

ಕೂಡಲೆ ನರಸಿಂಹನ ತೆರೆದ ಬಾಯಿ ಮುಚ್ಚಿತು. ಕಣ್ಣುಗುಡ್ಡಿಗಳು ತಿರುಗಲಾರಂಭಿಸಿದುವು. ಮನಸಿನಲ್ಲಿ ಅಂಜಿಕೆ ಹುಟ್ಟಿ ನಡುಗಹತ್ತಿದನು. "ಇದೇನು ಕೋಪದ ಕಿಚ್ಚಿಲ್ಲದೆ ನಾರಸಿಂಹನು ನಡುಗುವುದೇಕೆಂ" ದು ಶಿವಶರಣನು ವೈಷ್ಣವನನ್ನು ಕೇಳಿದ್ದಕ್ಕೆ ವೈಷ್ಣವನು ಅಂದದ್ದು - "ನಡುಗುವವರ ಕಣ್ಣಿಗೆ ಹಾಗೆ ಕಾಣುವುದಲ್ಲದೆ ನರಹರಿಯ ನಡುಗು ನಾ ಕಾಣೆನು. ಉಳಿದ ದೇವತೆಗಳನ್ನು ಸುಡುವ ಅಂಹಕಾರವನ್ನು ಬಿಟ್ಟು ಈ ನರಹರಿಯನ್ನು ಸುಡುವುದು ನಿನ್ನಿಂದಾದರೆ ಸುಡು. ಇಲ್ಲವಾದರೆ ಆಚೆಗೆ ಹೆಜ್ಜೆಯಿಡು." ಈ ಮಾತು ಕೇಳಿ ದಾಸಿಮಯ್ಯನು ಕೋಪಾಟೋಪದಿಂದ ಹಣೆಗಣ್ಣಿನ ಮೇಲಿರುವ ನಂದಿಮುಖದ ಕವಚವನ್ನು ತೆಗೆಯಲು, ಅದರ ಕಿಚ್ಚು ಭುಗಿಭುಗಿಲೆಂದು ಅರ್ಧ ನಿಮಿಷದಲ್ಲ ನರಸಿಂಹನ ಮೂರ್ತಿಯನ್ನು ಸುಟ್ಟು ಭಸ್ಮಮಾಡಿ ಪಟ್ಟಣವನ್ನು ಸುಡತೊಡಗಿತು. ಅರಸನು ಇದನ್ನು ನಿಲ್ಲಿಸಬೇಕೆಂದು ದಾಸಿಮಯ್ಯನ ಪಾದಕ್ಕೆರಗಿ ಬೇಡಿಕೊಂಡನು. ದಾಸಿಮಯ್ಯನು ಅವನಿಗೆ ಅಭಯವಿತ್ತು ನೇತ್ರಶಿಖಿಯನ್ನು ಕವಚದೊಳಗೆ ಅಡಗಿಸಿದನು. ವೈಷ್ಣವನು ವಾದಿಗಳ ಸಹಿತ ಶರಣುಬಂದನು. ದಾಸಿಮಯ್ಯನು ಎಲ್ಲರನ್ನು ಸಂತಯಿಸಿ ಅರಸನಿಗೆ ಅಪ್ಪಣೆಕೊಟ್ಟು ಶಿವಶರಣರೊಡನೆ ತನ್ನ ಬಿಡಾರಕ್ಕೆ ಮರಳಿದನು.

ಮುಂದೆ ಒಂದು ದಿನ ದಾಸಿಮಯ್ಯನು ಅರಸನನ್ನು ಕರೆಯಿಸಿ ಶಿಖಿಪುರದರಸನ ಪಾದಕಮಲಗಳನ್ನು ಕಾಣುವ ಉತ್ಕಂಠತೆಯಾದುದರಿಂದ ನಮ್ಮೂರಿಗೆ ಹೋಗುವೆನೆಂದು ಅರುಹಲು, ಅರಸನು- 'ನೀವು ಹೋಗುವಿರಷ್ಟೇ? ನನ್ನ ಗತಿಯೇನು' ಎಂದು ಕೇಳಿದನು. ಅದಕ್ಕೆ ಸದ್ಧರ್ಮದಿಂದ ರಾಜ್ಯಪರಿಪಾಲನೆ ಮಾಡೆಂದು ಅವನಿಗೆ ರಾಜನೀತಿಯನ್ನು ಚೆನ್ನಾಗಿ ಬೋಧಿಸಿ ಅವನ ಬೀಳ್ಕೊಂಡು ಕೆಲವು ದಿನಗಳಿಗೆ ಪೆಂಬೂರೆಂಬ ನಗರಕ್ಕೆ ತಲ್ಪಿ ಅದರ ಹೊರಮಗ್ಗಲಲ್ಲಿರುವ ಮೈಲಾರನ ಸದನದಲ್ಲಿ ತಂಗಿ ಶಿವಶರಣರೊಡನೆ ತತ್ವಾನುಭವಗೋಷ್ಠಿಯಲ್ಲಿದ್ದನು. ಆ ಸಮಯದಲ್ಲಿ ಭಾವಕೀಜನರೊಂದಿಗೆ ಮಾಳಾದೇವಿಯೆಂಬ ಕೋಮಲಾಂಗಿಯು ಬಂದು ಮೈಲಾರನ ಪೂಜೆ ಮಾಡಿ ಅವನ ಪ್ರಸಾದವನ್ನು ಒಂದು ಚಿನ್ನದ ಬಟ್ಟಲಲ್ಲಿ ತಂದು ಶಂಕರದಾಸಿಮಯ್ಯನ ಮುಂದಿಟ್ಟು ಸ್ವೀಕರಿಸಲಿಕ್ಕೆ ಬಿನ್ನವಿಸಿದಳು. ದಾಸಿಮಯ್ಯನು "ಲಿಂಗಧಾರಕನು ಅನ್ಯದೇವರ ಶೇಷವನ್ನು ಕೈಯ್ಕೊಂಡರೆ ಅವನಿಗೆ ಘೋರ ನರಕ ವುಂಟಾಗುವುದು, ಅದು ಕಾರಣ ಇದನ್ನು ಒಲ್ಲೆನು" ಎಂದು ಹೇಳಿದನು. ಅದಕ್ಕವಳು ಮೈಲಾರನು ಶಿವನೇ ಎಂದೆನ್ನಲು, ಅವನು "ನೀವು ಮೈಲಾರನೆಂದು ತಿಳಿದಿರುವ ಇವನು ಶಿವನಲ್ಲ, ಒಂದು ಭೂತವು" ಎಂದುಸುರಿದನು. ಆಗ್ಗ ಆಕೆಯು ಅಲ್ಲಿಯ ಗೊರವನನ್ನು ಕರೆಕಳುಹಿದಳು. ಅವನು ತನ್ನ ವೇಷದಿಂದ ವಗ್ಗರ ಸಮೂಹದೊಡನೆ ಬಂದು ದಾಸಿಮಯ್ಯನು ನುಡಿದ ಮಾತು ಕೇಳಿ ಶಿವನು ಬೇಡನ ವೇಷದಿಂದ ಮಲ್ಲಾಸುರನ ಕೊಂದ ಕಥೆಯನ್ನು ಹೇಳಿ ಇವನು ಶಿವನಲ್ಲದೆ ಭೂತವೆಂದೆನ್ನಬಹುದೇ ಎಂದು ಬೆದರಿಸಿದನು.

ಅದಕ್ಕೆ ದಾಸಿಮಯ್ಯನು - " ಮಲ್ಲಾಸುರನ ಕೊಂದವ ಶಿವನೆನ್ನುವದನ್ನು ನಾನು ಬಲ್ಲೆನು. ಈ ಮೈಲಾರನು ಶಿವನಲ್ಲ, ಉಗ್ರ ಗ್ರಹ. ಇವನ ಕಥೆಯನ್ನು ಹೇಳುವೆನು ಕೇಳು. ಇವನು ಮೊದಲು ಕ್ಷತ್ರಿಯ ಭೂಪಾಲನು. ಸಂಸಾರವನ್ನು ಬಿಟ್ಟು ಜೈನ ಗುರುಗಳಿಂದ ದೀಕ್ಷೆಯನ್ನು ಪಡೆದು ಮಲ್ಲಿದೇವಾಚಾರ್ಯನೆಂಬ ಹೆಸರಿನಿಂದ ಕೆಲವು ದಿನ ಧರ್ಮದಿಂದ ನಡೆದು ಕಡೆಗೆ ಒಬ್ಬ ಕುರುಬನ ಹೆಂಡತಿಗೆ ಮರುಳಾಗಿ ಆಕೆಯನ್ನು ಓಡಿಸಿಕೊಂಡು ಹೋಗುವಾಗ್ಗೆ ದಾರಿಯಲ್ಲಿ ಕುರಿಗಳನ್ನು ಕಾಯುತ್ತಿದ್ದ ಅವಳ ಗಂಡನು ನೋಡಿ ಹುಯ್ಯಲಿಟ್ಟನು. ಹತ್ತಿರವೆ ಬೇಟೆಯಾಡುವ ಕಾಡ ಬೇಡರು ಅವರ ಬೆನ್ನಟ್ಟಿ ಬಾಣಗಳಿಂದ ಅವರನ್ನು ಹೊಡೆದು ಕೊಂದರು. ಅವರೇ ಮಾಳಿಮಲ್ಲರೆಂಬ ಕರಾಳ ಭೂತಗಳಾಗಿರುವರು."

ಇದನ್ನು ಕೇಳಿ ಗೊರವನು - " ಹಾಗಾದರೆ ನಿಮ್ಮೊಡನಿರುವ ಭೂತಗಣವು ನಿಮ್ಮ ಊಳಿಗವನ್ನು ಭೀತಿಯಿಂದ ಮಾಡುತ್ತಿರುವುದು. ಈ ಭೂತಗಳಿಂದ ಅಂಥ ಊಳಿಗವನ್ನು ಏಕೆ ಮಾಡಿಸುವುದಿಲ್ಲ?" ಎಂಬ ವ್ಯಂಗ್ಯೋಕ್ತಿಯನ್ನಾಡೆ, ದಾಸಿಮಯ್ಯನು - " ನಿಮ್ಮ ಮೈಲಾರನಿಂದ ನಾನು ಸೇವೆಯನ್ನು ಮಾಡಿಸಿಕೊಂಡರೆ ನೀವೆಲ್ಲ ನನ್ನ ಸೇವಕರಾಗಿ ಬರುವಿರಾ?" ಎಂದು ಕೇಳಿದನು. ಅದಕ್ಕೆ ಅವರು - "ನಮ್ಮ ತಂದೇಯೇ ನಿಮ್ಮ ಊಳಿಗವನ್ನು ಮಾಡಿದ ಮೇಲೆ ನಾವು ನಿಮ್ಮ ಸೇವಕರಾಗುವ ದೇನು ಆಶ್ಚರ್ಯ?" ಎಂದ ಮಾತನ್ನು ಕೇಳಿ ದಾಸಿಮಯ್ಯನು ಮೈಲಾರನನ್ನು ಕರೆದನು. ಅವನು ತಟ್ಟನೆ ಗದ್ದುಗೆಯಿಂದೆದ್ದು ಚರಣಗಳಿಗೆ ವಂದಿಸಿ ನಡುಗುತ್ತ " ನಾನು ಮಾಡುವ ಊಳಿಗವನ್ನು ಕರುಣಿಸಬೇಕು" ಎಂದು ಬಿನ್ನವಿಸಿದನು. ಅದಕ್ಕೆ ದಾಸಿಮಯ್ಯನು - " ನೀನು ನಮ್ಮ ಛತ್ರವನ್ನು ಹಿಡಿದುಕೊಂಡು ನವಿಲೆಯ ತನಕ ನಮ್ಮ ಕೂಡ ಬರಬೇಕು" ಎಂದುದನ್ನು ಕೇಳಿ ಸಂತೋಷದಿಂದ ಅವನು ಹಾಗೆ ಮಾಡುವುದನ್ನು ಕಂಡು ಗೊರವರ ಪಡೆ ಬೆದರಿ ಅವನ ಪಾದಗಳಿಗೆ ಅಡ್ಡಬಿದ್ದು ಇದೊಂದು ಸಾರೆ ನಮ್ಮ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡರು. ದಾಸಿಮಯ್ಯನು ಅವರನ್ನು ಕ್ಷಮಿಸಿ ಮೈಲಾರನನ್ನು ಕರೆದು, "ನೀನು ನಮ್ಮ ಕೊಡೆಯನ್ನು ಕೊಟ್ಟು ನಿನ್ನ ಮಂದಿರಕ್ಕೆ ಹೋಗು" ಎಂದು ಅಪ್ಪಣೆಯಿತ್ತನು. ಮೈಲಾರನು - ' ಜೀಯಾ, ನಾನು ಕೊಡೆಯನ್ನು ಕೊಡೆನು, ನಿಮ್ಮಂಘ್ರಿಗಳಿಗಿಂತ ನಿಮ್ಮ ಕೊಡೆಯೇ ನನಗೆ ವಿಶೇಷವಾದುದರಿಂದ ಅದು ನನಗೇ ಇರಲಿ" ಎಂದು ಬೇಡಿಕೊಂಡನು. ದಾಸಿಮಯ್ಯನು ಅವನ ಬಿನ್ನಪವನ್ನು ಮನ್ನಿಸಿ ಅವನನ್ನು ಕೊಡೆಸಹಿತ ತಿರಿಗಿ ಕಳುಹಿದನು. ಅಂದಿನಿಂದ ಅವನಿಗೆ ಕೊಡೆಯ ಮೈಲಾರನೆಂದು ಹೆಸರು ಬಿದ್ದಿರುವುದು.

ದಾಸಿಮಯ್ಯನು ತನ್ನ ಪಯಣವನ್ನು ಮುಂದೆ ಸಾಗಿಸಿ ಬಿರುದುಗಳನ್ನು ಹೊಗಳಿಸಿಕೊಳ್ಳುತ್ತ ಉಜ್ಜಯಿನೀ ಪಟ್ಟಣವನ್ನು ಸೇರಿ ಅಲ್ಲಿ ಒಂದು ಈಶ್ವರದೇವಾಲಯದಲ್ಲಿ ಬೀಡು ಬಿಟ್ಟನು. ಅಲ್ಲಿರುವ ಶಾಕ್ತೇಯರ ಸಮೂಹವು ಇವನ ಬಿರುದ

ಬಿಡಿಸಬೇಕೆಂದು ಇವನೆದುರಿಗೆ ಬಂದು ಕೂತು ಹೀಗೆ ಕೇಳಿದರು:- "ಈ ಬಿರುದುಗಳು ನಿಮಗೇಕೆ? ನಿಮ್ಮಂಥ ಜಂಗಮರಿಗೆ ವೇದಶಾಸ್ತ್ರಗಳೇನು ಗೊತ್ತು? ಷಡ್ದರ್ಶನಾಚಾರ್ಯತ್ವವು ಭೂಸುರರಿಗಲ್ಲದೆ ಶೂದ್ರರಿಗೆ ಸಲ್ಲದು." ಇದನ್ನು ಕೇಳಿ ದಾಸಿಮಯ್ಯನು ಕೋಪಿಸಿ ಅಂದದ್ದು - "ಬಾಯ್ಗೆ ಬಂದಂತೆ ಗಳಹದಿರಿ. ಜಂಗಮರಿಗೆ ವೇದಶಾಸ್ತ್ರಗಳು ತಿಳಿಯುವಂತೆ ವಿಪ್ರರಿಗೆ ತಿಳಿಯಲಾರವು. ಕೇಳಿರಿ, ಬ್ರಾಹ್ಮಣರಲ್ಲಿ ನಾಲ್ಕು ಭೇದ: ಶೂದ್ರ ದ್ವಿಜ ವಿಪ್ರ ಬ್ರಾಹ್ಮಣರೆಂದು. ಜನ್ಮದಿಂದ ಶೂದ್ರ, ಉಪನಯನದಿಂದ ದ್ವಿಜ, ಶ್ರುತಿಸಾಧಕನು ವಿಪ್ರ, ಬಹ್ಮನನ್ನು ತಿಳಿದವನು ಬ್ರಾಹ್ಮಣನು. ಈ ಚತುರ್ವಿಧದಲ್ಲಿ ನಿಮ್ಮ ಆಚರಣೆಯಿಂದ ನೀವು ಶೂದ್ರರು. ಬ್ರಾಹ್ಮಣ ಶಬ್ದವು ಲಿಂಗಾಂಗಿಗಳಿಗೇ ಅನ್ವಯಿಸುವುದು. ಶಾಕ್ತೇಯಮತವು ನಾನಾ ಮತಂಗಳಿಗೆ ಜೀವನವೆನ್ನುವಿರಿ. ನೀವು ಮಂಗಳವಾರ ಮತ್ತು ಶುಕ್ರವಾರ ರಾತ್ರಿ ರಹಸ್ಯದಲ್ಲಿ ಮಾತಂಗಿಯ ಪಾದಪೂಜೆ ಮಾಡಿ ಆಕೆಗೆ ಸುರೆಮಾಂಸಗಳನ್ನರ್ಪಿಸಿ ಭೂಸುರರಿಂದ ಅಂತ್ಯಜರವರೆಗೆ ಎಲ್ಲರೂ ತಾರತಮ್ಯವಿಲ್ಲದೆ ಒಂದೇ ಪಾತ್ರೆಯಲ್ಲಿ ಅವುಗಳನ್ನು ಸ್ವೀಕರಿಸಿ, ಸುರಾಪಾನದಿಂದ ಎಚ್ಚರದಪ್ಪಿದರೂ ಮತ್ತೆ ಮತ್ತೆ ಅದನ್ನು ಕುಡಿದು ಮೈಮರೆಯುವಿರಿ! ಅಂಥವರಿಗೆ ಜನನಮರಣಗಳಿಲ್ಲದೆ ಮೋಕ್ಷಪ್ರಾಪ್ತಿಯಾಗುವುದೆನ್ನುವಿರಿ. ಹೀಗೆ ಮಾಂಸಭಕ್ಷಣೆ ಸುರಾಪಾನ ಮಾಡುವವರಿಗೆ ಸದ್ಗತಿಯುಂಟೇ? ಸರ್ವಭೂತಗಳಲ್ಲ ಅಹಿಂಸೆಯನ್ನು ತೋರಿಸಬೇಕೆಂದು ಶ್ರುತಿಯು ಸಾರುವುದು. ಸುರಾಪಾನ ಮಾಡುವವರಿಗೆ ಕಾಮಾದಿ ಷಡ್ರಿಪುಗಳು ಮುತ್ತುವುವು. ಹೊಲಸು ನಾರಿ ಕೊಳೆಯುವ ಸುರೆಯನ್ನು ನೀವು ಕುಡಿಯಬಹುದೇ? ಮಾಂಸ ತಿನ್ನಬೇಕಾದರೆ ಮಾಡುವ ಜೀವಹಿಂಸೆಯು ಪಂಚ ಮಹಾಪಾತಕಗಳಲ್ಲಿ ಹೆಚ್ಚಿನದು."

ಇದನ್ನು ಕೇಳಿ ಶಾಕ್ತೇಯರು - ನಾವಾದರೂ ಪ್ರಾಣಿಗಳನ್ನು ಕೊಂದು ತಿನ್ನುವವರು. ನೀವು ಮಾತ್ರ ಕೊಲೆಗೆಳಸದವರು! ಈ ಮೂರು ಲೋಕಗಳಲ್ಲಿ ಪ್ರಾಣಿಗಳನ್ನು ಕೊಂದು ತಿನ್ನದವರಾರುಂಟು? ಈ ಭೂಮಿಯ ಮೇಲೆ ಬೆಳೆಯುವ ಧಾನ್ಯಗಳು ಪ್ರಾಣಮಯವಲ್ಲವೇ? ಅವನ್ನೇಕೆ ತಿನ್ನುವಿರಿ?

ದಾಸಿಮಯ್ಯ- ವೇದದ ಸೊಲ್ಲಿನಲ್ಲಿ ಚೇತನ ಅಚೇತನ ಪ್ರಾಣ ಎಂಬ ಮೂರು ಭೇದಗಳಿರುವುವು. ಕಲ್ಲು ಲೋಹ ಮೊದಲಾದುವು ಅಚೇತನ. ಗಿಡ ಮೊದಲಾದ ಉದ್ಭಿಜಗಳು ಚೇತನ. ಮನುಜ ಮೃಗ ಪಕ್ಷಿ ಮೊದಲಾದುವು ಪ್ರಾಣ. ಹಿಂಸೆಯಿಂದ ಪ್ರಾಣಕ್ಕೆ ವೇದನೆಯಾಗುವುದು. ಕೂದಲು ಉಗುರುಗಳನ್ನು ಖಂಡಿಸಿದರೆ ಅವಕ್ಕೆ ನೋವಿಲ್ಲದಂತೆ ಚೇತನಾತ್ಮಕ ಪದಾರ್ಥಗಳಿಗೂ ಇಲ್ಲ.

ಶಾ. - ಹಾಗಾದರೆ ನಿಮ್ಮ ರುದ್ರನು ಕಡೆಗಾಲದಲ್ಲಿ ಪ್ರಾಣಿಗಳನ್ನು ಕೊಲ್ಲುವನಲ್ಲಾ?

ದಾ. - ಹಾವಿಗೆ ಚರ್ಮವನ್ನು ಸುಲಿದರೆ ನೋವಾಗುವಂತೆ ಅದು ಪರೆ ಬಿಡುವ ಕಾಲದಲ್ಲಿ ನೋವಾಗುವುದಿಲ್ಲ. ಅದರಂತೆ ಪ್ರಾಣಿಗಳ ಆಯುಷ್ಯ ಮತ್ತು

ಕರ್ಮ ಇವುಗಳ ಬಂಧ ಬಿಡುಗಡೆಯಾದ ಕಾಲದಲ್ಲಿ ಕೊಂದರೂ ಪ್ರಾಣಿಗಳಿಗೆ ನೋವಿಲ್ಲಾದ ಕಾರಣ ಅದನ್ನರಿದು ಶಿವ ಕೊಲ್ಲುವನು.

ಶಾ. - ಹಾಗಾದರೆ ಶಿವನು ಸ್ಮರ ತ್ರಿಪುರ ಕಾಲ ಇವರನ್ನು ಸುಟ್ಟು ಅಂಧಕನನ್ನು ಕೊಂದು ಬ್ರಹ್ಮನ ತಲೆಯನ್ನು ಕತ್ತರಿಸಿದನು. ಇವರು ಪ್ರಾಣಿಗಳಲ್ಲವೇ?

ದಾ. - ಸ್ಮರನೆಂದರೆ ಕಾಮ. ತ್ರಿಪುರವೆಂದರೆ ಜ್ಞಾತೃ ಜ್ಞೇಯ ಜ್ಞಾನವೆಂಬ ತ್ರಿಪುಟಿಗಳು. ಕಾಲವೆಂದರೆ ಭೂತ ವರ್ತಮಾನ ಭವಿಷ್ಯವೆಂಬ ತ್ರಿಕಾಲ. ಅಂಧಕನೆಂದರೆ ತಮೋಗುಣ. ಬ್ರಹ್ಮನೆಂದರೆ ಜೀವಾತ್ಮ. ಫಾಳಲೋಚನವೆಂದರೆ ಜ್ಞಾನನೇತ್ರ. ಅಲ್ಲಿರುವ ಶಿಖಿಯೇ ಜ್ಞಾನಾಗ್ನಿ. ಕರುಣಾಕರನಾದ ಶಿವನು ತ್ರಿಕಾಲ ಕಾಮ ತ್ರಿಪುಟಿಗಳನ್ನು ಜ್ಞಾನಾಗ್ನಿಯಿಂದ ಜಯಿಸಿ ತಮೋಮಯವಾದ ಕರ್ಮವನ್ನು ಚಿದಾನಂದಪದದಿಂದ ಮೆಟ್ಟಿ ಮಲಯುತ ಜೀವಾತ್ಮನಲ್ಲಿ ವೈರಾಗ್ಯವನ್ನು ತುಂಬಿ ಪರಮಾತ್ಮನೆನಿಸಿದನು. ಇದನ್ನರಿಯದೆ ಶಿವನು ಪ್ರಾಣಿಗಳನ್ನು ಕೊಲ್ಲುವನೆನ್ನುವಿರಿ.

ಶಾ. - ಈ ಲೋಕವೆಲ್ಲವು ಮಾಯಾಮಯ. ಮಾಯಾಪಾಶವೇ ಶಕ್ತಿ. ಈ ಶಕ್ತಿಯೇ ಬ್ರಹ್ಮವಿಷ್ಣುರುದ್ರರನ್ನು ಪಡೆದವಳು, ಪಾಪಪುಣ್ಯೋಭಯಗುಣಗಳನ್ನು ವ್ಯಾಪಿಸಿಹಳು. ಬಾಹ್ಯದಲ್ಲಿ ತಾಮಸರೂಪ ಹೊಂದಿ ಮಾಕಾಳಿಯೆನಿಸಿದಳು.

ದಾ. - ಮಾಯೆಯ ನಿಜ ಸ್ವರೂಪವನ್ನು ಕೇಳಿರಿ. ಕಿಂಚಿಜ್ಞರಾದ ಜೀವಾತ್ಮರೆಲ್ಲ ಪಶು, ಮಾಯಾಪಂಚಕವೇ ಪಾಶ, ಪರಶಿವನೆ ಪತಿಯೆಂದು ವೇದವು ಹೇಳುತ್ತಿರುವುದು.

ಶಾ. - ಪಶು ಪಾಶ ಪತಿ ಇವುಗಳಲ್ಲಿ ಆದಿಯಾವುದು ಅನಾದಿಯಾವುದು?

ದಾ. - ಮೂರೂ ಅನಾದಿಯೇ. ಆದರೆ ಅವುಗಳಲ್ಲಿ ತಾರತಮ್ಯದ ಭೇದವುಂಟು.

ಶಾ. - ಇವು ಒಂದಕ್ಕೊಂದು ಸಂಬಂಧವಾಗಿರುವುವೋ ಇಲ್ಲವೋ?

ದಾ. - ಆತ್ಮನು ಅಜ್ಞಾನದಿಂದ ಪಶುವಾದ. ಐದು ಪಾಶಗಳು ಅವನ ಬಂಧನವು. ಆದಿಮಧ್ಯಾಂತರಹಿತನಾಗಿ ಶಿವನು ಪತಿಯೆನಿಸಿ ಅತ್ಯತಿಷ್ಠದ್ದಶಾಂಗುಲನೆನಿಸಿದನು. ಪಶುವಿನ ಪಾಶದ ಬೆಸುಗೆ ಬಿಟ್ಟರೆ ಪಶುವಾದ ಜೀವಾತ್ಮನು ಶಿವನೊಳೈಕ್ಯಹೊಂದುವನು.

ಶಾ. - ಅದು ಹೇಗೆ?

ದಾ. - ಸೂಜಿಗಲ್ಲು ಸೂಜಿಯನ್ನು ಎಳಕೊಳ್ಳುವ ಹಾಗೆ ಪರಶಿವನ ಅಂಶವು ಪಶುವಿನಲ್ಲಿರುವುದರಿಂದ ಪಾಶವು ಹರಿದು ಹೋದ ಕೂಡಲೆ ಅವನು ಪರಶಿವನಲ್ಲಿ ಬೆರೆಯುವನು. ನಿಮ್ಮ ಮಾಯಾಂಗನೆ ಶಿವನ ತೊತ್ತಲ್ಲದೆ ಬೇರೆಯಲ್ಲ.

ಶಾ. - ಹಾಗೇ ಆಗಲಿ. ನೀವು ರುದ್ರಭಕ್ತರು ರುದ್ರರೇ ಎನುತಿಹಿರಿ. ಅಂದ ಮೇಲೆ ನೀವೂ ರುದ್ರರೇ. ನಿಮ್ಮ ತೊತ್ತಾಗಿ ಮಾಯಾಂಗನೆ ನಿಮ್ಮೊಳಿಗವನ್ನು ಏಕೆ ಮಾಡಳು?

ದಾ. - ನಿಮ್ಮಿಷ್ಟದೇವತೆಯ ಹೆಸರು ಹೇಳಿದರೆ ಆಕೆಯ ಕೈಯಿಂದ ನಾನು ಊಳಿಗವನ್ನು ಮಾಡಿಸುವೆನು. ಆ ಮೇಲೆ ನೀವು ನನ್ನ ಪದಗಳಿಗೆರಗಬೇಕು.

ಶಾ. - ನಮ್ಮ ದೇವತೆ ಮಹಾಕಾಳಿ. ಆಕೆಯು ನಿಮ್ಮ ಸೇವೆ ಮಾಡಿದ ಮೇಲೆ ನಮ್ಮ ಪಾಡೇನು? ನೀವು ಹೇಳಿದಂತೆ ಮಾಡುವೆವು.

ಇದನ್ನು ಕೇಳಿ ದಾಸಿಮಯ್ಯನು ವಕ್ತ್ರಪಾದನಿಗೆ ಹೇಳಿ ಮಹಾಕಾಳಿಯನ್ನು ಕರೆಯಿಸಿದನು. ಆಕೆ ಹರುಷದಿಂದ ಅಡ್ಡಬೀಳುತ ಹೊಗಳುತ ಬಂದು ವಂದಿಸಿ ಕೈಮುಗಿದು ಮುಗ್ಗುಲಲ್ಲಿ ನಿಂತಳು. ಆಗ್ಗೆ ಉಗುಳಲೆಂದು ದಾಸಿಮಯ್ಯನು ಅತ್ತಿತ್ತ ನೋಡಿದನು. ಆಕೆ ಕೈಯ್ಯೊಳಿನ ಕತ್ತಿಯನ್ನು ಚೆಲ್ಲಿ ಬಟ್ಟಲ ತಂದು ಮುಂದೆ ಹಿಡಿದಳು. ದಾಸಿಮಯ್ಯನು ಅದರಲ್ಲಿ ಉಗಳಲು, ಆಕೆ ಅದನ್ನು ಸ್ವೀಕರಿಸಿ ಉಳಿದದ್ದನ್ನು ಮೈಯ್ಗೆ ತೊಡೆದುಕೊಂಡಳು. ಇದನ್ನು ನೋಡಿ ಶಾಕ್ತೇಯರು ದಾಸಿಮಯ್ಯನನ್ನು ಭಕ್ತಿಯಿಂದ ಹೊಗಳಿ ತಮ್ಮ ತಪ್ಪನ್ನು ಕ್ಷಮಿಸಿ ಸಲಹಬೇಕೆಂದು ಬೇಡಿ ಪಾದಗಳಿಗೆರಗಿದರು. ದಾಸಿಮಯ್ಯನು ಅವರ ಶಿರವಿಡಿದೆತ್ತಿ ಎಲ್ಲರನ್ನು ಸಂತಯಿಸಿ ಮಹಾಕಾಳಿಯನ್ನು ಬೀಳ್ಕೊಟ್ಟು ಭೂತಗಣಸಹಿತ ಮುಂದಕ್ಕೆ ತೆರಳಿದನು.

ಹೀಗೆ ಸಾಗಿರಲು ಮುಂದೊಂದು ಪುರದ ಬಾಗಿಲ ಹೊರಗಿರುವ ಭೈರವನ ಮಂದಿರದಲ್ಲಿ ನವನಾಥಸಾಂಪ್ರದಾಯದ ಸಿದ್ಧರು ಬತ್ತಿಯಂತೆ ಹೊಸೆದ ತಲೆಯ ಕೂದಲು ಮೆಯ್ತುಂಬ ಬೂದಿ ಮುಂತಾದ ತಮ್ಮ ವೇಷದಿಂದ ಮಾಂಸವನ್ನು ತಿನ್ನುತ್ತ ಪರ್ಣವನ್ನು ಮೆಲ್ಲುತ್ತ ಭಂಗಿಯನ್ನು ಮುಕ್ಕುತ್ತ ಸಿಂದಿಯನ್ನು ಕುಡಿಯುತ್ತ ಎಚ್ಚರದಪ್ಪಿ ಜೋಲುತ್ತ ಹಾಡುತ್ತ ಕುಣಿದಾಡುತ್ತ ಇರುವುದನ್ನು ಕಂಡು ಇಂಥವರನ್ನು ನೋಡಲಾಗದೆಂದು ದಾಸಿಮಯ್ಯನು ಕೊಡೆಯನ್ನು ಮರೆಯಾಗಿ ಹಿಡಿಸಿಕೊಂಡು ಹೋಗುತ್ತಿದ್ದನು.

ಇದನ್ನು ನೋಡಿ ಸಿಟ್ಟಿಗೆದ್ದು ಜೋಗಿಗಳು - ಲೋಕದಲ್ಲಿ ಜೋಗಿಯೇ ಗುರು. ನಾಥಮತಕ್ಕೆ ಉಳಿದ ಮತಗಳು ಸರಿಬರುವುವೇ? ಭೈರವಾರ್ಚಕರು ಲೋಕಖ್ಯಾತರಲ್ಲವೇ? ಇವರನ್ನು ನೋಡದ ಪರಿಯಾವುದು?

ಇದನ್ನು ಕೇಳಿ ಕೋಪಾಟೋಪದಿಂದ ಕಣ್ಣು ಕೆಂಪಗೆ ಮಾಡಿ ದಾಸಿಮಯ್ಯನು - ನಿಮ್ಮ ದೊಡ್ಡಸ್ತನದ ಮಾತು ಸಾಕು ಮಾಡಿರಿ. ವಸ್ತುವಿವೇಕ ನಿಮಗೆಲ್ಲಿಯದು? ನೀವು ಸುಮಾರ್ಗಬಾಹಿರರು. ನೀವು ಲೋಕಾರಾಧ್ಯರೆಂಬ ನುಡಿ ಕೇಳಲಾಗದು.

ಸಿದ್ಧರು - ನಾವು ಲೋಕಕ್ಕೆ ಗುರುವಲ್ಲವೇ? ಚಪ್ಪನ್ನ ದೇಶದೊಳಗೆ ಎಲ್ಲ ಕಡೆ ನಾವು ತಿರುಗುವೆವು. ಚರಿಸಿದಲ್ಲದೆ ಮೋಕ್ಷವು ಕಾಣಿಸದು. ಚರತಿ ಮೋಕ್ಷಾರ್ಥಂ ಎಂದು ಶ್ರುತಿಯುಂಟು. ಮೌನದಿಂದ ಕಂಭಕ್ಕೆ ಕಟ್ಟಿದ ಎತ್ತಿನಂತೆ ಒಂದೇ ಸ್ಥಳದಲ್ಲಿದ್ದರೆ ಅವರಿಗೆ ಮೋಕ್ಷವುಂಟೇ? ಮಾನಸ ಹಿಮಾಲಯ ಕುಮಾರ (ಕಾರ್ತಿಕಸ್ವಾಮಿ) ಪರ್ವತ ಕದಳಿ ಶ್ರೀಶೈಲ ಕುಂಭಕೋಣ ಮುಂತಾದ ಕ್ಷೇತ್ರಗಳನ್ನು ಸುತ್ತಿ

ಅವುಗಳಲ್ಲೊಂದರಲ್ಲಿ ಶರೀರವನ್ನು ತ್ಯಜಿಸಿದರೆ ಮೋಕ್ಷವೆಂದು ಕಪಾಲಮತದಲ್ಲಿ ಹೇಳಿರುವುದು.

ದಾಸಿಮಯ್ಯ - ಕಾಗಿ ಎಲ್ಲ ಕಡೆ ತಿರ್ರನೆ ತಿರುಗುವುದು. ರಾಜಮರಾಳವು ಒಂದೇ ಸ್ಥಳದಲ್ಲಿರುವುದು. ಅದಕ್ಕೆ ಕೊರತೆಯೇ? ನೀವು ಹಾಳು ಮನೆ ಹಾಳೆಂಬಂತೆ ಬಹು ದೇಶಗಳನ್ನು ತಿರುಗಿದರೆ ನೀವು ಯೋಗ್ಯರೆ? ಚಲನದಿಂದ ಮೋಕ್ಷವಿಲ್ಲ. ನೀರು ಅಲ್ಲಾಡಿದರೆ ಚಂದ್ರಬಿಂಬವು ಕಲಕುವುದು. ಅಲ್ಲಾಡದಿದ್ದರೆ ಅದು ಸ್ಥಿರವಾಗಿ ತೋರುವುದು. ಸ್ತಂಭವಾದ ಬ್ರಹ್ಮವು ದೇಹಸ್ತಂಭದಿಂದ ವಶವಾಗುವುದೆಂದು ಶಾಸ್ತ್ರವು ಸಾರುವುದು.

ಹೀಗೆಂದು ಹಠಯೋಗ ಲಯಯೋಗ ರಾಜಯೋಗಗಳನ್ನು ವಿಸ್ತರಿಸಿ ಚಲನದಿಂದ ಮೋಕ್ಷವು ದೊರೆಯದೆ ಕಾಮವಿಕಾರವು ಹೆಚ್ಚಾಗುವುದೆಂದು ನುಡಿದನು. ಇದನ್ನು ಕೇಳಿ ಜೋಗಿಗಳು - "ನಮ್ಮ ಮಾರ್ಗದಿಂದ ಸಾಕ್ಷಾತ್ ಶಿವನಳವಡುವನು. ನಮ್ಮ ಮತವನ್ನೆದುರಿಸುವ ಮತಗಳುಂಟೇ? ಅದನ್ನು ನೀನು ದೂಷಿಸುವೆಯಲಾ? ನಮ್ಮ ಪರಾಕ್ರಮವನ್ನು ನೋಡು" ಎಂದು ದಾಸಿಮಯ್ಯನನ್ನು ಸುಟ್ಟುರುಪಲು ಒಂದು ಮಹಾಭುಜಂಗವನ್ನು ಬಿಟ್ಟರು. ಅವನು ತನ್ನ ಕಮಂಡಲೋದಕವನ್ನು ಅದರ ಮೇಲೆ ಸಿಂಪಡಿಸಲು ಉದಕವು ಗರುಡನಂತೆ ಆ ಸರ್ಪವನ್ನು ಎತ್ತಿಕೊಂಡು ಹೋಯಿತು. ಆಮೇಲೆ ಅವರು ಅವನ ಮೇಲೆ ಒಂದು ಮದ್ದಾನೆಯನ್ನು ಬಿಟ್ಟರು. ಅವನು ಒಂದು ಹುಲ್ಲುಕಡ್ಡಿಯನ್ನು ಮಂತ್ರಿಸಿ ಅದರ ಮೇಲೆ ಚೆಲ್ಲಿದನು. ಅದು ಆನೆಯನ್ನು ಸಿಂಹದೋಪಾದಿಯಲ್ಲಿ ಸೀಳಿತು. ಆ ಮೇಲೆ ಅವರು ಸಿಟ್ಟಿನಿಂದ ಒಂದು ಭೂತವನ್ನು ಬಿಟ್ಟರು. ದಾಸಿಮಯ್ಯನು ಒಂದು ಭೂತಕ್ಕೆ ಸೂಚಿಸಲು, ಅದು ಭೈರವರ ಭೂತವನ್ನು ತಿಂದು ಹೊಟ್ಟೆ ತುಂಬದೆ ಜೋಗಿಗಳನ್ನು ತಿನ್ನಲಿಕ್ಕೆ ಅವರ ಬೆನ್ನಟ್ಟಿತು. ಅವರು ತಮ್ಮ ಚರ್ಮದ ಹೊದಿಕೆಗಳನ್ನು ಬಿಟ್ಟು ಓಡಿಹೋದರು. ಇದನ್ನು ಕಂಡು ಭೈರವನು ನಡುಗುತ್ತ ಬಂದು ದಾಸಿಮಯ್ಯನಿಗೆ ಭಕ್ತಿಯಿಂದೆರಗಿ - "ಜೋಗಿಗಳು ಎಚ್ಚರದಪ್ಪಿ ಬೊಗಳಿದರೆ ನಿಮಗೆ ಕೊರತೆಯೇ? ಅವರ ಮೇಲೆ ಕೋಪ ಮಾಡದೆ ಅವರನ್ನು ರಕ್ಷಿಸು" ಎಂದು ಬೇಡಿಕೊಂಡನು. ದಾಸಿಮಯ್ಯನು ಕೃಪೆಯಿಂದ ಭೈರವನ ಶಿರವನ್ನು ಹಿಡಿದೆತ್ತಿ ಭೂತವು ಜೋಗಿಗಳ ತಂಡವನ್ನು ನಾಶಮಾಡುವುದನ್ನು ಬಿಡಿಸಿದನು. ಅವರು - "ನೀನೇ ಆದಿನಾಥನು, ಅಜ್ಞಾನದಿಂದ ನಿನ್ನೊಡನೆ ವಾದಿಸಿದೆವು, ನಮ್ಮನ್ನು ಕ್ಷಮಿಸಿ ರಕ್ಷಿಸಬೇಕು" ಎಂದು ಅವನ ಪಾದಗಳಲ್ಲಿ ಹೊರಳಾಡಿದರು. ದಾಸಿಮಯ್ಯನು ಅವರನ್ನು ಮನ್ನಿಸಿ ಕಳುಹಿ, ಭೈರವನಿಗೆ ಅಪ್ಪಣೆ ಕೊಟ್ಟು ಸುರಸಮೂಹದೊಡನೆ ನವಿಲೆಗೆ ಮುಟ್ಟಿದನು. ಅಲ್ಲಿಯ ಭಕ್ತರು ಅವನನ್ನು ಸಂತೋಷದಿಂದಿದಿರ್ಗೊಂಡು ಪಾದಕ್ಕೆರಗಿದರು. ಅವನು ತಿರಿಗಿ ಅವರಿಗೆರಗಿ ಜಡೆಯ ಶಂಕರನ ಮಂದಿರಕ್ಕೆ ಬಂದು ಆತನನ್ನು ಎವೆಯಿಡದೆ ನೋಡಿ ವಂದಿಸಿ ಪೊಗಳಿ ತನ್ನ ಬಿಡಾರಕ್ಕೆ ಬಂದು ಎಲ್ಲರನ್ನು ಕಳುಹಿಸಿ ಆನಂದದೊಳಗಿರ್ದನು.

ಹೀಗಿರುವಲ್ಲಿ ಒಂದು ದಿನ ದಾಸಿಮಯ್ಯನು ವಕ್ತ್ರಪಾದನನ್ನು ಧಾನ್ಯ ಬೇಡಲಿಕ್ಕೆ ಕಳುಹಿದಾಗ್ಗೆ ಅವನು ಒಂದು ಮನೆಯಲ್ಲಿ ಧಾನ್ಯವನ್ನು ಬೇಡಿದನು. ಆ ಮನೆಯವರು "ದೇವರೆ, ಶಂಕರಗಂಡ ಈ ಹೊತ್ತು ಹೆಚ್ಚಿದುದು" ಎಂದು ಹೇಳಿದರು. ಶಂಕರಗಂಡ ಎಂದರೇನೆಂದು ಕೇಳಲು, ಅವರು ಶಂಕರಗಂಡ ಎಂದರೆ ಜೋಳವೆಂದು ಉತ್ತರ ಕೊಟ್ಟರು. ಇದನ್ನು ಕೇಳಿ ವಕ್ತ್ರಪಾದನು ಮನೆಗೆ ಬಂದು ದಾಸಿಮಯ್ಯನಿಗೆ ಈ ಸಂಗತಿಯನ್ನು ತಿಳಿಸಿದನು. ದಾಸಿಮಯ್ಯನು ಮನನೊಂದು " ಜೋಳಕ್ಕೆ ಶಂಕರ ಗಂಡ ಎಂಬ ಹೆಸರಿದ್ದದ್ದು ಈ ಹೊತ್ತಿನವರೆಗೆ ನನಗೆ ಗೊತ್ತಿರಲಿಲ್ಲ, ಭಾಳಲೋಚನ ನೆಂದು ಹೆಸರಿದ್ದುದೆಲ್ಲ ಭಾಳಲೋಚನನೆಂದು ಶಾಸ್ತ್ರವು ಹೇಳುವುದರಿಂದ ಇನ್ನು ಮೇಲೆ ನಾನು ಜೋಳದ ಬೋನವನ್ನು ಸಲಿಸಬಾರದು. " ಹೀಗೆಂದು ಅಂದಿನಿಂದ ಗುಂಜಿಗಳ ಸಾರವನ್ನೂ ಲೋಳಿಸರವನ್ನೂ ಸಲಿಸುತ್ತ ಸುಖವಾಗಿರುತ್ತಿದ್ದನು.

ಮುಂದೆ ಒಂದು ದಿನ ಅವನು ಎಂದಿನಂತೆ ಶಂಕರನ ಪೂಜೆ ಮಾಡಿ ಅವನನ್ನು ಹೊಗಳುತ್ತಿರಲು. ಶಂಕರನು – " ನಿನ್ನ ಸದ್ಭಕ್ತಿಗೆ ಮತ್ತು ಸದಾಚಾರಕ್ಕೆ ನಿನ್ನರಸಿಯ ಪವಿತ್ರತೆಗೆ ಓರಗೆಯ ಕಾಣೆನು. ನಿಮಗೆ ಪುತ್ರನಿಲ್ಲದುದೊಂದೇ ಕೊರತೆ " ಎಂದು ನುಡಿದದ್ದಕ್ಕೆ ದಾಸಿಮಯ್ಯನು ಅಂದದ್ದು – " ನನಗೆ ಪುತ್ರನೇಕೆ ಬೇಕು ? ಈಶ್ವರಭಕ್ತ ರಿಗೆ ನಾ ಪುತ್ರನಾಗಿ ನಿಮ್ಮ ಪಾದಕಮಲಗಳನ್ನು ಧ್ಯಾನಿಸುವುದೇ ನನಗೆ ಸಂತಾನಫಲ. ಹಿಂದೆ ಮಾಡಿದ ಕರ್ಮದಿಂದ ಈ ಶರೀರವು ಆತ್ಮನನ್ನು ಬಂಧಿಸಿರುವುದು. ಅದರ ಬಿಡುಗಡೆಯಾಗುವುದೊಂದೇ ಚಿಂತೆ. ಈ ದೇಹವೇ ಸೆರೆಮನೆ. ಆಯುಷ್ಕರ್ಮಗಳೇ ಬೇಡಿಗಳು. ಈ ಸಂಸಾರಸುಖವನ್ನು ತ್ಯಜಿಸಿ ಸದ್ಭಕ್ತಿಯೊಳು ನಿಮ್ಮ ಶ್ರೀಪಾದಗಳನ್ನು ಸಂದುವುದೆ ಸಂತಾನಫಲ. " ಇದನ್ನು ಕೇಳಿ ಶಂಕರನು – " ಮಗನೇ, ನೀನು ಏನು ಹೇಳಿದರೂ ನನ್ನ ಮನಸು ಒಡಂಬಡದು. ಗೃಹಸ್ಥಾಶ್ರಮಿಗೆ ಮಗನಿಲ್ಲ ದಿದ್ದರೆ ಪಾಪ. ಅವನೇ ದುಃಖವನ್ನು ನಾಶಪಡಿಸುವವ, ಅವನೇ ಸತ್ಕುಲನಂದನಕ್ಕೆ ಚೈತ್ರಮಾಸ, ಪರಮಮೋಕ್ಷಾರ್ಥಗಳನ್ನು ತೋರಿಸುವವ, ಮಗನಿಲ್ಲದ ಬಾಳು ಬಾಳಲ್ಲ, ನಿನಗಿನ್ನು ಒಂಬತ್ತು ವರುಷಕ್ಕೆ ಅವಸಾನಕಾಲ, ನಿನಗೊಬ್ಬ ಮಗನನ್ನು ಕೊಡುವೆನು " ಎಂದು ಹೇಳಿ ಅವನಿಗೆ ರುದ್ರಪಿಂಡವನ್ನು ಕೊಟ್ಟನು. ದಾಸಿಮ ಯ್ಯನು ಅದನ್ನು ತೆಗೆದುಕೊಂಡು ಹೋಗಿ ತನ್ನ ಮಡದಿಗೆ ಕೊಟ್ಟನು. ಆಕೆ ಸಂತೋಷದಿಂದ ಅದನ್ನು ಸ್ವೀಕರಿಸಿದಳು. ಮುಂದೆ ಅವಳು ಗರ್ಭವತಿಯಾಗಿ ಒಂಬತ್ತು ತಿಂಗಳು ತುಂಬಿದ ಮೇಲೆ ಶುಭನಕ್ಷತ್ರದಲ್ಲಿ ಮಗನನ್ನು ಪಡೆದಳು. ಅವನು ಶುಕ್ಲಪಕ್ಷದ ಚಂದ್ರನಂತೆ ಬಳೆದ ಹಾಗೆ ಗಣನಾಥನು ಅವನಿಗೆ ಅಕ್ಷರಗಳಿಂದ ಸಕಲ ಮತ ತತ್ವಗಳವರೆಗೆ ಶಿಕ್ಷಣ ಕೊಟ್ಟು ತಂದೆಯಂತೆ ವೇದಶಾಸ್ತ್ರಗಳಲ್ಲಿ ಸಮರ್ಥನ ಮಾಡಿದನು. ದಾಸಿಮಯ್ಯನು ಇದನ್ನು ನೋಡಿ ಸಂತೋಷದಿಂದ ಶಿವ ದಾಸಿಗೆ– "ಬರುವ ಸೋಮವಾರ ನಮ್ಮವಸಾನಕಾಲ, ದೊಡ್ಡ ಉತ್ಸವವನ್ನು ಮಾಡ ಬೇಕು " ಎಂದು ನುಡಿಯಲು, ಆಕೆಯು ಎಲ್ಲ ಸಿದ್ಧತೆಯನ್ನು ಮಾಡತೊಡಗಿದಳು.

ದಾಸಿಮಯ್ಯನು ಕಲಿಯುಗದ ಧರ್ಮವನ್ನೂ ಗುರುವಿನ ಮಹಾತ್ಮೆಯನ್ನೂ ಮಗನಿಗೆ ಬೋಧಿಸಿ ಅವನನ್ನು ಭಕ್ತರ ಕೆಯ್ಯಲ್ಲಿ ಕೊಟ್ಟು ರಕ್ಷಿಸೆಂದು ಹೇಳಿ ಅವರ ಅಪ್ಪಣೆ ಪಡೆದು ಜಡೆಯ ಶಂಕರನಿದಿರಿನಲ್ಲಿ ಮಡದಿಗಣನಾಥಸಹಿತ ಮಂಡಿಸಿ ತಮ್ಮನ್ನೊಳ ಕೊಳ್ಳೆಂದು ಬೇಡಿಕೊಂಡನು. ಜಡೆಯ ಶಂಕರಲಿಂಗವು ಅವರನ್ನು ಕಂಡ ಕೂಡಲೆ ಸೂರ್ಯನ ಕಂಡ ಕಮಲದಂತೆ ಬಾಯ್ದೆರೆಯಲು, ಉರಿಯೊಳಗೆ ಕರ್ಪೂರ ಜಲ ದೊಳಗೆ ಜೇನು ಕ್ಷಾರವಾರಿಯಲ್ಲಿ ಲವಣ ಕೂಡಿಕೊಳ್ಳುವಂತೆ ಅವರೆಲ್ಲರು ಆ ಲಿಂಗದಲ್ಲಿ ಬೆರೆದರು. ದಾಸಿಮಯ್ಯನು ನವಿಲೆಯ ಹತ್ತರಿನ ಊರಲ್ಲಿದ್ದು ಶಿವಸಾಲೋಕ್ಯವನ್ನು, ನವಿಲೆಯಲ್ಲಿರಲು ಬಂದು ಶಿವಸಾಮೀಪ್ಯವನ್ನು, ಹಣೆಗಣ್ಣ ಪಡೆದು ಶಿವಸಾರೂಪ್ಯ ವನ್ನು, ಶಿವನೊಳಗೆ ಬೆರೆದು ಶಿವಸಾಯುಜ್ಯವನ್ನು ಪಡೆದನು. ದುಂದುಭಿಧ್ವನಿಯಾಗೆ ದೇವತೆಗಳು ಹೂಮಳೆಗರೆಯೆ ಶಿವಶರಣಸಮೂಹವು ರುದ್ರಕನ್ನೆಯರು ಉಘೆ ಉಘೆ ಎಂದು ಮಣಿಪುಷ್ಪಕವಿಮಾನವನ್ನು ತೆಗೆದುಕೊಂಡು ಬಂದು ಆ ಮೂವರನ್ನು ಅದರಲ್ಲಿ ಕುಳ್ಳಿರಿಸಿಕೊಂಡು ಶಿವಲೋಕಕ್ಕೆ ಒಯ್ದು ಇಂದುಧರನ ಕಾಣಿಸಿದರು. ಅವನು ಆ ಮಹಾತ್ಮರನ್ನು ತನ ಹೃದಯಲ್ಲಿಂಬಿಟ್ಟುಕೊಂಡನು.

**ಭದ್ರಂ ! ಶುಭಂ !! ಮಂಗಲಂ !!!**



# ಪ್ರ ಸ್ತಾ ವ ನೆ

## (೧) ಕವಿಯ ಹೆಸರು, ಸ್ಥಳ, ಕಾಲ, ಪುರಾಣದ ಮಾತೃಕೆ, ಪುರಾಣವಿಮರ್ಶೆ

ಈ ಪುರಾಣವನ್ನು ಬರೆದ ಕವಿಯ ಹೆಸರು ಮಲ್ಲಿಕಾರ್ಜುನ. ತನ್ನನ್ನು ಪಂಡಿತ ಮಲ್ಲಿಕಾರ್ಜುನ (ಸಂಧಿ ೧, ಪದ್ಯ ೧೫) ನೆಂದು ಹೇಳಿಕೊಂಡಿರುವುದರಿಂದ ಇವನು ಆಕಾಲದಲ್ಲಿ ಪಂಡಿತನಾಗಿ ಗಣಿಸಲ್ಪಡುತ್ತಿದ್ದನೆಂದು ತಿಳಿದು ಬರುತ್ತದೆ. ಇವನ ಊರು ಪೊಳಲ್‌ಗುಂದ. ಅಲ್ಲಿಯ ಕಲ್ಲಿನಾಥದೇವರ ಭೃತ್ಯ. ನಾಗಲಿಕ ವಂಶೋದ್ಧಾರಕನಾದ ಚನ್ನವೀರಯ್ಯನ ತನುಜ ಸೂಜಿಯ ಕಾಯಕದ ಸಂಗಯ್ಯನ ಪುತ್ರ ಸಂಗಿಸೆಟ್ಟಿಯ ಪ್ರೇರಣೆಯಿಂದ ಪ್ರಭವ ಸಂವತ್ಸರದೊಳೆಸೆದಿಹ ಪುಷ್ಯಮಾಸಾಂತರದಿ ಬಹುಳ ದ್ವಾದಶಿಗೆ ಈ ಕಾವ್ಯವನ್ನು ಮುಗಿಸಿದನೆಂಬುದಾಗಿ ಹೇಳಿರುವನು (ಸಂಧಿ ೧, ಪದ್ಯ ೧೪, ೨೨-೨೬, ಸಂಧಿ ೧೬, ಪದ್ಯ ೬೬-೬೯).

ಪೊಳಲ್ಗುಂದವು ಬಳ್ಳಾರಿ ಜಿಲ್ಹೆಯ ಆಲೂರ ತಾಲೂಕಿನಲ್ಲ ಬಳ್ಳಾರಿಯಿಂದ ಉತ್ತರಕ್ಕೆ ಸುಮಾರು ೨೪ ಮೈಲುಗಳ ಅಂತರದಲ್ಲಿರುವ ಹೊಳಲಗುಂದಿ ಎಂಬ ಗ್ರಾಮವಿರಬಹುದು. ಆದರೆ ಈ ಗ್ರಾಮದಲ್ಲಿ ಕಲ್ಲಿನಾಥನ ದೇವಾಲಯವಿರುವುದಿಲ್ಲ. ಅದೇ ಜಿಲ್ಹೆಯ ಹಡಗಲಿ ತಾಲೂಕಿನಲ್ಲ ಹಡಗಲಿಯಿಂದ ಪೂರ್ವಕ್ಕೆ ಸುಮಾರು ೫ ಮೈಲುಗಳ ಅಂತರದಲ್ಲಿ ಹೊಳೆಗುಂದಿ ಎಂಬ ಗ್ರಾಮವಿರುವುದು. ಅಲ್ಲಿ ಕಲ್ಲಿನಾಥನ ದೇವಾಲಯವಿದ್ದಂತೆ ತಿಳಿಯುತ್ತದೆ. ಕವಿಯ ಆರಾಧ್ಯ ದೇವತೆಯಾದ ಕಲ್ಲಿನಾಥನು ಈತನೇ ಇರಬಹುದು.

ತಾನು "ಚಿಕ್ಕವೀರ ಶಾಂತೇಶ್ವರನ ಮಂದಿರದೊಳಗೆ ಒಪ್ಪಿರಲು ಶಂಕರದಾಸಿಮಯ್ಯಗಳೊಪ್ಪಿ ನಡೆದ ಚರಿತ್ರಮಂ ಪೇಳೆನಲು ಕೈಕೊಂಡು ಸೊಲ್ಲಿಸಿದೆ" ನೆಂದು (ಸಂಧಿ ೧೬, ಪದ್ಯ ೬೬-೬೮) ಹೇಳಿರುವುದರಿಂದ ಅಲ್ಲಿಯೇ ಈ ಕಾವ್ಯವನ್ನು ಮುಗಿಸಿದ ಮೇಲೆ ಓದಿ ಹೇಳಿರಬಹುದು. ಇದು ಮುಗಿದ ಸಂವತ್ಸರ ಮೊದಲಾದವುಗಳನ್ನು ಹೇಳಿ ಶಕ ವರ್ಷವನ್ನಾಗಲಿ ವಾರದ ದಿನವನ್ನಾಗಲಿ ಹೇಳದಿರುವುದರಿಂದ ವರ್ಷವನ್ನು ನಿಶ್ಚಯಾತ್ಮಕವಾಗಿ ನಿರ್ಣಯಸಲಿಕ್ಕೆ ಬರುವುದಿಲ್ಲ. ಪ್ರಾಕ್ತನವಿಮರ್ಶವಿಚಕ್ಷಣ ರಾವ ಬಾಹದ್ದೂರ ಮಹಾಮಹೋಪಾಧ್ಯಾಯ ಆರ್. ನರಸಿಂಹಾಚಾ

ರ್ಯರು ತಮ್ಮ ಕವಿಚರಿತೆಯಲ್ಲಿ ಇವನ ಕಾಲವು ಶಾಲಿವಾಹನ ಶಕ ೧೬೦೯ (ಕ್ರಿ. ಶ. ೧೬೮೭) ಎಂದು ಅಭಿಪ್ರಾಯ ಪಟ್ಟಿರುವರು. ಕವಿಯು ಪಾಲ್ಕುರಿಕೆ ಸೋಮೇಶ ಅಜಗಣ್ಣ ಮಲುಹಣ ಬಾಣ ಮಯೂರ ಉದ್ಭಟ ಕೆರೆಯ ಪದ್ಮರಸ ರಘುಶೇಖರ ಹರಿಹರ ಈ ಪೂರ್ವ ಕವಿಗಳನ್ನು ಸ್ಮರಿಸಿರುವನು ( ಸಂಧಿ ೧, ಪದ್ಯ ೧೦, ೧೨, ೧೩ ). ' ಅ ', ' ಉ ' ಪ್ರತಿಗಳಲ್ಲಿರುವ,

ಗರುವ ಭಟ್ಟ ಮಹಿಮ್ನ ರಾಘವ । ಲೀಲೆ ಚಾಮರಸಾದಿ ಸುಕವೀ ।
ಶ್ವರರ ಪಾದಾಂಬುಜಗಳುಂ ನೆಲಸಿರ್ಕೆ ಮನ್ಮನದಿ ॥ (ಸಂಧಿ ೧, ಪದ್ಯ ೧೨)

ಎಂಬ ಪಾಠಾಂತರದಲ್ಲಿ ಚಾಮರಸನ ಹೆಸರು ಬಂದಿರುವುದರಿಂದ ಈ ಕವಿಯು ಚಾಮರಸನ (ಕ್ರಿ. ಶ. ೧೪೩೦) ಕಾಲದ ನಂತರ ಪ್ರಭವ ಸಂವತ್ಸರವು ಬರುವ ಯಾವುದಾದರೊಂದು ವರ್ಷದಲ್ಲಿರಬಹುದಾದರೂ ಸದ್ಯಕ್ಕೆ ಇವನ ಕಾಲವು ಕ್ರಿ. ಶ. ೧೬೮೭ ಎಂದು ಗ್ರಹಿಸಬಹುದು.

ಶಂಕರದಾಸಿಮಯ್ಯನ ಕಥೆಯು ಮೊತ್ತಮೊದಲು ಹರಿಹರನ ರಗಳೆಯಲ್ಲಿ ಕಂಡು ಬರುತ್ತದೆ. ಹರಿಹರನ ತರುವಾಯ ಸುಮಾರು ನಾಲ್ಕೈದು ನೂರು ವರ್ಷಗಳಾದ ಮೇಲೆ ಮಲ್ಲಿಕಾರ್ಜುನನು ಈ ಕಾವ್ಯವನ್ನು ರಚಿಸಿರುವನು. ಈ ಮಧ್ಯದಲ್ಲಿ ಕೆಲವು ಗ್ರಂಥಗಳಲ್ಲಿ[1] ಪ್ರಾಸಂಗಿಕವಾಗಿ ಶಂಕರದಾಸಿಮಯ್ಯನು ದೇವರ ದಾಸಿಮಯ್ಯನ ತವನಿಧಿಯನ್ನು ಬಯಲು ಮಾಡಿದ ಉಲ್ಲೇಖವು ಕಂಡು ಬಂದರೂ ಅವನ ಸಮಗ್ರ ಚರಿತ್ರವನ್ನು ಹೇಳುವ ಗ್ರಂಥವಾವುದೂ ಹುಟ್ಟಿದಂತೆ ಕಂಡು ಬರುವುದಿಲ್ಲ. ಹರಿಹರನ ರಗಳೆಯು ತನ್ನ ಕಾವ್ಯಕ್ಕೆ ಆಧಾರವಾಗಿರುವುದೆಂದು ಕವಿಯು ಒಪ್ಪಿಕೊಳ್ಳದಿದ್ದರೂ ಅದರ ಆಧಾರದಿಂದಲೇ ಇವನು ತನ್ನ ಕಾವ್ಯವನ್ನು ರಚಿಸಿರಬೇಕೆಂಬುದು ನಿಶ್ಚಯ. ಶಂಕರದಾಸಿಮಯ್ಯನ ಜೀವನದ ಮುಖ್ಯ ಮುಖ್ಯ ಸಂಗತಿಗಳಲ್ಲಷ್ಟೇ ಅಲ್ಲದೆ ಸಣ್ಣ ಮಾತಿನಲ್ಲಿಯೂ ಕವಿಯು ಆತನನ್ನು ಅನುಸರಿಸಿರುವನು. ಉದಾಹರಣೆಗಾಗಿ: ಶಂಕರದಾಸಿಮಯ್ಯನು ಸಂಸಾರವನ್ನು ಸಾಗಿಸುವುದಕ್ಕೆ ಒಂದು ಮನೆಗೆ ಹೋಗಿ ಧಾನ್ಯವನ್ನು ಬೇಡಿದಾಗ್ಗ ಆ ಮನೆಯವರಲ್ಲಿ ಜೋಳವಿಲ್ಲದಿರಲು, "ಶಂಕರಗಂಡಂ ಪಿರಿದಯ್ಯಾ ಪಿರಿದು" ಎಂದು ಅವರು ನುಡಿಯೆ, ಜೋಳಕ್ಕೆ ಶಂಕರಗಂಡ ಎಂಬ ಹೆಸರಿದ್ದದ್ದು ತನಗೆ ಈ ಮೊದಲು ಗೊತ್ತಿರಲಿಲ್ಲ, ಶಂಕರನ ಹೆಸರಿದ್ದ ಪದಾರ್ಥಗಳೆಲ್ಲವೂ ಶಂಕರನೇ ಎಂದು ಬಗೆದು, ಆ ಮೇಲೆ ಜೋಳದ ಅನ್ನ

೧ ೧೯೨೬ ನೆಯ ಇಸ್ವಿಯಲ್ಲಿ ಬ್ರಹ್ಮಶ್ರೀ ವೇಟೂರ ಪ್ರಭಾಕರಶಾಸ್ತ್ರಿಗಳಿಂದ ಪ್ರಕಟಿತವಾದ ಪಾಲ್ಕುರಿಕೆ ಸೋಮನಾಥಕವಿವಿರಚಿತ ತೆಲುಗು ಬಸವಪುರಾಣ ( ಕ್ರಿ. ಶ. ೧೧೯೦ ), ಆಶ್ವಾಸ ೪, ಪುಟ ೧೧೧-೩ ;

ಭೀಮಕವಿವಿರಚಿತ ಕನ್ನಡ ಬಸವಪುರಾಣ (ಕ್ರಿ. ಶ. ೧೩೬೯), ಸಂಧಿ ೨೩;
ಚೆನ್ನಬಸವ ಪುರಾಣ, ಸಂಧಿ ೫೭, ಪದ್ಯ ೧೯-೨೦;
ಪಾಲ್ಕುರಿಕೆ ಸೋಮೇಶ್ವರ ಪುರಾಣ, ಸಂಧಿ ೪, ಪದ್ಯ ೬೫-೫೯.

ವನ್ನು ಸೇವಿಸದೆ ಲೋಳಿಸರದ ಹುಳುಕು ಜೀರ್ಣಚೂರ್ಣ ಗುಂಜಿಗಳ ಬೀಜಗಳನ್ನು ಕೂಡಿಸಿ ಅರೆದು ಅದನ್ನೇ ಪ್ರಸಾದವಾಗಿ ಸೇವಿಸಹತ್ತಿದನು. ರಗಳೆಯಲ್ಲಿಯ ಈ ಕಥಾಂಶವನ್ನೇ ಕವಿಯು ೧೬ ನೆಯ ಸಂಧಿಯ ೨-೫ ನೆಯ ಪದ್ಯಗಳಲ್ಲಿ ವರ್ಣಿಸಿರುವನು.

ಇನ್ನೊಂದು ವಿಶೇಷವೇನೆಂದರೆ : ಎಷ್ಟೋ ಪುರಾಣ ಮತ್ತು ಕಾವ್ಯಗಳಲ್ಲಿ ನಾರದನು ಕೈಲಾಸನಾಥನಾದ ಶಿವನ ಸಭೆಯಲ್ಲಿ ಭೂಲೋಕದ ಧರ್ಮದ ಅವನತಿಯನ್ನು ವರ್ಣಿಸುವುದು, ಆಗ್ಗೆ ಶಿವನು ಅಮರಗಣಂಗಳಲ್ಲಿ ಅಥವಾ ನಂದಿಮೊದಲಾದವರಲ್ಲಿ ಒಬ್ಬರಿಗೆ ಭೂಲೋಕದಲ್ಲಿ ಅವತರಿಸಿ ಧರ್ಮೋದ್ಧಾರಕಾರ್ಯ ಮಾಡಲು ಆಜ್ಞಾಪಿಸುವುದು ಅಥವಾ ಕೈಲಾಸವಾಸಿಗಳಲ್ಲಿ ಯಾರಾದರೂ ತಮ್ಮ ನಡತೆಯಲ್ಲಿ ತಪ್ಪಿದರೆ ಅದರ ಪ್ರಾಯಶ್ಚಿತ್ತಕ್ಕಾಗಿ ಭೂಲೋಕದಲ್ಲಿ ಹುಟ್ಟಿ ಬರುವುದು, ಈ ರೀತಿ ಕಥಾರಂಭವಾಗಿರುವುದು. ಆದರೆ ಹರಿಹರನು ಈ ರಗಳೆಯಲ್ಲಿ ಒಮ್ಮೆಲೆ ಶಂಕರದಾಸಿಮಯ್ಯನ ಜನನವೃತ್ತಾಂತವನ್ನು ಹೇಳ ತೊಡಗುವನು. ಮಲ್ಲಿಕಾರ್ಜುನನಾದರೂ ಕಾವ್ಯದ ಹದಿನೆಂಟು ಲಕ್ಷಣಗಳನ್ನನುಸರಿಸಿ ಸಮುದ್ರಪರ್ವತಗಳ ವರ್ಣನೆಯಾದ ಕೂಡಲೆ ದಾಸಿಮಯ್ಯನ ಜನನವು ಒಬ್ಬ ಬ್ರಾಹ್ಮಣೋತ್ತಮನ ವಂಶದಲ್ಲಿ ಆದದ್ದನ್ನು ವರ್ಣಿಸಿ ಕಥೆಯನ್ನು ಮುಂದುವರಿಸಿರುವನು. ರಗಳೆಯಲ್ಲಿಯ ಕಥಾಸಂದರ್ಭಗಳನ್ನು ತನಗೆ ಉಚಿತವೆನಿಸುವಂತೆ ಕೆಲವು ಕಡೆ ಪ್ರಸಂಗಾನುಸಾರ ಮಾರ್ಪಡಿಸಿರುವನು. ರಗಳೆಯಲ್ಲಿಲ್ಲದ **'ಅಂಗ' ಶಬ್ದನಿರ್ವಚನ ಲಿಂಗಸಕೀಲ ಲಿಂಗಧಾರಣೆಯ ಅವಶ್ಯಕತೆ ಅಷ್ಟಾವರಣಗಳ ಮಹತ್ವ ಶಿವಶ್ರೇಷ್ಠತ್ವ ಪರಮತಖಂಡನೆ** ಮುಂತಾದ ವಿಷಯಗಳನ್ನು ವಿಸ್ತಾರವಾಗಿಯೂ ಆಧಾರಪೂರ್ವಕವಾಗಿಯೂ ಪ್ರತಿಪಾದಿಸಿ ಪಂಡಿತನೆಂಬ ತನ್ನ ಬಿರುದನ್ನು ಸಾರ್ಥಕಗೊಳಿಸಿರುವನು.

ಇದರಿಂದ ಕವಿಯು ಶುದ್ಧ ಲಿಂಗಾಯತನೆಂದು ಕಂಡು ಬಂದರೂ "ಲಿಂಗ ಜಡೆ ರುದ್ರಾಕ್ಷಿ ಭಸಿತಂ ಕಂಗೊಳಿಸುವುಪವೀತವೆಂಬ ಶಿವಾಂಗವಹ ಪಂಚ ಮುದ್ರೆಯ ಅಂಗದೊಳು ಧರಿಸಿದರೆ" (ಸಂಧಿ ೨, ಪದ್ಯ ೩೨), "ಲಿಂಗವನು ಯಜ್ಞೋಪವೀತದ ಸಂಗದೊಳು ಧರಿಸು" (ಸಂಧಿ ೪, ಪದ್ಯ ೪೮), ಎಂದು ಹೇಳಿರುವುದರಿಂದ ಇವನು ಬ್ರಾಹ್ಮಣ್ಯದ ವರ್ಚಸ್ಸಿಗೆ ಒಳಗಾಗಿದ್ದನೆಂದು ತೋರುತ್ತದೆ. ಈ ಅನುಮಾನವು ಇನ್ನೊಂದು ಸಂಗತಿಯಿಂದ ದೃಢಪಡುತ್ತದೆ. ಅದು ಯಾವುದೆಂದರೆ : ಶಂಕರದಾಸಿಮಯ್ಯನ ಮುಪ್ಪಿನ ಕಾಲದಲ್ಲಿ ಅವನಿಗೆ ಒಬ್ಬ ಮಗನು ಹುಟ್ಟಿದನೆಂದು ಹರಿಹರನು ತನ್ನ ರಗಳೆಯಲ್ಲಿ ಸ್ವಾಭಾವಿಕವಾಗಿ ಹೇಳಿದ್ದಾನೆ. ಆದರೆ ಈ ಕವಿಯು ಹೇಳಿದ ರೀತಿ ಬೇರೆ. ಜಡೆಯ ಶಂಕರನು ನಿನಗೆ ಪುತ್ರನಿಲ್ಲದುದೊಂದೇ ಕೊರತೆ ಎಂದು ಶಂಕರದಾಸಿಮಯ್ಯನಿಗೆ ನುಡಿದುದ್ದಕ್ಕೆ, ದಾಸಿಮಯ್ಯನು ಲಿಂಗಾಯತ ಮತ ತತ್ವಕ್ಕನುಸರಿಸಿ ತನಗೆ ಪುತ್ರನ ಅವಶ್ಯಕತೆಯಿಲ್ಲವೆಂದು ಹೇಳಿದರೂ, ಜಡೆಯ ಶಂಕರನು ಶಾಸ್ತ್ರಾಧಾರಪೂರ್ವಕ ಪುತ್ರನ ಅವಶ್ಯಕತೆಯನ್ನ ತೋರಿಸಿ ರುದ್ರಪಿಂಡ

ವನ್ನು ತನ್ನ ಸತಿಗೆ ಕೊಡೆಂದು ದಾಸಿಮಯ್ಯನ ಕೆಯ್ಯಲ್ಲಿ ಕೊಡುವನು. ಆದರೂ ಪುತ್ರನ ಅವಶ್ಯಕತೆಯು ಜಡೆಯ ಶಂಕರನಿಗೆನಿಸಿದಷ್ಟು ದಾಸಿಮಯ್ಯನಿಗಲ್ಲೆಂಬುದು ಲಕ್ಷದಲ್ಲಿಡತಕ್ಕ ಸಂಗತಿಯಾಗಿದೆ.

ಪುತ್ರನ ಅವಶ್ಯಕತೆಯ ಮುಟ್ಟಿಗೆ ಕವಿಯು ಬ್ರಾಹ್ಮಣ್ಯದ ವರ್ಚಸ್ಸಿಗೆ ಒಳಗಾಗಿದ್ದನೆಂದು ಹೇಳುವುದಕ್ಕಿಂತ ಹಿಂದೂ ಜನರಲ್ಲಿ ರೂಢಮೂಲವಾಗಿರುವ ಪುತ್ರ ವ್ಯಾಮೋಹವು ಕವಿಯನ್ನು ಆವರಿಸಿತ್ತೆಂದೂ ಹೇಳಬಹುದು. ಈ ಕವಿಯಂತೆ ಲಿಂಗಾಯತ ಶಾಸ್ತ್ರಕಾರರು ಸಹ ತಮ್ಮ ಪರಿಸ್ಥಿತಿಯನ್ನು ಮೀರಿ ಹೋಗಲಾರರೆಂಬುದು ಲಿಂಗಾಯತರಲ್ಲಿ ದತ್ತಕಪುತ್ರನ ಅವಶ್ಯಕತೆಯಿರುವುದೆಂದು ಹೇಳುವ **'ಸಪ್ರಯೋಗ ದತ್ತವಿಧಾನ'** ಎಂಬ ಶಾಸ್ತ್ರಗ್ರಂಥವೊಂದು ರಾವ ಬಾಹದ್ದೂರ ವಾರದ ಮಲ್ಲಪ್ಪನವರಿಂದ ಕ್ರಿ. ಶ. ೧೯೦೯ನೆಯ ವರ್ಷದಲ್ಲಿ ಪ್ರಸಿದ್ಧಿಸಲ್ಪಟ್ಟಿದೆ ಎಂಬುವುದರಿಂದ ಗೊತ್ತಾಗುವುದು.

ತನ್ನ ಕವಿತಾ ಸಾಮರ್ಥ್ಯವನ್ನು ಕವಿಯು

ಶೂಲಿಯರ್ಚಕರುಂಡುಳಿದುದಂ ।
ಲೀಲೆಯಿಂದುರೆ ಸವಿದು ಸುಖಿಸುವ ।
ನಾಲಿಗೆಯೊಳುಸುರಿದನು ಪಂಡಿತಮಲ್ಲಿಕಾರ್ಜುನನು ॥
ಕಾಲವಂ ಕಳೆವಂತೆ ಬಹುವಾ ।
ಗ್ಜಾಲದೆಸಕವ ಪೇಳ್ವುದಿಲ್ಲಂ ।
ಸಾಲದೀ ಕೃತಿಯೊಳಗೆ ರಸಭಾವಂಗಳೆನ್ನದಿರಿ (ಸಂ. ೧, ಪ. ೧೫)

ರೂಢಿಸುವ ಕರ್ನಾಟಲಕ್ಷಣ ।
ಗೂಡಿತಿಲ್ಲೀ ಕಾವ್ಯದೊಳಗೆನ ।
ಬೇಡ ತಿಳಿಯದೆ ಪೇಳ್ದುದಿಲ್ಲಂ ಶಬ್ದಶಾಸ್ತ್ರವನು ॥
ಪಾಡುಗಬ್ಬದ ಲಕ್ಷಣಂಗಳ ।
ನೀಡಿರಿದು ಪದವಿಡೆ ಸುಮೋಹನ ।
ಗಾಡಿ ಕೆಡುವುದೆನುತೆ ವಿಭಕ್ತಿಸಮಾಸಗಳನುಳಿದೆ (ಸಂ. ೧, ಪ. ೧೬)

ಈ ಪದ್ಯಗಳಲ್ಲಿ ವರ್ಣಿಸಿದ್ದಾನೆ.

ಕವಿಯು ಕೆಲವು ಶಬ್ದಪ್ರಯೋಗಗಳು ಹೀಗಿರುವುವು :

ನಮಸ್ಕರ (ಸಂ. ೨-೬೩), ಚಾರ (ಸಂ. ೩-೮೧), ಪ್ರಾದಕ್ಷಿಣದಿ (ಸಂ. ೫-೩೭), ಅವಿಚರ (ಸಂ. ೭-೧೪), ಪ್ರಾಯಾಸ (ಸಂ. ೭-೭೮), ಪ್ರೀಯ (ಸಂ. ೯-೮), ಮಂಗಳೋರ (ಸಂ. ೯-೩೯), ಆರಾಧ್ಯಾಯ (ಸಂ.೧೦-೬), ಪರಾಪ್ಟ್ರಕ (ಸಂ. ೧೦-೩೨), ಮಿಮಾಂಸ (ಸಂ. ೧೦-೭೧), ಪಾಶ್ಪತ (ಸಂ. ೧೧-೪), ಅದ್ವತಿ (ಸಂ. ೧೧-೧೫), ದಸೋಹ (ಸಂ. ೧೨-೩೬), ಆವರೊಳು (ಸಂ. ೧೩-೬), ಕಳಾಮುಖಿ (ಸಂ. ೧೪-೨೬), ಸ್ವಾತ್ಮಿಸಿ (ಸಂ. ೧೬-೬).

ಈ ಪ್ರಯೋಗಗಳನ್ನು
ಕುಳಕಮುಕ್ತಕತಿಜಸುಬಂತೋ |
ಜ್ವಳಿಪ ಸಿದ್ಧಿ ಸಮಾಸ ಛಂದಂ |
ಗಳತಿ ಮಿರುಗುವ ಗಣ ನವರಸಂ ಶಬ್ದಪರ್ಯಾಯ ||
ರಳಕುಳಾಕ್ಷರಮುಂ ವಿಭಕ್ತಿ |
ಸ್ಥಳವಲಂಕೃತ ಕರ್ತೃ ಕರ್ಮಂ |
ಗಳ ವಿಚಾರಿಸಲಾಗದೀಶ್ವರಭಕ್ತಚರಿತೆಂಯೊಳು (ಸಂ. ೧, ಪ. ೧೭)

ಎಂದು ಹೇಳಿ ಸಮರ್ಥಿಸಿಕೊಂಡಿರುವನು. ಆದರೂ ಸಾಧಾರಣವಾಗಿ ಈ ಕಾವ್ಯವು "ಶಬ್ದಶಾಸ್ತ್ರ" ವನ್ನನುಸರಿಸಿರುವುದೆಂದು ಹೇಳಬಹುದು. ಉಪಮೆಗಳು ಮನೋಹರವಾಗಿವೆ. ಗಾದೆಯ ಮಾತುಗಳು[೧] ಸಂದರ್ಭಾನುಸಾರ ಉಪಯೋಗಿಸಲ್ಪಟ್ಟಿವೆ. ವರ್ಣನೆಗಳು ಮಿತವಾಗಿವೆ. ಶೈಲಿಯು ಸರಳವಾಗಿಯೂ ತತ್ವವಿವೇಚನೆಯಲ್ಲಿ ಮನಂಬುಗುವಂತೆಯೂ ಇದ್ದು ಚಾಮರಸನ ಪ್ರಭುಲಿಂಗಲೀಲೆಯ ಶೈಲಿಯನ್ನು ಹೋಲುತ್ತದೆ. ಈ ಗ್ರಂಥವು ಲಿಂಗಾಯತ ಮತತತ್ವಗಳನ್ನು ತಿಳಿದುಕೊಳ್ಳುವ ಒಂದು ಉತ್ತಮ ಸಾಧನವೆಂದು ಹೇಳಬಹುದು.

## (೨) ಶಂಕರದಾಸಿಮಯ್ಯನ ಕಾಲ, ಅವನು ಲಿಂಗಾಯತ ಮತೋದ್ಧಾರಕ್ಕಾಗಿ ಮಾಡಿದ ಕಾರ್ಯ, ಅವನ ವಚನ

ಇನ್ನು ಈ ಕಾವ್ಯಕಥಾನಾಯಕನಾದ ಶಂಕರದಾಸಿಮಯ್ಯನನ್ನು ಕುರಿತು ವಿಚಾರಿಸುವಾಗ ಇವನ ಕಾಲವನ್ನು ಮೊದಲು ಗೊತ್ತುಪಡಿಸುವ. ಹರಿಹರನ ರಗಳೆಯಲ್ಲಿಯೂ ಈ ಕಾವ್ಯದಲ್ಲಿಯೂ ಶಂಕರದಾಸಿಮಯ್ಯನು ಕಲ್ಯಾಣದಲ್ಲಿ ಜಯಸಿಂಹರಾಯನ ಸಮ್ಮುಖದಲ್ಲಿ ಪರವಾದಿಗಳ ಅಪೇಕ್ಷೆಯ ಮೇರೆಗೆ ನಾರಸಿಂಹಮೂರ್ತಿಯನ್ನು ತನ್ನ ಹಣೆಗಣ್ಣಿನಿಂದುರುಪಿದನೆಂದು ವರ್ಣಿತವಾಗಿದೆ. ಶಂಕರದಾಸಿಮಯ್ಯನು ದೇವರದಾಸಿಮಯ್ಯನ ತವನಿಧಿಯನ್ನು ಬಯಲು ಮಾಡಿದನೆಂದು ಈ ಮೊದಲೇ ಹೇಳಿದೆ. ವಿರೂಪಾಕ್ಷನೆಂಬ ಕವಿಯು ಕ್ರಿ. ಶ. ೧೮೪೨ನೆಯ ಇಸ್ವಿಯಲ್ಲಿ ಬರೆದ ದೇವರದಾಸಿಮಯ್ಯನ ಪುರಾಣವೊಂದಿದೆ. ಶಂಕರದಾಸಿಮಯ್ಯನ ಮತ್ತು

---

೧ ಬಾಯ ಹವಣಿಗೆ ತುತ್ತ ನುಂಗದೆ | ಸಾಯುಸಕ್ಕೊಳಗಾದೆವಲ್ಲಾ | (೭-೧೭).
ಹಾಲನುಳಿದಂಬಿಲವ ಬಯಸುವ | ಬಾಲಬುದ್ಧಿಯ ಬಿಟ್ಟು (೭-೭೯).
ಎ | ತ್ತೀದುದೆಂದೆನಲೊಳಗೆ ಕಟ್ಟಿದೊ | ಲಾದುದರಸಾ (೧೦-೧೮).
ತಾಯ ಮಾರಿಯೆ ತೊತ್ತ ಕೊಂಡಂ | ತಾಯಿತಲ್ಲಾ ನಿಮ್ಮ ಪರಿ (೧೨-೯).
ದೀಪವ | ಹಿಡಿದು ಗುಳಿಯೊಳು ಬಿದ್ದೊಲಾಯಿತು ನಿಮ್ಮ ಪರಿಯಾಯ (೧೨-೧೦).
ನುಡಿ ಪುರಾತನರಂತೆ ತನ್ನಯ | ನಡೆ ಕಿರಾತರೊಲೆಂಬ ಗಾದೆಯ | ನುಡಿಯ ನಿಮ್ಮೊಳು ಕಂಡೆನು (೧೨-೧೨).
ನೀವು | ಹಾಳು ಮನೆ ಹಾಳೆನಲು (೧೫-೧೨).
ಎಂತು ಬೀಜಮುದಂತೆ ಮೊಳೆಯಂ | ಬಂತೆ (೧೬-೩೪).

ದೇವರದಾಸಿಮಯ್ಯನ ಸಂದರ್ಶನದ ಸಂಗತಿಯನ್ನು ಬರೆದರೆ ಶಂಕರದಾಸಿಮಯ್ಯನು ದೇವರದಾಸಿಮಯ್ಯನ ತವನಿಧಿಯನ್ನು ಬಯಲು ಮಾಡಿದ ಸಂಗತಿಯನ್ನು ಬರೆಯ ಬೇಕಾಗುವುದು, ಆದರೆ ಹೀಗೆ ಬರೆಯುವುದರಿಂದ ದೇವರದಾಸಿಮಯ್ಯನ ಘನತೆಗೆ ಕುಂದು ಬರುವುದೋ ಏನೋ ಎಂಬ ಸಂಶಯದಿಂದ ವಿರೂಪಾಕ್ಷನು ತನ್ನ ಪುರಾಣ ದಲ್ಲಿ ಇಬ್ಬರೂ ದಾಸಿಮಯ್ಯಗಳ ಭೆಟ್ಟಿಯ ಸುದ್ದಿಯನ್ನೇ ಎತ್ತಿಲ್ಲ. ಶಂಕರದಾಸಿಮ ಯ್ಯನು ದೇವರದಾಸಿಮಯ್ಯನ ತವನಿಧಿಯನ್ನು ಬಯಲು ಮಾಡಿದ್ದು ನಿಜವಿರಲಿ, ಇಲ್ಲದೆಯಿರಲಿ, ಒಬ್ಬರಿಗೊಬ್ಬರು ಭೆಟ್ಟಿಯಾಗಿದ್ದರೆಂಬುದು ನಿಜವೆಂದು ತಿಳಿಯಲಿಕ್ಕೆ ಈ ಮೊದಲು ಕೊಟ್ಟ ಆಧಾರಗಳು ಸಾಕು.

ದೇಸಿಂಗನ ಹೆಂಡತಿ ಸುಗ್ಗಲಾದೇವಿಯ ಗುರುವಾದ ದೇವರದಾಸಿಮಯ್ಯನು ಹೊಟಲಕೇರಿಯಲ್ಲಿರುವ ಜೈನರನ್ನು ಅಪಹರಿಸಿ ದೇಸಿಂಗರಾಯನನ್ನು ಶೈವನನ್ನಾಗಿ ಮಾಡಿದ ಕಥೆಯು ತೆಲಗು ಬಸವಪುರಾಣದ ೬ನೆಯ ಆಶ್ವಾಸದಲ್ಲ (ಪುಟ ೧೮೧-೧೮೬) ಮತ್ತು ಕನ್ನಡ ಬಸವಪುರಾಣದ ೫೧ನೆಯ ಸಂಧಿಯಲ್ಲಿ ವಿಸ್ತಾರವಾಗಿ ವರ್ಣಿಸಲ್ಪಟ್ಟದೆ. ಇದೇ ಕಥೆಯು ವಿರೂಪಾಕ್ಷಕವಿಕೃತ ಚೆನ್ನಬಸವಪುರಾಣದ (ಕ್ರಿ. ಶ. ೧೫೮೫) ೫೭ನೆಯ ಸಂಧಿಯ ೧೧ನೆಯ ಪದ್ಯದಲ್ಲಿ ಅತಿ ಸಂಕ್ಷೇಪವಾಗಿ ಹೇಳಲ್ಪಟ್ಟದೆ. ಇವುಗಳನ್ನು ಉಲ್ಲೇಖಿಸಿ, ಬಸವಪುರಾಣದ ಹೊಟಲಕೇರಿಯೇ ಶಾ. ಶಕ ೯೬೨ನೆಯ ವರ್ಷದ ೩ನೆಯ ಜಯಸಿಂಹನ ಕಾಲದ ಮಂಟೂರ ಶಿಲಾಶಾಸನದ ಪೊಟಲಕೇರಿಯೆಂತಲೂ, ಈ ಪೊಟಲಕೇರಿಯು ಬಳ್ಳಾರಿ ಜಿಲ್ಹೆಯಲ್ಲ ಹೊಸಪೇಟೆಯ ದಕ್ಷಿಣಕ್ಕಿರುವ ದಂಡನಾಯಕನಕೆರೆಯೆಂತಲೂ, ದೇವರದಾಸಿಮಯ್ಯನು (ದೇಸಿಂಗ) ಜಯಸಿಂಹನ ಕಾಲದವನೆಂತಲೂ ಮೆಹರ್ಬಾನ ಜೆ. ಎಫ್. ಫ್ಲೀಟ ಸಾಹೇಬರು ಅಭಿಪ್ರಾಯ ಪಟ್ಟಿರುವರು.[೧] ಈ ಅಭಿಪ್ರಾಯವು ಸರಿಯಾದದ್ದಿರುವುದೆಂಬುದಕ್ಕೆ ಅಡ್ಡಿ ತೋರುವುದಿಲ್ಲ. ಆದುದರಿಂದ ಶಂಕರದಾಸಿಮಯ್ಯನು ಕ್ರಿ. ಶ. ೧೦೧೫ ರಿಂದ ೧೦೪೨ ರ ವರೆಗೆ ಆಳಿದ ಜಯಸಿಂಹನ ಕಾಲದವನೆನ್ನಬಹುದು. ಈ ಜಯಸಿಂಹನು ಕಲ್ಯಾಣದ ಚಾಲುಕ್ಯ ವಂಶದವನು. ಮೆ. ಫ್ಲೀಟ ಸಾಹೇಬರು ಹೇಳುವಂತೆ ಇವನು ೩ನೆಯ ಜಯಸಿಂಹನಿರದೆ ೨ ನೆಯ ಜಯಸಿಂಹನಿರುವನು.[೨]

ಇವನ ಕಾಲಕ್ಕೆ ಕಲ್ಯಾಣಪಟ್ಟಣವು ಚಾಲುಕ್ಯರ ರಾಜಧಾನಿಯಾಗಿರಲಿಲ್ಲ.[೩] ಇವನು ತನ್ನ ಆಳಿಕೆಯಲ್ಲಿ ಬೇರೆ ಬೇರೆ ಪಟ್ಟಣಗಳಲ್ಲ ಕೆಲ ಕೆಲವು ಕಾಲ ವಾಸಿಸು

೧ ಇಂಡಿಯನ್ ಆಂಟಿಕ್ವಾರಿ, ಸಂಪುಟ ೧೯, ಪುಟ ೧೬೧-೩.

೨ ರಾ. ಹ. ದೇಶಪಾಂಡೆಕೃತ ಕರ್ನಾಟಕ ಸಾಮ್ರಾಜ್ಯ, ಸಂಪುಟ ೨, ಭಾಗ ೨, ಪುಟ ೨೩೬; S. Srikantha Sastri's, Sources of Karnataka History, Vol. 1, Geneological Table III

೩ ರಾ. ಹ. ದೇಶಪಾಂಡೆಕೃತ ಕರ್ನಾಟಕ ಸಾಮ್ರಾಜ್ಯ, ಸಂಪುಟ ೨, ಭಾಗ ೨, ಪುಟ ೨೫೪; The Dynasties of Kanarese Districts by J. F. Fleet, p. 46.

ತ್ತಿದ್ದನೆಂದು ಕಂಡು ಬರುತ್ತದೆ.[೧] ಅದರಂತೆ ಶಂಕರದಾಸಿಮಯ್ಯನ ಭೆಟ್ಟಿಯ ಕಾಲಕ್ಕೆ ಅವನು ಕೆಲ ಕಾಲ ಕಲ್ಯಾಣದಲ್ಲಿರಬಹುದು.

ಇನ್ನು ಇವನು ಲಿಂಗಾಯತಮತೋದ್ಧಾರಕಾರ್ಯದಲ್ಲಿ ಎಷ್ಟರ ಮಟ್ಟಿಗೆ ಸಹಾಯಕಾರಿಯಾಗಿದ್ದನೆಂಬ ಪ್ರಶ್ನೆಯು ಸಹಜವಾಗಿ ಹೊರಡುತ್ತದೆ. ಬಸವಣ್ಣನು ಲಿಂಗಾಯತಮತಸ್ಥಾಪಕನೆನಿಸಿಕೊಳ್ಳುವಷ್ಟು ಯೋಗ್ಯತೆಯುಳ್ಳ ಕ್ರಾಂತಿಕಾರಕ ಕಾರಣಪುರುಷನೆನ್ನುವುದು ನಿಜವು. ಪಂಚಾಕ್ಷರೀ ಮಂತ್ರಕ್ಕಿರುವ ಮಹತ್ವವು ಶ್ರೀಗುರುಬಸವಲಿಂಗಾಯ ನಮಃ ಎಂಬ ಏಕಾದಶಾಕ್ಷರ ಮಂತ್ರಕ್ಕಿರುವುದು. ಆದರೂ ಇವನ ಕಾಲದ ಸಮಾಜಸ್ಥಿತಿಯ ವಾಸ್ತವಿಕ ಜ್ಞಾನವಾಗಬೇಕಾದರೆ ಇವನ ಹಿಂದಿನ ಕಾಲದ ಸಮಾಜಸ್ಥಿತಿಯ ಅರಿವೂ ನಮಗೆ ಉಂಟಾಗಬೇಕು.

೧೯೦೧ನೆಯ ಇಸ್ವಿಯ ಜನಪರಿಗಣನೆಯ ಕಾಲಕ್ಕೆ ಸರಕಾರದವರು ಜನಾಂಗ ವರ್ಣನೆಯನ್ನು ಬರೆಯುವದನ್ನುಪಕ್ರಮಿಸಿ ಬೇರೆ ಬೇರೆ ಮತ-ಪಂಥ-ಜಾತಿಯ ಪ್ರಮುಖರಿಗೆ ಒಂದು ಪ್ರಶ್ನಮಾಲೆಯನ್ನು ಕಳುಹಿದರು. ಆ ಪ್ರಶ್ನಮಾಲೆಗೆ ಉತ್ತರ ವಾಗಿ ಕೈ. ರಾ. ಬಾ. ವಾರದ ಮಲ್ಲಪ್ಪನವರು, ಧಾರವಾಡದಲ್ಲಿ ನಿರ್ಮಿತವಾದ ಒಂದು ತಾತ್ಪೂರ್ತಿಕ ಮಂಡಲದವರು ಮತ್ತು ಮೈಸೂರ ಪ್ರಾಂತದವರು ತಮ್ಮ ತಮ್ಮ ಅಭಿಪ್ರಾಯಗಳನ್ನು ಬರೆದು ತಿಳಿಸಿದರು. ಇವುಗಳನ್ನು ವಿಮರ್ಶಿಸಿ ಜನಾಂಗವರ್ಣನೆಯನ್ನು ಬರೆಯಲಿಕ್ಕೆ ನಿಯಮಿಸಿದ ಮಿ. ಎಂಥೊವ್ಹೆನ್ ಸಾಹೇಬರು ಲಿಂಗಾಯತ ಮತದ ಬಗ್ಗೆ ೧೯೦೭ನೆಯ ಇಸ್ವಿಯಲ್ಲಿ ಬರೆದ ಲೇಖದಲ್ಲಿ ಹೀಗೆ ಅಂದಿರುವರು:

“ಕಾಲಾಂತರದಲ್ಲಿ ಬರೆದ ಪುರಾಣಗಳಲ್ಲಿ ನಿಜವಾದ ಸಂಗತಿಗಳು ದಂತಕಥೆ ಗಳಿಂದಲೂ ಪವಾಡಗಳಿಂದಲೂ ಮುಚ್ಚಿಹೋಗಿರುವುವು. ಸಮಕಾಲೀನ ಶಿಲಾಶಾಸನಗಳು ಪುರಾಣಗಳಿಗಿಂತ ಹೆಚ್ಚು ವಿಶಸ್ವನೀಯವಾಗಿರುವುವು. ಇವುಗಳಿಂದ ಬಸವ ಮತ್ತು ಏಕಾಂತದ ರಾಮಯ್ಯ ಇಬ್ಬರೂ ೧೨ನೆಯ ಶತಮಾನದಲ್ಲಿ ಲಿಂಗಾಯತ ಮತವು ಹಬ್ಬಲಿಕ್ಕೆ ಕಾರಣರಾಗಿರುವರೆಂದು ಸ್ಪಷ್ಟವಾಗುತ್ತದೆ. ಈಗಿನ ಲಿಂಗಾಯತ ಶೋಧಕರು ತಮ್ಮ ಮತದ ಉತ್ಪತ್ತಿಯು ಬಹಳ ಪುರಾತನದ್ದೆಂದು ಸಾಧಿಸುತ್ತಿ ರುವರು. ಈ ಸಾಧನೆಗೆ ಸಾಕಷ್ಟು ಆಧಾರಗಳಿಲ್ಲ. ಈ ವಿಷಯವಾಗಿ ಡಾ. ಫ್ಲೀಟರ ಅಭಿಪ್ರಾಯವು ಸಮಂಜಸವೆನಿಸುತ್ತದೆ. ಶಿವನೊಬ್ಬನನ್ನೇ ಆರಾಧಿಸುವ ವೀರ ಬಣಂಜುಧರ್ಮಪ್ರತಿಪಾಲಕರಾದ ಐಹೊಳೆಯ ೫೦೦ ಸ್ವಾಮಿಗಳ ಸಂಘವು ಮಾಡಿದ ಪ್ರಚಾರದ ಪರಿಣಾಮವೇ ಲಿಂಗಾಯತಮತವೆಂದು ಅವರ ಅಭಿ ಪ್ರಾಯವು. ಆದರೆ ಆ ಸ್ವಾಮಿಗಳು ಈಗಿನವರಂತೆ ಸಂಕುಚಿತ ಮನಸಿನವರಿರಲಿಲ್ಲ. ಅವರು ಬೌದ್ಧಮತಕ್ಕೆ ಸಹ ಆಶ್ರಯವನ್ನು ಕೊಟ್ಟರು. ಪ್ರಸಿದ್ಧ ಧರ್ಮಪ್ರವರ್ತಕ ನಾದ ಲಕುಲೀಶನೆಂಬವನು ಬನವಾಸಿ ಪ್ರಾಂತದಲ್ಲಿ ಆರಂಭಮಾಡಿದ ಚಳವಳಿಯೇ

೧ ರಾ. ಹ. ದೇಶಪಾಂಡೆಕೃತ ಕರ್ನಾಟಕ ಸಾಮ್ರಾಜ್ಯ, ಸಂಪುಟ ೨, ಭಾಗ ೨, ಪುಟ ೨೪೫.

ಬಹುತರವಾಗಿ ಲಿಂಗಾಯತ ಮತದಲ್ಲಿ ಪರಿಣಮಿಸಿರಬಹುದು. ಇವನು ೧೧ನೆಯ ಶತಮಾನದ ಆದಿಯಲ್ಲಿ ಆಗಿಹೋದನು. ಮುಂದೆ ಒಂದು ಶತಮಾನದ ನಂತರ ಬಸವೇಶ್ವರನು ಲಿಂಗಾಯತ ಮತತತ್ವಗಳನ್ನು ಹರಡುವಲ್ಲಿ ವಿಶೇಷ ಕಾರ್ಯ ಮಾಡಿ ದುದರಿಂದಲೂ ಆಮೇಲೆ ಕೆಲವು ಶತಮಾನಗಳ ತರುವಾಯ ಇವನ ವಿಷಯವಾಗಿ ಬರೆದ ಪುರಾಣಗಳು ಹುಟ್ಟಿರುವುದರಿಂದಲೂ ಬಸವೇಶ್ವರನೇ ಲಿಂಗಾಯತಮತ ಸ್ಥಾಪಕನೆಂದು ಸಾಮಾನ್ಯವಾಗಿ ಗ್ರಹಿಕೆಯಾಗಿ, ಈ ಸಂಬಂಧದಲ್ಲಿ ಲಕುಲೀಶನೂ ಏಕಾಂತದ ರಾಮಯ್ಯನೂ ಮಾಡಿದ ಕಾರ್ಯವು ಮರೆತು ಹೋಗಿರಬಹುದು. ಆದರೂ ಈ ಚಳವಳಿಯ ಆರಂಭದ ಬಗ್ಗೆ ಇನ್ನೂ ಹೆಚ್ಚು ಶೋಧವಾಗಬೇಕಾಗಿದೆ. ಈ ಕಾಲದ ಲಿಂಗಾಯತರು ತಮ್ಮ ಮತವು ಬಹು ಪುರಾತನವೆಂದು ಹೇಳುವುದಕ್ಕೆ ಸಾಕಷ್ಟು ಐತಿಹಾಸಿಕ ಆಧಾರವಿಲ್ಲದಿದ್ದರೂ ದಕ್ಷಿಣ ಹಿಂದುಸ್ಥಾನದ ದ್ರಾವಿಡ ಜನಾಂಗಗಳ ಮೂಲ ದೇವತೆಗಳು ಆರ್ಯ ದಾಳಿಗಾರರ ದೇವತೆಯಾದ ಶಿವನಲ್ಲಿ ಐಕ್ಯಹೊಂದಿರುವು ದರಿಂದ, ದ್ರಾವಿಡ ಜನಾಂಗಗಳು ಬ್ರಾಹ್ಮಣಧರ್ಮದ ತ್ರಿಮೂರ್ತಿಗಳಲ್ಲಿ ಉಳಿದ ವುಗಳನ್ನು ಬಿಟ್ಟು ಶಿವನೊಬ್ಬನನ್ನೇ ತಮ್ಮ ಆರಾಧ್ಯ ದೇವತೆಯನ್ನಾಗಿ ಮಾಡಿ ಕೊಂಡದ್ದಲ್ಲದೆ ಆ ಧರ್ಮದ ಕರ್ಮಕಾಂಡವನ್ನೂ ಜಾತಿಶ್ರೇಷ್ಠತ್ವವನ್ನೂ ತಿರಸ್ಕ ರಿಸಿರುವುದೇ ಲಿಂಗಾಯತ ಮತದ ಆರಂಭದ ಚಳವಳಿಯ ತಳಹದಿಯೆನ್ನ ಬಹುದು.''

ಆ ಕಾಲಕ್ಕೆ ಕೆಲವು ಲಿಂಗಾಯತ ಸ್ವಾಮಿಗಳನ್ನು ಬಿಟ್ಟರೆ ವಿದ್ಯಾವಂತರೆನಿಸಿ ಕೊಳ್ಳುವವರು ಶಿವಶರಣರ ವಚನಗಳ ಅಭ್ಯಾಸವನ್ನೇ ಮಾಡುತ್ತಿದ್ದಿಲ್ಲ. ಸುಮಾರು ೧೫ ವರ್ಷಗಳ ಹಿಂದೆ ರಾ. ಬಾ. ಹಳಕಟ್ಟಿಯವರು ಈ ವಚನಗಳನ್ನು ಪ್ರಸಿದ್ಧಿಸಹತ್ತಿ ದಂದಿನಿಂದ ಇವುಗಳ ಅಭ್ಯಾಸವು ಲಿಂಗಾಯತರಲ್ಲಿಯೂ ಇತರರಲ್ಲಿಯೂ ಬೆಳೆಯುತ್ತ ನಡೆದದೆ. ಈ ಅಭ್ಯಾಸದಿಂದಲೂ ಶಿಲಾಶಾಸನ ಮುಂತಾದವುಗಳ ಹೆಚ್ಚಿನ ಶೋಧ ದಿಂದಲೂ ಬಸವಣ್ಣನ ಹಿಂದಿನ ಕಾಲದ ಲಿಂಗಾಯತ ಸಮಾಜಸ್ಥಿತಿಯ ಮೇಲೆ ಹೊಸ ಬೆಳಕು ಬೀಳಹತ್ತಿದೆ. ಈ ಬಗ್ಗೆ ರಾ. ಬಾ. ಹಳಕಟ್ಟಿಯವರ **'ಶಿವಾನುಭವ'** ಮಾಸ ಪತ್ರಿಕೆಯಲ್ಲಿ ಮೇಲಿಂದ ಮೇಲೆ ಲೇಖಗಳು ಬರಹತ್ತಿವೆ. ಇವರು ಈ ಪತ್ರಿಕೆಯ ೧೯೪೦ನೆಯ ಇಸ್ವಿಯ ಫೆಬ್ರುವರಿ ಸಂಚಿಕೆಯ ೨೫೦ನೆಯ ಪುಟದಲ್ಲಿ ಅಂದಿರುವು ದೇನೆಂದರೆ :

“ವೀರಶೈವ ಸಾಮಾಜಿಕ ಇತಿಹಾಸದಲ್ಲಿ ಮೊಟ್ಟಮೊದಲು ದೇವರದಾಸಿಮಯ್ಯ ಶಂಕರದಾಸಿಮಯ್ಯನವರು, ಮುಂದೆ ರೇವಣಸಿದ್ಧನು, ಇವನ ತರುವಾಯ ಪ್ರಭುದೇವ ಅನುಮಿಷರು, ಇವರ ತರುವಾಯ ಬಸವ, ಸಿದ್ಧರಾಮ, ಚೆನ್ನಬಸವಾದಿ ಗಳು, ಆ ಮೇಲೆ ರುದ್ರಮುನಿ ಮೊದಲ್ಗೊಂಡು ಅನೇಕ ಆಚಾರ್ಯರು ವೀರಶೈವ ಸಮಾಜದಲ್ಲಿ ಕಾಲಕಾಲಕ್ಕೆ ಉದ್ಭವಿಸಿ ೧೦೦-೧೫೦ ವರ್ಷಗಳವರೆಗೆ ಕ್ರಾಂತಿಗಳನ್ನೆ

ಸಗುತ್ತ ಬಂದಿರುತ್ತಾರೆ. ಇವರ ಚರಿತ್ರೆಗಳು ಘನತರವಾದವುಗಳು. ಇವುಗಳನ್ನೆಲ್ಲ ಸಂಶೋಧಿಸಿ ಹಿಂದುಸ್ಥಾನದಲ್ಲೆಲ್ಲ ಪ್ರಚಾರ ಮಾಡುವುದು ವೀರಶೈವರ ಆದ್ಯ ಕರ್ತವ್ಯ ವಾಗಿದೆ. ”

ಶಂಕರದಾಸಿಮಯ್ಯನು ಕಂದಶಿಲೆಯಲ್ಲಿ ಹುಟ್ಟಿ, ನವಿಲೆಯ ಶ್ರೀ ಜಡೆಯ ಶಂಕರದೇವರಿಂದ ದೀಕ್ಷೆ ಹೊಂದಿ ಮತಪ್ರಸಾರಕ್ಕೋಸ್ಕರ **ಮುದನೂರ, ಕಲ್ಯಾಣ, ಪೆಂಬೇರ, ಉಜ್ಜಯಿನಿ** ಮುಂತಾದ ಗ್ರಾಮುಗಳಿಗೆ ಸಂಚರಿಸಿದನು. ಆಗ್ಗೆ **ಬೌದ್ಧ, ಚಾರ್ವಾಕ, ಕಾಪಾಲ, ಪಾಂಚರಾತ್ರಿಕ, ಶಾಕ್ತ, ಭೈರವ, ಜೋಗಿ** ಮುಂತಾದ ಮತಗಳು ಈ ಭಾಗಗಳಲ್ಲಿ ಪ್ರಚಾರದಲ್ಲಿದ್ದುವು. ಶಾಕ್ತ ಮತ್ತು ಭೈರವ ಮತಗಳ ಪ್ರಾಬಲ್ಯವು ಆ ಕಾಲದಲ್ಲಿ ಎಷ್ಟಿತ್ತೆಂಬುದು ಈ ಕಾವ್ಯದ ೧೪, ೧೫ನೆಯ ಸಂಧಿಗಳಲ್ಲಿರುವ ಇವುಗಳ ವರ್ಣನೆಯಿಂದ ಗೊತ್ತಾಗುವುದು. ‘ **ಮೈಲಾರ** ’ದೇವರ ಪ್ರಸಿದ್ಧ ದೇವಸ್ಥಾನಗಳು ದಕ್ಷಿಣ ಹಿಂದುಸ್ಥಾನದಲ್ಲಿ ಎಷ್ಟೋ ಇರುವುವು. ಈ ಸ್ಥಳಗಳಲ್ಲಿ **ಪೆಂಬೇರ** ಎಂಬುವುದೊಂದು. ‘ **ಮೈಲಾರ** ’ನು ಶಿವನ ಅವತಾರವೆಂದು ಪೌರಾಣಿಕ ಕಥೆಯಿರುವುದು. ಈ ಕಥೆಯಲ್ಲಿ ಸತ್ಯಾಂಶವಿರಲಿ, ಇಲ್ಲದೆಯಿರಲಿ ಅಥವಾ ಈ ಕಾವ್ಯದ ೧೩ನೆಯ ಸಂಧಿಯಲ್ಲಿ ಬಣ್ಣಿಸಿದಂತೆ ಪೆಂಬೇರ ಮೈಲಾರನು ಒಂದು ಭೂತವಿರಲಿ, ಇಲ್ಲದೆಯಿರಲಿ, ಎಲ್ಲ ಮೈಲಾರಭಕ್ತರ ಆಚರಣೆಗಳು ಒಂದೇ ತೆರನಾಗಿರುವುವು. ಇವರು ವೊಗ್ಗಯ್ಯಗಳನ್ನು ಒಳ್ಳೇ ಆದರದಿಂದ ಉಪಚರಿಸುತ್ತಾರೆ. ಈ ವೊಗ್ಗಯ್ಯಗಳ ವೇಷ, ಕುಣಿತ, ಬೊಗಳುವುದು, ಡೋಣಿಗಳಲ್ಲಿ ಹಣ್ಣುಹಂಪಲು ಮುಂತಾದವುಗಳನ್ನು ತಿನ್ನುವ ರೀತಿ ಇವುಗಳನ್ನು ಎಷ್ಟೋ ಜನರು ನೋಡಿರಬಹುದು. ಬಸವಣ್ಣನವರು ಸಹ ಇವರನ್ನು ಕೆಲವುಕಡೆ ಚೆನ್ನಾಗಿ ಹಳಿದಿರುತ್ತಾರೆ. ಈ ವಿಷಯವಾಗಿ ಅವರ ಒಂದು ವಚನವು ಹೀಗಿದೆ :

“ಅಸಮಾಕ್ಷ ದೈವಕ್ಕೆ ಅನ್ಯ ದೈವ ಸರಿ ಎಂಬವರ ಬಾಯಲ್ಲಿ ಮಸೆದ ಕೂರಲಗನಿಕ್ಕದೆ ಮಾಣ್ಬನೆ ? ಹುಸಿಯಾಗಿ ನುಡಿವನ ನಾಯಾಗಿ ಬೊಗಳಿಸನೆ ? ಹಿರಿಯರುತ್ತಮರೆನ್ನದವರ ಕುದುರೆಯಾಗಿ ಕಟ್ಟಿಸನೆ? ಗುರುಲಘುವೆನ್ನದವರ ಬಾಯಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಬನೆ? ಪರಸ್ತ್ರೀಗಳುಪಿದವರ ಗಾಣದ ಲಿಕ್ಕಿ ಹಿಳಿಯನೆ? ಪರಧನಕ್ಕಳುಪಿದವರ ಹಿಡಿಖಂಡವ ಕೊಯ್ಯನೆ? ಎಲೆ ಕೂಡಲ ಸಂಗಮದೇವ, ನಿಮ್ಮ ಹೇಳಿದ ಹೇಳಿಕೆಯಿಂದ ಪಿಂಬೇರ ಮೈಲಗೆ ಮೇಳವಾಡುತ ಇದ್ದ ಕಾಣಾ ತ್ರಿಜಗದೊಳಗೆ.”೧

ಶಂಕರದಾಸಿಮಯ್ಯನ ಕಾಲದಲ್ಲಿಯೂ ಮೈಲಾರಭಕ್ತರ ವರ್ಚಸ್ಸು ವಿಶೇಷವಾಗಿರಬೇಕು. ಅವನು ತನ್ನ ಸಂಚಾರಕಾಲದಲ್ಲಿ ಈ ಮತಗಳನ್ನೆಲ್ಲ ಖಂಡಿಸಿ

---

೧ ರಾ. ಬ. ಹಳಕಟ್ಟಿಯವರಿಂದ ಸಂಪಾದಿತ ‘ಬಸವೇಶ್ವರನ ವಚನಗಳು,’ ೪ನೆಯ ಆವೃತ್ತಿ, ಪುಟ ೧೦೭.

**ಲಿಂಗಾಯತಮತದ ಪ್ರಸಾರ ಮಾಡಿದಂತೆ ಹರಿಹರನ ' ರಗಳೆ 'ಯಿಂದಲೂ ಈ ಪುರಾಣದಿಂದಲೂ ವ್ಯಕ್ತವಾಗುತ್ತದೆ.**

ಇವನು ವಚನಕಾರನಿದ್ದ ಬಗ್ಗೆ ಸಂಶಯವಿದ್ದಿತು. ಗೂಳೂರ ಸಿದ್ಧವೀರಣಾಚಾರ್ಯನ ' **ಶೂನ್ಯಸಂಪಾದನೆ** 'ಯ ಪ್ರಭುವಾರೋಗಣೆಯ ಸಂಪಾದನೆಯಲ್ಲಿ ' ನಿಜಗುರು ಶಂಕರದೇವಾ ' ಎಂಬ ಅಂಕಿತದ ಎರಡು ವಚನಗಳಿವೆ. ಇಷ್ಟರಿಂದಲೇ ಇವನು ವಚನಕಾರನೆಂದು ಹೇಳುವುದಾದರೆ ಇವು ಕ್ಷೇಪಕವಿದ್ದು ಗ್ರಂಥಕಾರನ ಕೈವಾಡದವೆಂದು ಎಲ್ಲ ವಿಮರ್ಶಕರ ಐಕಮತ್ಯವಿರುವುದರಿಂದ ಇವುಗಳ ಆಧಾರದಿಂದಲೇ ಶಂಕರದಾಸಿಮಯ್ಯನು ವಚನಕಾರನಿದ್ದನೆಂದು ಹೇಳಲು ಬರುವಂತಿಲ್ಲ. ವೇ|| ಪಂಡಿತ ಸ. ಹಾ. ಶಿವಮೂರ್ತಿಯೆಂಬವರು ' **ಶಿವಾನುಭವ** ' ದ ೧೯೪೦ನೆಯ ಇಸ್ವಿಯ ಸಪ್ಟೆಂಬರ ತಿಂಗಳ ಸಂಚಿಕೆಯಲ್ಲಿ ಇವನ ವಚನವನ್ನು ಕೊಟ್ಟಿರುವರು. ಶ್ರೀಮಾನ್ ಕೀರ್ತನಕೇಸರಿ ಶಿವಮೂರ್ತಿಶಾಸ್ತ್ರಿಗಳು ತಮ್ಮ ' **ಶರಣಸಾಹಿತ್ಯ** ' ದ ೧೯೪೦ನೆಯ ಇಸ್ವಿಯ ಸಪ್ಟೆಂಬರ ಸಂಚಿಕೆಯಲ್ಲಿ ವೀರಶಂಕರದಾಸಿಮಯ್ಯನೆಂಬೊಬ್ಬ ಮಹಾತ್ಮನು ಶ್ರೀಶೈಲದಲ್ಲಿ ಪವಾಡವನ್ನು ಮೆರೆದನೆಂದು ಕಂಚೀ ಶಂಕರಾರ್ಯನು ತನ್ನ '**ಸಂಸ್ಕೃತ ಬಸವೇಶ ವಿಜಯ**'ದಲ್ಲಿ ಹೇಳಿರುವನೆಂಬ ಆಧಾರದ ಮೇಲಿಂದ, ಇವನು ಪ್ರಸ್ತುತ ಕಾವ್ಯದ ಕಥಾನಾಯಕನಾದ ಶಂಕರದಾಸಿಮಯ್ಯನಿಂದ ಬೇರೆಯವನೆಂದೂ ಪಂಡಿತ ಶಿವಮೂರ್ತಿಯವರು ಕೊಟ್ಟ ವಚನವು ಈ ಶಂಕರದಾಸಿಮಯ್ಯನದಲ್ಲದೆ ವೀರಶಂಕರದಾಸಿಮಯ್ಯನದೆಂದೂ ಅಭಿಪ್ರಾಯ ಪಟ್ಟಿರುವರು. ಕಂಚೀ ಶಂಕರಾರ್ಯನ ಸಂಸ್ಕೃತ ಬಸವೇಶವಿಜಯದ ಪ್ರತಿಯು ಉಪಲಬ್ಧವಿರುವುದಿಲ್ಲ. ಮೈಸೂರಿನ ಪಿ. ಆರ್. ಕರಿಬಸವಶಾಸ್ತ್ರಿಗಳು ಇದರ ಕನ್ನಡ ಅನುವಾದವನ್ನು ಪ್ರಸಿದ್ಧಿಸಿರುವರು. ಇದರಲ್ಲಿ ವೀರಶಂಕರದಾಸಿಮಯ್ಯನ ಕಥೆಯು ಈ ರೀತಿ ಹೇಳಲ್ಪಟ್ಟಿದೆ (ಪುಟ ೩೪೩-೪) :

"ದೃಢವಾದ ಆಚಾರವೂ ಭಕ್ತಿಯೂ ವ್ರತವೂ ಉಳ್ಳ ವೀರಶಂಕರದಾಸನೆಂಬ ಹೆಸರುಳ್ಳ ಒಬ್ಬ ಶಿವಭಕ್ತನಿದ್ದನು. ಆತನು ಕನಸಿನಲ್ಲಾದರೂ ಅನ್ಯ ದೈವಗಳ ನಾಮವನ್ನು ಉಚ್ಚರಿಸುವುದಿಲ್ಲ, ಅವುಗಳನ್ನು ಮುಟ್ಟುವುದೂ ಇಲ್ಲವೆಂದು ಪ್ರತಿಜ್ಞೆಯನ್ನು ಮಾಡಿದನು. ಹೀಗೆ ಕೆಲವು ಕಾಲ ಕಳೆಯುತ್ತಿರಲು, ಒಂದು ದಿನ ಮಲಗಿರುವಾಗ ಒಬ್ಬ ಬೌದ್ಧನು ತನ್ನನ್ನು ಮುಟ್ಟಿದಂತೆ ಸ್ವಪ್ನವನ್ನು ಕಂಡು ಎಚ್ಚರವಾಗಿ, ಅಶುದ್ಧನಾದವನನ್ನು ಮುಟ್ಟಿದ ನನಗೆ ನಾಯಿ ಮುಟ್ಟಿದ ಮಡಕೆಗೆ ಶುದ್ಧಿಯುಂಟಾಗುವಂತೆ ಬೆಂಕಿಯಿಂದ ಶುದ್ಧಿಯಾಗಬೇಕು ಎಂದು ಆಲೋಚಿಸಿದವನಾಗಿ ಶ್ರೀಶೈಲಕ್ಕೆ ಹೋಗಿ, ಹಾಟಕೇಶ್ವರನ ಸನ್ನಿಧಿಯಲ್ಲಿ ಕಗ್ಗಲಿಯ ಸೌದೆಗಳಿಂದ ಅಗ್ನಿಯನ್ನು ಉರಿಸಿ ಅದರ ಮೇಲೆ ಪದ್ಮಾಸನವನ್ನು ಹಾಕಿ ಕುಳಿತುಕೊಂಡು ಶಸ್ತ್ರಗಳಿಂದ ತನ್ನ ದೇಹವನ್ನು ತುಂಡುತುಂಡಾಗಿ ಕತ್ತರಿಸಿ ಮುಖವನ್ನು ಅಲ್ಲಾಡಿಸದೆ ಪಂಚಾಕ್ಷರಿಯನ್ನು ಉಚ್ಚರಿಸುತ್ತ ಅವುಗಳನ್ನು ಬೆಂಕಿಯಲ್ಲಿ ಹೋಮ ಮಾಡಿದನು. ವ್ರತನಿಷ್ಠನಾದ ಆ

ಭಕ್ತನ ಅಮಾನುಷವಾದ, ಆಶ್ಚರ್ಯಕರವಾದ ಧೈರ್ಯವನ್ನು ನೋಡಿ, ಹಾಟಕೇಶ್ವರನು ಆತನಿಗೆ ಸಾಯುಜ್ಯಪದವಿಯನ್ನು ಕೊಟ್ಟನು."

ಶಂಕರದಾಸಿಮಯ್ಯನ ಕಥೆಯು ಈ ಪುಸ್ತಕದಲ್ಲಿ ಬೇರೆ ಹೇಳಲ್ಪಟ್ಟಿರುವುದರಿಂದ ಶಂಕರದಾಸಿಮಯ್ಯನಿಂದ ವೀರಶಂಕರದಾಸಿಮಯ್ಯನು ಬೇರೆಯೆಂದು ವ್ಯಕ್ತವಾಗುತ್ತದೆ. ಆದರೂ ಈ ವೀರಶಂಕರದಾಸಿಮಯ್ಯನ ಉಲ್ಲೇಖವು ಬೇರೆ ಎಲ್ಲಿಯೂ ದೊರೆಯುವುದಿಲ್ಲ. ಪ್ರಸ್ತುತ ಕಾವ್ಯದ ಶಂಕರದಾಸಿಮಯ್ಯನು ಮಾಡಿದ ಕಾರ್ಯಗಳಿಂದ ಅವನು ವೀರ ಶಂಕರದಾಸಿಮಯ್ಯನೆಂದು ಕರೆಯಿಸಿಕೊಳ್ಳಲು ತಕ್ಕವನೆಂದು ಹೊಳೆಯುವಂತಿದೆ. ಸುದೈವದಿಂದ ಇದಕ್ಕೆ ಆಧಾರವೂ ದೊರೆತಿರುವುದು. ಎಳಂದೂರ ಹರೀಶ್ವರಕವಿಕೃತ '**ಶ್ರೀ ಪ್ರಭುದೇವರ ಪುರಾಣ**' ದಲ್ಲಿ ಶಂಕರದಾಸಿಮಯ್ಯನ ಗರ್ವವನ್ನು ಥಕ್ಕೆಯ ಸುಮಾರಣ್ಣನೆಂಬ ಶಿವಶರಣನು ಪರಿಹರಿಸಿದ ಒಂದು ಪ್ರಸಂಗವು ವರ್ಣಿತವಾಗಿದೆ (ಸಂಧಿ ೭, ಪದ್ಯ ೨೦೧-೮).[೧] ಇದರಲ್ಲಿ ಶಂಕರದಾಸಿಮಯ್ಯನೇ ವೀರ ಶಂಕರದಾಸಿಮಯ್ಯನೆಂದು ಕರೆಯಲ್ಪಟ್ಟಿದ್ದಾನೆ. ಆದುದರಿಂದ ಬಲವತ್ತರವಾದ ಆಧಾರಗಳಿಂದ ಕಂಚೀ ಶಂಕರಾರ್ಯನ '**ಬಸವೇಶ ವಿಜಯ**'ದಲ್ಲಿ ಹೇಳಿರುವ ವೀರಶಂಕರದಾಸಿಮಯ್ಯನು ಐತಿಹಾಸಿಕ ಪುರುಷನೆಂದು ಸಿದ್ಧವಾಗುವವರೆಗೆ ಈ ಹೆಸರಿನ ಶರಣನು ನಿಜವಾಗಿ ಆಗಿಹೋಗಿರುವನೆಂದು ನಂಬಲಿಕ್ಕೆ ಬರಲಾರದು. ಇದಕ್ಕೆ ವಚನದ ಆಂತರಿಕ ಆಧಾರವೂ ಉಂಟು. ಅದರಲ್ಲಿ "ನೊಸಲಕಣ್ಣ ತೋರುವಂತಹ ಶಿವಭಕ್ತನನ್ನಾದರೂ ನಿಂದಿಸಿ ನುಡಿಯುತಿಪ್ಪಿರಿ" ಎಂದಿರುವುದು. ವೀರಶಂಕರದಾಸಿಮಯ್ಯನಿಗೆ ನೊಸಲಕಣ್ಣು ಇದ್ದಂತೆ ಪಿ. ಆರ್. ಕರಿಬಸವಶಾಸ್ತ್ರಿಗಳ ಗ್ರಂಥದಲ್ಲಿಲ್ಲ. ಇದೂ ಅಲ್ಲದೆ ಈ ವಚನದ ಭಾವವು ಶಂಕರದಾಸಿಮಯ್ಯನ ವೀರ ವ್ಯಕ್ತಿಯನ್ನೇ ಸಮರ್ಥಿಸುವುದರಿಂದ ಇದು ಇವನದೇಯೆಂದು ನಿಶ್ಚಯವಾಗಿ ನಂಬಲು ಯಾವ ಅಡ್ಡಿ ಇಲ್ಲ.

ಈ ವಚನದ ವಿಷಯವಾಗಿ ಪಂ|| ಶಿವಮೂರ್ತಿಯವರು ಅಂದಿರುವುದೇನೆಂದರೆ:

"೯೪೩ ವಚನಗಳುಳ್ಳ '**ಸಕಲ ಪುರಾತನರ ವಚನಗಳು**' ಎಂಬ ಒಂದು ತಾಡ ಓಲೆಯ ಕಟ್ಟು ಶ್ರೀ ಶಿವಯೋಗಮಂದಿರ (ಬಾದಾಮಿ ತಾಲೂಕ) ಸಂಸ್ಥೆಯ ಪುಸ್ತಕಾಲಯದಲ್ಲಿ ನನಗೆ ದೊರೆಯಿತು. ಇದರಲ್ಲಿ ಹೆಚ್ಚುಕಡಿಮೆ ಸುಮಾರು ೬೦ ಕ್ಕಿಂತಲೂ ಹೆಚ್ಚುಜನ ವಚನಕಾರರ ವಿವಿಧ ವಚನಗಳು, ಅವರವರ ನಾಮನಿರ್ದೇಶಪೂರ್ವಕ ಪ್ರಾಯಃ ಶುದ್ಧವಾಗಿ ಬರೆಯಲ್ಪಟ್ಟಿವೆ. ಇದರ ೩೨ನೆಯ ಪುಟದ ಹಿಮ್ಮೈಯಲ್ಲಿ ವೀರ ಶಂಕರದಾಸಿಮಯ್ಯಗಳ ವಚನವೆಂದು ಹೇಳಿ, ಒಂದೇ ಒಂದು ಬಲು ಉದ್ದವಾದ ವಚನವು ಬರೆಯಲ್ಪಟ್ಟಿದೆ.

೧ ಈ ಪ್ರಸಂಗವು ಬೇರೆ ರೀತಿಯಾಗಿ ಚೆನ್ನಬಸವ ಪುರಾಣದಲ್ಲಿ ಹೇಳಲ್ಪಟ್ಟಿರುವುದು (ಸಂಧಿ ೫೭, ಪದ್ಯ ೨೦).

"ಶಂಕರದಾಸಿಮಯ್ಯಗಳ ಈ ಮುಂದೆ ಉದಾಹೃತವಾಗಿರುವ ವಚನವು, ಅಂದಿನ ವೀರಶೈವ ಮತ್ತು ಬ್ರಾಹ್ಮಣ ಮತಗಳಲ್ಲಿದ್ದ ಧಾರ್ಮಿಕ ನಡೆವಳಿಕೆಗಳನ್ನೂ ಇನ್ನೂ ಕೆಲವು ಸಂಗತಿಗಳನ್ನೂ ನಿರ್ಧರಿಸಲು ಐತಿಹಾಸಿಕ ಪಂಡಿತರಿಗೆ ಅತ್ಯುಪಯುಕ್ತವಾಗುವುದೆಂದು ನನಗೆ ತೋರಿದುದರಿಂದ ಇದನ್ನು ಪ್ರಕಟನೆಗೆ ಕೊಡುವ ಮನ ಮಾಡಿರುತ್ತೇನೆ. ಶಂಕರದಾಸಿಮಯ್ಯಗಳ ವಚನಾಂಕಿತವಾದರೋ - 'ಘನ ಗುರು ಶಿವಲಿಂಗ ರಾಮನಾಥಾ' - ಎಂಬುದೆಂದು ಈ ವಚನದಿಂದ ತಿಳಿಯತ್ತದೆ.

"ನಮಗೆ ದೊರೆತಿರುವ ಈ ತಾಡ ಓಲೆಯ ಪ್ರತಿಯಲ್ಲಿ ಯಾವ ವಚನಕಾರರ ಅಂಕಿತವೂ ಅಸ್ತವ್ಯಸ್ತವಾಗಿರುವುದಿಲ್ಲ. ಇದು ಕಾರಣ - ಘನ ಗುರು ಶಿವಲಿಂಗ ರಾಮನಾಥಾ - ಎಂಬುದೇ (ವೀರ) ಶಂಕರದಾಸಿಮಯ್ಯಗಳ ವಚನಾಂಕಿತವೆಂದು ನಿರ್ಧರಿಸಲಾಗುವುದು."

ಮೇಲೆ ಹೇಳಿದಂತೆ ಐತಿಹಾಸಿಕ ಪಂಡಿತರಿಗೆ ಅತ್ಯುಪಯುಕ್ತವಾಗುವುದೆಂದು ಬಗೆದು ಆ ವಚನವನ್ನು ಸಂಪೂರ್ಣವಾಗಿ ಪುನಃ ಇಲ್ಲಿ ಕೊಟ್ಟಿರುತ್ತದೆ :

## ವಚನ

ಶಿವ ಶಿವಾ ದ್ವಿಜರೆಂಬ ಪಾತಕರು ನೀವು ಕೇಳಿರೋ! ನೀವು ಎಲ್ಲಾ ಜಾತಿಗೂ ಮಿಗಿಲೆಂದು वर्णानां ब्रह्मणो गुरुः ಎಂದು ಬಳ್ಳಿಟ್ಟು ಬಾಸ್ಕಳಗೆಡವುತ್ತಿಪ್ಪಿರಿ ನೋಡಾ. आदिबिन्दुःभवे बीजम् ಎಂಬ ಶ್ರುತಿಯಿಂ ತಿಳಿದು ನೋಡಲು, ಆದಿಯಲ್ಲಿ ನಿಮ್ಮ ಮಾತಾ ಪಿತರ ಕೀವುರಕ್ತದ ಮಿಶ್ರದಿಂದ ನಿಮ್ಮ ಪಿಂಡವುದಯಿಸಿತ್ತು. ಆ ಕೀವುರಕ್ತಕ್ಕೆ ಆವ ಕುಲ ಹೇಳಿರೇ? ಆದೂ ಅಲ್ಲದೆ ಪಿಂಡ ಒಂಬತ್ತು ತಿಂಗಳು ಒಡಲೊಳಗೆ ಕರುಳು ಮಲ ಮೂತ್ರ ಕೀವು ದುರ್ಗಂಧ ರಕ್ತ ಖಂಡ ಕಾಳಿಜ ಜಂತುಗಳೊಳಗೆ ಪಾಕುಳದೊಳಗಣ ಕ್ರಿಯೆಯಂತೆ ಹೊದಕುಳಿಯುಂಬಂದು ನೀವಾವ ಕುಲವ ಹೇಳಿರೇ? ಅದೂ ಅಲ್ಲದೆ ಮೂತ್ರದ ಕುಳಿಯ ಹೊರವಡುವಾಗ, ಹೊಲೆ ಮುಂತಾಗಿ ಮುದುಡಿ ಬಿದ್ದಲ್ಲಿ ಹೆತ್ತವಳು ಹೊಲತಿ ಹೋ. ಹುಟ್ಟಿದ ಮಗುವು ಹೊಲೆಯನೆಂದು ನಿಮ್ಮ ಕುಲ ಗೋತ್ರ ಮುಟ್ಟಲಮ್ಮದೆ, ಹನ್ನೆರಡು ದಿನದಂದು ಪ್ರಾಯಶ್ಚಿತ್ತವನಿಕ್ಕಿಸಿ ಕೊಂಬಂದು ನೀವಾವ ಕುಲ ಹೇಳಿರೇ? ಮುಂಜಿಗಟ್ಟದ ಮುನ್ನ ಕೀಳು ಜಾತಿ, ಮುಂಜಿ ಗಟ್ಟಿದ ಬಳಿಕ ಮೇಲು ಜಾತಿಗಳು ಎಂಬ ಪಾತಕರು ನಿಮ್ಮ ನುಡಿಯು ಕೊರತೆಗೆ ನೀವು ಬಲು ನಾಚಬೇಡವೇ? ನೀವು ನಾಚದಿರ್ದಡೆ ನಾ ನಿಮ್ಮ ಕುಲದ ಬೇರನೆತ್ತಿ ಕೆಳಗು ಮಾಡಿ ತೋರಿಹೆನು: ನಾವು ಉತ್ತಮದ ಬ್ರಾಹ್ಮಣರೆಂಬ ನಿಮ್ಮ ದೇಹ ಬ್ರಾಹ್ಮವೋ ನಿಮ್ಮ ಪ್ರಾಣ ಬ್ರಾಹ್ಮವೋ, ಆವುದು? ಬ್ರಾಹ್ಮಣ್ಯ ಬಲ್ಲರೆ ಬಗುಳಿರೇ? ಅರಿಯದಿದ್ದರೆ ಕೇಳು: ದೇಹ ಕುಲಜನೆಂದರೆ ಚರ್ಮಕ್ಕೆ ಕುಲವಿಲ್ಲ ಖಂಡಕ್ಕೆ ಕುಲ ವಿಲ್ಲ ಎಲುವಿಂಗೆ ಕುಲವಿಲ್ಲ ನರವಿಂಗೆ ಕುಲವಿಲ್ಲ ರಕ್ತಕ್ಕೆ ಕುಲವಿಲ್ಲ ಕೀವಿಂಗೆ ಕುಲವಿಲ್ಲ

ಕರುಳಿಂಗೆ ಕುಲವಿಲ್ಲ ಮಲ ಮೂತ್ರಕೆಂತೂ ಕುಲವಿಲ್ಲ. ಒಡಲೆಂಬುದು ಅಪವಿತ್ರ
ವಾಯಿತ್ತು. ಕುಲವೆಲ್ಲಿಯದೋ ಒಡಲಿಂಗೆ? ಅವಂತಿರಲಿ. ನಿಮ್ಮ ಪ್ರಾಣಕ್ಕೆ ಕುಲ
ವುಂಟೆಂದರೆ: ಪ್ರಾಣ ದಶವಾಯುವಾದ ಕಾರಣ ಆ ವಾಯು ಹಾರುವನಲ್ಲ. ಅದು
ವಲ್ಲದೆ ನಿಮ್ಮ ಒಡಲನಲುಗಾಡಿಯಿರಿವ ಕಾಮ ಕ್ರೋಧ ಲೋಭ ಮೋಹ ಮದ ಮತ್ಸ
ರಂಗಳು ಉತ್ತಮ ಕುಲವೆಂಬ ಅವು ಮುನ್ನವೆ ಪಾಪಕಾರಿಗಳಾದ ಕಾರಣ ಅವಕ್ಕೆ
ಕುಲವಿಲ್ಲ. ನಿಲ್ಲು ಮಾಣು, ನಿಮ್ಮೊಳಗಣ ಸಪ್ತವ್ಯಸನಂಗಳು ಉತ್ತಮ ಕುಲವೆಂಬ
ಅವು ಮುನ್ನವೆ ದುರ್ವ್ಯಸನಂಗಳಾದ ಕಾರಣ ಅವಕೆಂದೂ ಕುಲವಿಲ್ಲ. ನಿಲ್ಲು ಮಾಣು,
ನಿಮ್ಮ ಅಷ್ಟಮದಂಗಳು ಉತ್ತಮ ಕುಲವೆಂಬ ಅವು, ನಿನ್ನ ಸುರೆಯ ಸವಿದ ಕೋಡ
ಗದ ಹಾಂಗೆ ಮುಂದುಗಾಣಲೀಯವಾದ ಕಾರಣ ಅವಕೆ ಕುಲವಿಲ್ಲ. ನಿಲ್ಲು, ಬಗುಳ
ದಿರಿ. ಇನ್ನು ಒಡಲ ತಾಪತ್ರಯಂಗಳು ಉತ್ತಮ ಕುಲವೆಂಬಡೆ ಅವು ನಿಮ್ಮ ಉರಿದು
ರಿದು ಸುಡುವ ಒಡಲಗಿಚ್ಚುಗಳು, ಕುಲವಿಲ್ಲ. ನಿಲ್ಲು ಮಾಣು. ನಿಮ್ಮೊಡಲ
ಮುಚ್ಚಿದ ಮಲಮೂತ್ರಂಗಳಿಗೆ ಕುಲವುಂಟೇ? ಅವು ಅರಿಕೆಯ ಮಲಮೂತ್ರಗಳಾದ
ಕಾರಣ ಅವಕ್ಕೆ ಕುಲವಿಲ್ಲ. ನಿಲ್ಲು ಮಾಣು. ಇನ್ನು ಉಳಿದ ಅಂತಃಕರಣಂಗಳಿಗೆ
ಉತ್ತಮ ಕುಲವೆಂಬಿರಿ. ಅವ ನೀವು ಕಾಣರಿ, ನಿಮ್ಮ ಮನವು ಕಾಣದು. ಅದು
ಕಾರಣ ಬಯಲಭ್ರಮೆಗೆ ಉತ್ತಮಕುಲವುಂಟೇ? ಇಲ್ಲ, ನಿಲ್ಲು ಮಾಣು. ಇಂತು
ನಿಮ್ಮ ಪಂಚಭೂತ ಸಪ್ತಧಾತು ಪಂಚೇಂದ್ರಿಯಂಗಳು ಉತ್ತಮ ಕುಲವೆಂಬ ಅವು
ಎಲ್ಲಾ ಜೀವರಾಶಿಗೂ ನಿಮಗೂ ಒಂದೇ ಸಮಾನ. ಅದೆಂತೆಂದೊಡೆ:

सप्तधातुसमं पिन्डं समयोनिसमुद्भवम |
आत्मजीवसमायुक्तं वर्णानां किं प्रयोजनम ||

ಎಂದುದಾಗಿ ನಿಮ್ಮ ದೇಹಕ್ಕೆ ಕುಲವಾವುದು ಹೇಳಿರೇ? ಇದಲ್ಲದೆ ಆತ್ಮನು
ದೇಹವ ಬಿಟ್ಟು ಒಂದು ಘಳಿಗೆ ತೊಲಗಿರಲು, ಆ ದೇಹ ಹಡಿಕೆಯಾಗಿ ಹುಳಿತು
ನಾಯಿ ನರಿ ತಿಂಬ ಕಾರಣ ನಿಮ್ಮ ದೇಹ ಅಪವಿತ್ರ ಕಾಣಿರೋ! ಇಂತಪ್ಪ ಅಪವಿತ್ರ
ಕಾಯಕ್ಕೆ ಕುಲವಿಲ್ಲ. ಆ ಕಾಯಕ್ಕೆ ಕುಲ ಉಂಟೆಂದರೆ ಮೇಲುಜಾತಿಯ ದೇಹದೊ
ಳಗೆ ಹಾಲುಳ್ಳರೆ, ಕೀಳುಜಾತಿಯ ದೇಹದೊಳಗೆ ರಕ್ತವುಳ್ಳರೆ ಅದು ಕುಲವಹುದು.
ಅಂಥಾ ಗುಣ ನಿಮಗಿಲ್ಲವಾಗಿ ಎಲ್ಲಾ ಜೀವರಾಶಿಯ ದೇಹವೂ ನಿಮ್ಮ
ದೇಹವೂ ಒಂದೇ ಸಮಾನವಾದ ಕಾರಣ ನಿಮಗೆ ಕುಲವಿಲ್ಲ. ನಿಲ್ಲು ಮಾಣು.
ಒಡಲು ಕರ್ಣಾದಿಗಳು ಕುಲವಿಲ್ಲದೆ ಹೋದಡೂ ಎಲ್ಲವನರಿವ ಚೈತನ್ಯಾತ್ಮಕ
ನೆಂಬೊಡೆ ಆತ್ಮನಾವ ಕುಲಜನೂ ಅಲ್ಲ. ಅದು ಆವ ಕುಲವೆಂದು ಹೆಸರುಗೊಂಬ ಆತ್ಮ
ಹೆಣ್ಣಲ್ಲ ಗಂಡಲ್ಲ ನಪುಂಸಕನಲ್ಲ ಸ್ಥೂಲನಲ್ಲ ಸೂಕ್ಷ್ಮನಲ್ಲ ಷಡುವರ್ಣದೊಳಗೆ
ಆವ ವರ್ಣನೂ ಅಲ್ಲ. ಅದು ಕಾರಣ ವರ್ಣವ ಹೊದ್ದದ ಆತ್ಮನನರಿಯರಾಗಿ ಆ
ಆತ್ಮನು ಆವ ಕುಲದೊಳಗೂ ಅಲ್ಲ. ಶರೀರ ಬೇರೆ, ಆತ್ಮ ಬೇರೆ. ಅದೆಂತೆಂದೊಡೆ:

भूयो हि मृद्भांडमनेकरूपं सुवर्णमेकं बहुभूषणानाम् ।
गोक्षीरमेकं बहुवर्णधेनवः शरीरभिन्नं परमात्ममेकम् ॥

ಎಂದುದಾಗಿ ಶರೀರಂಗಳು ಅನಂತ, ಆತ್ಮನೊಬ್ಬನೆ. ಅದುಕಾರಣ ಆ ಆತ್ಮನು ಆವ ಕುಲದಲೂ ಅಲ್ಲ. ಇನ್ನು ಆವ ಠಾವಿನಲ್ಲಿ ನಿಮ್ಮ ಕುಲವ ಪ್ರತಿಷ್ಠೆಯ ಮಾಡಿ ತೋರುವಿರೋ? ದೇಹ ಮೃತ್ತಿಕೆ, ಆತ್ಮ ನಿರಾಕಾರನೆನುತ್ತಿರಲು, ಇನ್ನಾವ ಪರಿಯಲ್ಲಿ ನೀವು ಉತ್ತಮ ಕುಲಜರೆಂಬಿರೋ?

जीवः शिवः शिवो जीवः . . . . केवलः शिवः ।
पाशबद्धस्थितो जीवः पाशमुक्तः सदाशिवः ॥

ಎಂಬ ಶ್ರುತಿಯಂ ತಿಳಿದು ನೋಡಲು, ನೀವೆಲ್ಲಾ ಪಾಶಬದ್ಧ ಜೀವಿಗಳಾಗುತ್ತ ಯಿರಲು ನಿಮಗೆಲ್ಲಿಯ ಉತ್ತಮ ಕುಲವು? ಪಾಶಮುಕ್ತರಾದ ಎಮ್ಮ ಶಿವಭಕ್ತರೆ ಕುಲಜರಲ್ಲದೆ, ನಿಮಗೆ ಉತ್ತಮ ಕುಲವುಂಟಾದರೆ, ನಿಮ್ಮ ದೇಹದೊಳಗೆ ಹೊರಗೆ ಇಂಥಾ ಠಾವೆಂದು ಬೆರಳ ಮಡಿದು ತೋರಿ. ಅದು ಅಲ್ಲದೆ ಒಂದು ಪಕ್ಷಿಯ ತತ್ತಿಯೊಳಗೆ ಹಲವು ಮರಿ ಹುಟ್ಟಿದರೆ, ಒಂದರ ಮರಿಯೊ ಹಲವು ಪಕ್ಷಿಯ ಮರಿಯೊ? ತಿಳಿದು ನೋಡಿದರೆ ಅವಕ್ಕೆ ಬೇರೆ ಬೇರೆ ಪಕ್ಷಿಗಳೆಂಬ ಕುಲವಿಲ್ಲ. ಆಹಾಂಗೆ ಒಬ್ಬ ಬ್ರಹ್ಮನ ಅಂಡವೆಂಬ ತತ್ತಿಯೊಳಗೆ ಸಕಳ ಜೀವರಾಶಿಯೆಲ್ಲವೂ ಉದಯಿಸಿದುವು. ಅದೆಂತೆಂದೊಡೆ:

पृथिव्याकाशमजांडं तस्यांडे जायते कुलम् ।
अन्त्यजातिद्विजातीनां एकयोनिसहोदराः ॥

ಎಂಬುದಾಗಿ ಇರುಹೆ ಮೊದಲು ಆನೆ ಕಡೆಯಾದ ಸಚರಾಚರವೆಲ್ಲವೂ ಒಬ್ಬ ಬ್ರಹ್ಮನ ಅಂಡದೊಳಗೆ ಹುಟ್ಟಿ 'ಏಕಯೋನಿ ಸಹೋದರಾಃ' ಎಂದು ಪ್ರತಿಷ್ಠಿಸುತ್ತಿರಲು ನಿಮಗೆಲ್ಲಿಯ ಕುಲವೋ? ಶಿವಭಕ್ತರೆ ಉತ್ತಮರು ಕುಲಜರೆಂದು, ಮಿಕ್ಕಿನವರೆಲ್ಲಾ ಕೀಳುಜಾತಿಯೆಂಬುದನು ಓದಿ ಬರುದೊರೆಯಾದರು. ನಾನು ನಿನಗೆ ಹೇಳಿಹೆನು ಕೇಳು:

श्वपचोऽपि मुनिश्रेष्ठः शिवसंस्कारसंयुतः ।
शिवसंस्कारहीनस्तु विप्रोऽपि श्वपचाधमः ॥

ಎಂಬ ಶ್ರುತಿಗೆ ಇದಿರುತ್ತರವ ಕೊಟ್ಟರೆ ಬಾಯಲ್ಲಿ ಕೋಷ್ಠ ಮೂಡುವುದಾಗಿ ನೀವೆ ಕೀಳುಜಾತಿಗಳು. ಅರಿದ ಶಿವಭಕ್ತರು ಸತ್ಕುಲಜರೆಂದು ಸುಮ್ಮನಿರಿರೊ! ಅಲ್ಲದ ಅಜ್ಞಾನದವರಾದುದೆಲ್ಲಾ ಒಂದು ಕುಲ, ಸುಜ್ಞಾನದವರಾದುದೆಲ್ಲಾ ಒಂದು ಕುಲವೆಂದು ಶಾಸ್ತ್ರಂಗಳು ಹೇಳುತ್ತಿದ್ದಾವೆ. ಅದೆಂತೆಂದೊಡೆ:

आहारनिद्राभयमैथुनं च सामान्यमेतत् पशुभिर्नराणाम् ।
ज्ञानं नराणामधिको विशेषो ज्ञानेन हीनः पशुभिः समानः ॥

ಎಂಬುದಾಗಿ, ಅಜ್ಞಾನತಂಡುಗಳು ನೀವೆಲ್ಲರೂ ಕರ್ಮಪಾಶಬದ್ಧರು. ನಿಮಗೆಲ್ಲಿಯದೊ ಸತ್ಕುಲ? ಇದು ಅಲ್ಲದೆ ನಿಮ್ಮ ನುಡಿಯೊಡನೆ ನಿಮಗೆ ಹಗೆ ಮಾಡಿ ತೋರಿಹೆನು ಕೇಳಿರೋ: ನಿಮಗೆ ಕುಲವು ವಶಿಷ್ಠ ವಿಶ್ವಾಮಿತ್ರ ಭರದ್ವಾಜ ಕೌಂಡಿನ್ಯ ಕಶ್ಯಪನೆಂಬ ಋಷಿಗಳಿಂದ ಬಂದಿತ್ತೆಂಬಿರಿ. ಅವರ ಪೂರ್ವವನೆತ್ತಿ ನುಡಿದರೆ ಹುರುಳಿಲ್ಲ. ಅವರೆಲ್ಲಾ ಕೀಳುಜಾತಿಗಳಾದ ಕಾರಣ ನೀವೆ ಋಷಿಮೂಲವನು ನದಿ ಮೂಲವನೆತ್ತಲಾಗದೆಂಬಿರಿ. ಇನ್ನು ನಿಮ್ಮ ನುಡಿ ನಿಮಗೆಯಾಯಿತ್ತೆಂದೆ ಕೇಳಿರೋ. ಆ ಋಷಿಗಳ ಸಂತಾನವಾಗಿ ನಿಮ್ಮ ಮೂಲವನೆತ್ತಿದಡೂ ಹುರುಳಿಲ್ಲ. ಅದಂತಿರಲಿ.

" ನಿಮ್ಮ ಕುಲಕೆ ಗುರುವೆನಿಸುವ ಋಷಿಗಳೆಲ್ಲರೂ ಲಿಂಗವನಲ್ಲದೆ ಪೂಜಿಸರು, ವಿಭೂತಿ ರುದ್ರಾಕ್ಷಿಯನಲ್ಲದೆ ಧರಿಸರು, ಪಂಚಾಕ್ಷರಿಯನಲ್ಲದೆ ಜಪಿಸರು, ಜೆಡೆಯನಲ್ಲದೆ ಕಟ್ಟರು. ಹಾಗೆ ನೀವು ಲಿಂಗವ ಪೂಜಿಸಿ, ವಿಭೂತಿ ರುದ್ರಾಕ್ಷಿಯ ಧರಿಸಿ, ಪಂಚಾಕ್ಷರಿಯ ಜಪಿಸಿ, ಜೆಡೆಯ ಕಟ್ಟೆ, ಈಶ್ವರಲಾಂಛನವ ಧರಿಸಿದಡೆ ನೀವು ಋಷಿ ಮೂಲದವರಹುದು. ಹೇಗಾದರೂ ಅನುಸರಿಸಿಕೊಳ್ಳಬಹುದು. ಅದು ನಿಮಗಲ್ಲದ ಮಟ್ಟೆಯನಿಟ್ಟು ವಿಷ್ಣುವಂ ಪೂಜಿಸಿ ಮುಡುಹುಂ ಸುಡಿಸಿಕೊಂಡು ಸಾಲಿಗ್ರಾಮ ಶಕ್ತಿ ಲಕ್ಷುಮಿ ದುರ್ಗಿಯೆಂಬ ಕಿರುಕುಳ ದೈವಮಂ ಪೂಜಿಸಿ ನರಕಕ್ಕಿಳಿದು ಹೋಹವರಾದ ಕಾರಣ, ನೀವೇ ಹೀನಜಾತಿಗಳು, ನಿಮ್ಮ ಋಷಿಮಾರ್ಗವ ವಿಚಾರಿಸಿ ನಡೆಯರಾಗಿ ನೀವೇ ಗುರುದ್ರೋಹಿಗಳು, ಲಿಂಗವೆ ದೈವವೆಂದು ಏಕನಿಷ್ಠೆಯಿಂದಲಿರರಾಗಿ ನೀವೇ ಗುರುಲಿಂಗದ್ರೋಹಿಗಳು, ಪಂಚಾಕ್ಷರಿಯ ನೆನೆಯರಾಗಿ ಮಂತ್ರದ್ರೋಹಿಗಳು, ರುದ್ರಾಕ್ಷಿಯ ಧರಿಸರಾದ ಕಾರಣ ನೀವು ಶಿವಲಾಂಛನದ್ರೋಹಿಗಳು, ಶಿವಭಕ್ತರಿಗೆ ಎರಗದ ಕಾರಣ ನೀವು ಶಿವಭಕ್ತರಿಗೆ ದ್ರೋಹಿಗಳು. ನಿಮ್ಮ ಮುಖವ ನೋಡಲಾಗದು. ಬರಿದೆ ಬ್ರಹ್ಮವನಾಚರಿಸಿ ನಾವು ಬ್ರಹ್ಮರೆಂಬಿರಿ. ಬ್ರಹ್ಮವೆಂತಿಪ್ಪುದೆಂದರಿಯರಿ. ಬ್ರಹ್ಮಕ್ಕೂ ನಿಮಗೂ ಸಂಬಂಧವೇನೋ:

सत्यं ब्रह्म शौचं ब्रह्म ब्रह्म चेन्द्रियनिग्रहः ।
सर्वजीवदया ब्रह्म इत्येतद्ब्रह्मलक्षणम् ॥
सत्यं नास्ति शौचं नास्ति नास्ति चेन्द्रियनिग्रहः ।
सर्वजीवदया नास्ति एतच्चांडाललक्षणम् ॥

" ಬ್ರಹ್ಮಕ್ಕೂ ನಿಮಗೂ ಸಂಬಂಧವೇನೋ! ಬ್ರಹ್ಮವೆ ನಿಃಕರ್ಮ; ನೀವೆ ಕರ್ಮಿಗಳು. ಮತ್ತೆಂತೊ - ब्रह्म चरतीति ब्राह्मणः ಎಂದು ಗಳಹುತಿಪ್ಪಿರಿ. ಗಾಯತ್ರಿಯ ಜಪಿಸಿ ನಾವು ಕುಲಜರೆಂಬಿರಿ. ಆ ಗಾಯತ್ರಿ ಕರ್ಮವಲ್ಲದೆ ಮುಕ್ತಿಗೆ ಕಾರಣವಲ್ಲ. ಅಂತೂ ನೀವು ಗಾಯತ್ರಿಯಿಂದ ಕುಲಜರಲ್ಲ. ವೇದವನೋದಿ ನಾವೆ ಬ್ರಹ್ಮರಾದೆವೆಂಬಿರಿ. ವೇದ ಹೇಳಿದ ಹಾಂಗೆ ನಡೆಯಿರಿ. ಅದೆಂತೆಂದೊಡೆ: द्यावाभूमी जनयन् देवो एकः ಎಂದೋದಿ ಮರೆದು ವಿಷ್ಣುವನೆ ಭಜಿಸುವಿರಿ. ನೀವೆ ವೇದ

ವಿರುದ್ಧಿಗಳು. विश्वतोमुखो विश्वतश्चक्षुर्विश्वतोबाहुः— ಎಂದೊರೆವುತ್ತಂ, एको रुद्रो न द्वितीयाय तस्थे- ಎಂದು ಮರೆದು ಬೇರೊಬ್ಬ ದೈವವುಂಟೆಂದು ಗಳಹುತಿಪ್ಪಿರಿ. ನೀವೆ ವೇದದ್ರೋಹಿಗಳು. एकमेवाद्वितीयं ब्रह्म ಎಂದೋದಿ ಕರ್ಮದಲ್ಲಿ ಸಿಕ್ಕಿಪ್ಪಿರಿ. ನೀವೆ ದುಃಕರ್ಮಿಗಳು. अयं मे हस्तो भगवान् अयं मे भगवत्तरः ಎಂದೋದಿ ಅನ್ಯ ಪೂಜೆಯಂ ಮಾಡುತಿಪ್ಪಿರಿ. ನೀವೆ ಪತಿತರು. शिवौ मे पितरौ ಎಂದೋದಿ ಸನ್ಯಾಸಿ ಗಳಿಗೆ ಮಕ್ಕಳೆಂಬಿರಿ. ನೀವೆ ಶಾಸ್ತ್ರವಿರುದ್ಧಿಗಳು.

सद्योजाताद्भवेद्भूमिर्वामदेवात्तदा जलम् ।
अघोरादग्निमित्याहुस्तत्पुरुषाद्वायुरुच्यते ।
ईशानाद्गगनाकारं पंच ब्रह्ममयं जगत् ॥

ಎಂದೋದಿ सर्वं विष्णुमयं ಎನುತಿಪ್ಪಿರಿ. ನಿಮ್ಮಿಂದ ಶಿವದ್ರೋಹಿಗಳಾರೋ? जलमिति भस्म स्थलमिति भस्म अग्निरिति भस्म वायुरिति भस्म ಎಂದೋದಿ ಮರೆದು ವಿಭೂತಿಯನಿಡಲೊಲ್ಲದೆ ಮಟ್ಟಿಯನಿಡುವಿರಿ. ನಿಮ್ಮಿಂದ ಪತಿತರಿನ್ನಾರೋ? रुद्राक्षधारणं रुद्र ಎಂಬುದನೋದಿ ರುದ್ರಾಕ್ಷಿಯಂ ಧರಿಸಲೊಲ್ಲದೆ ಪದ್ಮಾಕ್ಷಿ ತೊಳಸಿಯ ಮಣಿಯಂ ಕಟ್ಟಿಕೊಂಬಿರಿ. ನಿಮ್ಮಿಂದ ಪಾಪಿಗಳಿನ್ನಾರೋ? पंचाक्षरसमो मन्त्रो नास्ति तत्त्वं महामुने ಎಂಬುದನೋದಿ ಪಂಚಾಕ್ಷರಿಯ ಜಪಿಸಲೊಲ್ಲದೆ, ಗೋಪಾಳ ಮಂತ್ರವ ನೆನವಿರಿ ಎಂತೋ? ನಿಮ್ಮ ನುಡಿ ನಿಮಗೆ ವಿರುದ್ಧವಾಗಿರಲು, ನೀವು ಓದುವ ವೇದ ನಿಮಗೆ ವಿರುದ್ಧವಾಗಿರಲು, ನಿಮ್ಮ ಉತ್ತಮ ಕುಲಜರೆಂದು ವಂದಿಸಿದವರಿಗೆ ಸೂಕರಜನ್ಮದಲ್ಲಿ ಬಪ್ಪುದು ತಪ್ಪದು ನೋಡಿರಿ.

विप्राणां दर्शनेनैव पापं भुजन्तु मानवाः ।
विप्राणां वन्दनं चैव कोटिजन्मसु सूकराः ॥

ಇಂತೆಂದುದಾಗಿ ನಿಮ್ಮೊಡನೆ ಮಾತನಾಡಿದೊಡನೆ ಪಂಚಮಹಾಪಾತಕ, ನಿಮ್ಮ ಮುಖವ ನೋಡಿದರೆ ಅಘೋರ ನರಕ. ಅದೆಂತೆಂದೊಡೆ: ಒಬ್ಬ ಹಾರುವನ ದಾರಿಯಲ್ಲಿ ಕಂಡರೆ ಇರಿದು ಕೆಡಹಿದಲ್ಲದೆ ಹೋಗಬಾರದೆಂದು ನಿಮ್ಮ ವಾಕ್ಯವೆಂಬ ನೇಣಿಂದ ಹೆಡಗುಡಿಯ ಕಟ್ಟಿಸಿಕೊಳುತಿಪ್ಪಿರಿ. ಮತ್ತಂ ನಿಮ್ಮ ದುಶ್ಚರಿತ್ರವ ನಾನೆಣಿಸುವರೆ, अणोरणीयान् महतो महीयान । ಎಂಬುದ ನೀವೆ ಓದಿ, ಪ್ರಾಣಿಯಂ ಕೊಂದು ಯಾಗವನಿಕ್ಕಿ ದೇವರ್ಕಳುಗಳಿಗೆ ಹೋಮದ ಹೊಗೆಯಂ ತೋರಿ ಕೊಬ್ಬಿ ಬೆಳೆದ ಸವಿಯುಳ್ಳ ಖಂಡವನೆ ತಿಂದು ಸೋಮಪಾನವೆಂಬ ಸುರೆಯನೆ ಕುಡಿದು, ಮೈಮರೆದು ನೊಸಲಕಣ್ಣ ತೋರುವಂತಹ ಶಿವಭಕ್ತನನ್ನಾದರೂ ನಿಂದಿಸಿ ನುಡಿಯುತಿಪ್ಪಿರಿ. ನಿಮ್ಮೊಡನೆ ನುಡಿವರೇ? ಗುರುಲಿಂಗವಿಲ್ಲದವರು ನುಡಿವರಲ್ಲದೆ, ಗುರುಲಿಂಗವುಳ್ಳವರು ನುಡಿವರೇ? ಇದು ಶ್ರುತ ದೃಷ್ಟ ಅನುಮಾನದಿಂದ ವಿಚಾರಿಸಿ ನೋಡಲು ನೀವೆ ಪಂಚಮಹಾಪಾತಕರು. ಶಿವಭಕ್ತಿಯನರಿಯದ ನರರೂಪಿನ ನರಿಗಳು.

ನಿಮ್ಮಿಂದ (ಎಳುಬೆಲೆ?) ಹೊರಗಾದ ಹೊಲೆಯನೆ ಉತ್ತಮ ಕುಲಜನೆಂದು ಮುಡಿಗೆಯ ಹಾಕಿದೆನು; ಎತ್ತಿರೋ. ಉತ್ತಮ ಶಿವಭಕ್ತರೇ ಅಧಿಕರು ಎಂದು, ಶಿವಭಕ್ತರೇ ಕುಲಜರು ಎಂದು, ಶಿವಭಕ್ತರೇ ಸದಾಚಾರಿಗಳು ಶಿವಭಕ್ತರೇ ಪಾಪರಹಿತರು ಎಂದು, ಎಮ್ಮ ಶಿವಭಕ್ತರೇ ಸರ್ವ ಜೀವ ದಯಾಪಾರಿಗಳು ಎಂದು, ಶಿವಭಕ್ತರೇ ಸದ್ಯೋನ್ಮುಕ್ತರಯ್ಯಾ, ಘನಗುರು ಶಿವಲಿಂಗ ರಾಮನಾಥಾ."

ವೇ || ಶಿವಮೂರ್ತಿಯವರು ಅನ್ನುವಂತೆ ಈ ವಚನದಲ್ಲಿಯ ಕಟುತರವಾದ ಶಬ್ದಗಳು ಆಗಿನ ಪರಿಸ್ಥಿತಿಯನ್ನು ತೋರಿಸುತ್ತವೆಯೇ ಹೊರ್ತು ಈಗಿನ ಕಾಲಕ್ಕೆ ಅನ್ವಯಿಸುವುದಿಲ್ಲವೆಂದು ಬೇರೆ ಹೇಳಲಿಕ್ಕೆ ಬೇಡ.

ಈ ವಚನದಲ್ಲಿ ಕೊಟ್ಟ ಆಧಾರಗಳು ಮೂಲದಲ್ಲಿ ಅಶುದ್ಧವಿದ್ದು ನನಗೆ ತಿಳಿದ ಮಟ್ಟಿಗೆ ಅವುಗಳನ್ನು ತಿದ್ದಿರುವೆನು.

## (೩) ಈ ಪುರಾಣದಲ್ಲಿ ಬಂದಿರುವ ಸ್ಥಲಗಳ ವರ್ಣನೆ

**ಕಂದಶಿಲೆ (ಕಂದಗಲ್ಲು), ನವಿಲೆ**- ಈ ಗ್ರಾಮಗಳು ಜೋಡಾಗಿ ಎರಡು ಕಡೆ ಇರುವುವು. ಒಂದು ಕಂದಗಲ್ಲು ಬಳ್ಳಾರಿ ಜಿಲ್ಹೆಯ ಹಡಗಲಿ ತಾಲೂಕಿನಲ್ಲಿ ಹಡಗಲಿಯಿಂದ ಉತ್ತರಕ್ಕೆ ೮ ಮೈಲುಗಳ ಅಂತರದಲ್ಲಿ ಗದುಗಿನ ಆಗ್ನೇಯಕ್ಕೆ ೩೧ ಮೈಲುಗಳ ಮೇಲೆ ತುಂಗಭದ್ರಾನದಿಯ ದಕ್ಷಿಣಕ್ಕಿರುವುದು. ಅಲ್ಲಿಂದ ದಕ್ಷಿಣಕ್ಕೆ ೭ ಮೈಲುಗಳ ಅಂತರದಲ್ಲಿ ನದಿಯ ಅದೇ ದಂಡೆಯ ಮೇಲೆ ನವಿಲೆಯು. ಶಂಕರನ ದೇವಾಲಯವು ನವಿಲೆಯ ಪೂರ್ವಕ್ಕೆ ೧ ಮೈಲಿನ ಮೇಲೆ ಕೋಟಿನಕಲ್ಲೆಂಬ ಜನವಸ್ತಿಯಿಲ್ಲದ ಗ್ರಾಮದ ಸೀಮೆಯಲ್ಲಿರುವುದು. ಈ ಭಾಗದ ಜನರು ಈ ಕಂದಗಲ್ಲೇ ಶಂಕರದಾಸಿಮಯ್ಯನ ಜನ್ಮಸ್ಥಾನವೆಂದೂ ಈ ದೇವಾಲಯದಲ್ಲಿರುವ ಲಿಂಗವೇ ಜಡೆಯ ಶಂಕರನೆಂದೂ ನಂಬಿರುವರು. ದೇವಾಲಯದ ಗರ್ಭಗುಡಿಯ ಮುಂದಿನ ಮಂಟಪದಲ್ಲಿ ಒಂದು ಶಿಲಾಶಾಸನವಿರುವುದು. ಇದರಲ್ಲಿ ೬೮ ಸಾಲುಗಳಿದ್ದು ಬೇರೆ ಬೇರೆ ಕಾಲಗಳಲ್ಲಿ ಕೊಟ್ಟ ೪ ದಾನಗಳ ಉಲ್ಲೇಖವದೆ. ಮೊದಲಿನ ೩೪ ಸಾಲುಗಳಲ್ಲಿ ಕುಂತಳದೇಶದ ವರ್ಣನೆ, ಚಾಲುಕ್ಯವಂಶದ ವರ್ಣನೆ, ೫ನೆಯ ವಿಕ್ರಮಾದಿತ್ಯನವರೆಗೆ ವಂಶಾವಳಿ, ಈತನ ಮಹಾಮಾಂಡಲಿಕ ವೀರಪಾಂಡ್ಯದೇವ, ವಿಕ್ರಮಾದಿತ್ಯನ ತಂಗಿ ಮತ್ತು ಭಿಲ್ಲವರಾಯನ ಮಗಳಾದ ಸೋವಲದೇವಿ. ವಿಕ್ರಮಾದಿತ್ಯನ ಮಗಳು ಮಹಾದೇವಿ, ಈಕೆಯ ಮಗ ಬೊಪ್ಪದೇವ ಇವರ ವರ್ಣನೆಗಳು ಅವೆ. ೩೪ ರಿಂದ ೩೯ ನೆಯ ಸಾಲುಗಳ ವಿಷಯವು ಈ ರೀತಿಯದೆ:-

"ಸ್ವಸ್ತಿ ಶ್ರೀಮಚ್ಚಾಳುಕ್ಯಪ್ರತಾಪಚಕ್ರವರ್ತಿ ಜಗದೇಕಮಲ್ಲ ವರ್ಷದ ೧೧ನೆಯ ವಿಭವ ಸಂವತ್ಸರದ ಪುಷ್ಯ ಶು. ೧೩ ಶುಕ್ರವಾರ ಉತ್ತರಾಯಣ ಸಂಕ್ರಾಂತಿ ವ್ಯತಿಪಾತದಂದು ಶ್ರೀಮನ್ಮಹಾಮಂಡಳೇಶ್ವರಂ ಜಗದೇಕಮಲ್ಲ ವೀರಪಾಂಡ್ಯದೇವರ

ಮೂವಂ ವಿಕ್ರಮಾದಿತ್ಯದೇವರು ಶ್ರೀಮನ್ಮಹಾಗ್ರಹಾರಂ ಹೂವಿನಹಡಂಗಿಲೆಯ ಉತ್ತರದಿಶಾಭಾಗದಲು ಶ್ರೀ ತುಂಗಭದ್ರಾದೇವಿಯ ದಕ್ಷಿಣ ತಟದಲು ಶ್ರೀ ಸ್ವಯಂಭು ಕೋಟಿಶಂಕರದೇವರಂಗಭೋಗಕ್ಕೆ ಆ ದೇವಾಲಯದ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಂ ಆ ದೇವರಗ್ರಾಸನದ ಬ್ರಾಹ್ಮಣಭೋಜನಕ್ಕಂ ಆ ಕೊಟ್ಟಿಗನೂರ ಚತುರಾಗಾಡಾಸ್ಪದಮಪ್ಪ ಭೂಮಿಯೆಲ್ಲವಂ ತ್ರಿಭೋಗಾಭ್ಯಂತರಸರ್ವನಮಸ್ಯಮಾಗಿ ಧಾರಾಪೂರ್ವಕಂ ಮಾಡಿ ಬಿಟ್ಟರ್."

೩೯ ರಿಂದ ೫೬ ನೆಯ ಸಾಲುಗಳಲ್ಲಿ ೧ ನೆಯ ದಾನದ ವರ್ಣನೆ, ವಿನಿಯೋಗ ಮತ್ತು ಕೊಟ್ಟಿಗನೂರ ಚತುಃಸೀಮೆಗಳು ಹೇಳಲ್ಪಟ್ಟಿರುವುವು. ಇದರ ಕಾಲವು ಕ್ರಿ. ಶ. ೧೧೪೮ ನೆಯ ಡಿಶಂಬರ ೨೪ ನೆಯ ತಾರೀಖಿಗೆ ಸರಿಬೀಳುತ್ತದೆ. ಇದರಲ್ಲಿಯ ಪದ್ಯಗಳು ಬಹಳ ಚೆನ್ನಾಗಿವೆ. ಇದನ್ನು ರಚಿಸಿದವನು ವೀರಪಾಂಡ್ಯದೇವನ ಆಸ್ಥಾನ ಕವಿಯಾದ ಮಧುಸೂದನದೇವನು.

೫೬ ರಿಂದ ೬೨ ರ ವರೆಗಿನ ಸಾಲುಗಳಲ್ಲ ಹೂವಿನಹಡಗಲಿಯ ಮಹಾಜನರು ಸ್ವಯಂಭು ಕೋಟಿಶಂಕರದೇವರಿಗೆ ಜಗದೇಕಮಲ್ಲದೇವನ ಆಳಿಕೆಯ ೬ ನೆಯ ವರ್ಷದ ರುಧಿರೋದ್ಗಾರಿ ಸಂವತ್ಸರದ ಮಾಘ ಶು. ೫ ಸೋಮವಾರ ದಿವಸ ಕೊಟ್ಟ ದಾನದ ಉಲ್ಲೇಖವದೆ. ಇದರ ಕಾಲವು ಕ್ರಿ. ಶ. ೧೧೪೪, ಜನವರಿ ೧೧ ನೆಯ ತಾರೀಖು ಆಗುವುದು. ದಿವಸವು ಮಾತ್ರ ಶುಕ್ರವಾರವಾಗುತ್ತದೆ.

೬೨ ರಿಂದ ೬೪ ರ ವರೆಗಿನ ಸಾಲುಗಳಲ್ಲಿ ವಿಕ್ರಮಾದಿತ್ಯರಸರು ವಿರೋಧಿ ಸಂವತ್ಸರದ ಆಷಾಢ ಶು. ೮ ಸೋಮವಾರ ಆ ಸ್ಥಾನದ ಶ್ರೀ ವೀರಕೇಶವದೇವರ ನೈವೇದ್ಯಕ್ಕೆ ಕೊಟ್ಟ ದಾನದ ಉಲ್ಲೇಖವದೆ.

೬೪ ರಿಂದ ೬೮ ರ ವರೆಗಿನ ಸಾಲುಗಳಲ್ಲ ವಿಜಯಪಾಂಡ್ಯದೇವರು ಕೊಟ್ಟಿಗನೂರ ಶ್ರೀ ಸ್ವಯಂಭು ಕೋಟಿಶಂಕರದೇವರಿಗೆ ವಿಳಂಬಿ ಸಂವತ್ಸರದ ಶ್ರಾವಣ ಶು. ೧೧ ಶುಕ್ರವಾರ ದಿವಸ ಕೊಟ್ಟ ದಾನದ ಉಲ್ಲೇಖವದೆ.

ಈ ಶಾಸನದಲ್ಲ ಲಿಂಗಕ್ಕೆ ಕೋಟಿಶಂಕರದೇವರೆಂದು ಉಲ್ಲೇಖವಿರುವುದರಿಂದ ಈ ಎರಡೂ ಗ್ರಾಮಗಳು ಶಂಕರದಾಸಿಮಯ್ಯನಿಗೆ ಸಂಬಂಧಿಸಿದುವಲ್ಲವೆಂಬುದು ಸಹಜವು.

ಎರಡನೆಯ ಕಂದಗಲ್ಲು ವಿಜಾಪುರ ಜಿಲ್ಹೆ ಹುನಗುಂದ ತಾಲೂಕಿನಲ್ಲಿರುವ ಇಳಕಲ್ಲಿನಿಂದ ೧೨ ಮೈಲು ಅಂತರದಲ್ಲಿದೆ. ನವಿಲೆಯು ಅದರ ಉತ್ತರಕ್ಕೆ ೧೨ ಮೈಲುಗಳ ಮೇಲೆ ತಾಳೀಕೋಟೆಯ ದಕ್ಷಿಣಕ್ಕೆ ೨೨ ಮೈಲುಗಳ ಮೇಲೆ ಕೃಷ್ಣಾನದಿಯ ಪೂರ್ವ ದಂಡೆಯಲ್ಲಿರುವುದು. ಇದು ನಿಜಾಮುರಾಜ್ಯದ ರಾಯಚೂರ ಜಿಲ್ಹೆಯ ಲಿಂಗಸೂರ ತಾಲೂಕಿನ ಒಂದು ಸಣ್ಣ ಹಳ್ಳಿಯು. ಇಲ್ಲಿಯ ಶಂಕರನ ದೇವಾಲಯುವು ಬಿದ್ದುಹೋಗಿ ಗರ್ಭಗುಡಿಯ ಮಾತ್ರ ಉಳಿದಿರುವುದು. ದೇವಾಲಯುದ ಆವಾರದಲ್ಲಿ ಮೂರು ಶಿಲಾಶಾಸನಗಳಿರುವುವು. ಇವುಗಳ ವಿವರ:

# ನವಿಲೆಯ ಶ್ರೀ ಜಡೆಯ ಶಂಕರ ದೇವಾಲಯದಲ್ಲಿಯ ಶಿಲಾಶಾಸಾನಗಳು



ನಂ. ೧



ನಂ. ೨

**೧.** ಇದರಲ್ಲಿ ೨೬ ಸಾಲುಗಳು ಕಾಣುವಂತಿದ್ದು ಆರಂಭದಲ್ಲಿ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲನೆಂಬ ಬಿರುದುಳ್ಳ ೫ ನೆಯ ವಿಕ್ರಮಾದಿತ್ಯನ ವರ್ಣನೆಯುದೆ. ಮುಂದೆ ಇವನ ಕಾಲದಲ್ಲಿ ಇವನ ತಮ್ಮ ಜಯಸಿಂಹನು ಎಡದೊರೆಯಲ್ಲಿ ರಾಜ್ಯವಾಳುತ್ತಿದ್ದಾಗ ಬಿಟ್ಟ ದತ್ತಿಯ ವರ್ಣನೆಯುದೆ. ಈ ಶಾಸನದ ಮಹತ್ವದ ಭಾಗವು ಕೆಳಗಿನಂತೆ :

“ಪರಿಧಾವಿ ಸಂವತ್ಸರದ ಕಾರ್ತಿಕ ಬಹುಳ ೮ ಸೋಮವಾರದೊಳ್ **ತೀರ್ಥಸ್ಥಾನ ನವಿಲೆಯ ಜಡೆಯ ಶಂಕರದೇವರ** ದಕ್ಷಿಣ ಮೂಲೆಯೊಳ್ ಶಿವಸಮಾನರಾದ ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನ ಜಪತಪೋನುಷ್ಠಾನಪರಾಯಣ ಸಮಾಧಿಸಂಪನ್ನರಪ್ಪ..........**ನವಿಲೆಯ ಜಡೆಯ ಶಂಕರದೇವರ** ಸ್ಥಾನಪತಿ ಮಾಣಿಕ್ಯಚಳಾರರ್ಗೆ..............೬ ಗದ್ಯಾಣ ಹೊನ್ನ ಕೊಟ್ಟು ಸರ್ವಬಾಧಾಪರಿಹಾರಂ ಮಾಡಿ ಸರ್ವನಮಸ್ಯಮಾಗಿ..................ವೃತ್ತಿಯಾಗಿ ಆಚಂದ್ರಾರ್ಕತಾರಂ ಧಾರಾಪೂರ್ವಕಂ ಕೊಟ್ಟ ಕರಿಯ ನೆಲಂ ಮತ್ತಿರ್ಪತ್ತು ನಿವೇಶನವೊಂದು.” ಇದರಲ್ಲಿ ಹೇಳಿದ ಕಾಲವು ಕ್ರಿ. ಶ. ೧೧೧೨ ನೆಯ ನವಂಬರ ೧೦ ನೆಯ ತಾರೀಖು ಸೋಮವಾರಕ್ಕೆ ಸರಿಯಾಗುತ್ತದೆ.

**೨.** ಇದರಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ೪೫ ಸಾಲುಗಳಿವೆ. ಆದಿಯಲ್ಲಿ ಚಾಲುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲನೆಂದು ಬಿರುದುಳ್ಳ ಮೊದಲನೆಯ ಸೋಮೇಶ್ವರನ ಬಿರುದುಗಳಿವೆ. ನಂತರ ಸಾಲು ೫ ರಿಂದ ೨೮ ರ ವರೆಗೆ ಅಕ್ಷರಗಳು ಸ್ಪಷ್ಟವಾಗಿಲ್ಲ. ಸಾಲು ೨೩ - ೨೪ ರಲ್ಲಿ “**ಶ್ರೀ ಜಡೆಯ ಸಂಕರ ದೇವರ್ಗ್ಗೆ ನವಿಲೆಯ**” ಎಂಬ ಶಬ್ದಗಳಿವೆ. ಸಾಲು ೨೫ ರಿಂದ ೩೧ ರಲ್ಲಿ “.......ಸರದ್ವಿತಂ ಹಿಮವನ್ತ..........ಸೋಭನಮಂ....ವರೇಶ್ವರಂ ಕದಂಬಕಾಭರಣಂ.......ಛಲದಂಕರಾಮಂ...ಕದಂಬಂ ನವಿಲೆಯ ಪಾರ್ಥ ಮನ್ನೆಯ ಗೌಡ ತಾ ಶ್ರೀಮತ್ತ್ರೈಳೋಕ್ಯಮಲ್ಲದೇವರಮಲ್ಲ ಶ್ರೀಮನ್ಮಹಾಸಾಮನ್ತ ಮನ್ನೆಯ ನಾಗವರ್ಮ್ಮರಸರು” ಎಂದಿದೆ. ಮುಂದೆ “ಸಕ ವರ್ಷ ೯೮೮ ನೆಯ ಪರಾಭವ ಸಂವತ್ಸರದಆಷಾಢದಮಾವಾಶ್ಯಾದಿತ್ಯವಾರಂ ದಕ್ಷಿಣಾಯನ ಸಂಕ್ರಾನ್ತಿ ದಿನ ತ್ರಯದೊಳು ಕರಡಿಕಲ್ಲು ಸೂಜಬಳಿಯ **ಕ್ರಿಷ್ಣಾನದಿಯ ತಡಿಯ ತೀರ್ತ್ಥಂ ಶ್ರೀ ಜಡೆಯ ಸಂಕರ ದೇವರ್ಗ್ಗೆ ನವಿಲೆಯ** ಮನ್ನೆಯಮಂ **ಶ್ರೀ ಜಡೆಯ ಸಂಕರ ದೇವರ್ಗ್ಗೆ** ತಪೋಧನರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಸರ್ವ್ವಾಭ್ಯನ್ತರ ಸಿದ್ಧಿಯಿಂದಾಚಂದ್ರಾರ್ಕ್ಕತಾರಂಬರಂ ಸರ್ವ್ವನಮಸ್ಯಂ ಬಿಟ್ಟರು” ಎಂದಿದೆ. ಇದರೊಳಗಿನ ಕಾಲವು ಕ್ರಿ. ಶ. ೧೦೬೬, ಜೂನ ೨೫ ಆದಿತ್ಯವಾರಕ್ಕೆ ಸರಿಯಾಗುವುದು.

ಎರಡನೆಯ ಭಾಗವು ಈ ಶಿಲಾಶಾಸನದ ಒಂದು ಮಗ್ಗಲಿನ ಮೇಲಿದೆ. ಇದರಲ್ಲಿ ೪೨ ಸಾಲುಗಳಿವೆ. ಮೊದಲಿನ ೧೨ ಸಾಲುಗಳಲ್ಲಿ ಅಕ್ಷರಗಳು ಸ್ಪಷ್ಟವಾಗಿಲ್ಲ. ಇದರೊಳಗಿನ ಮಹತ್ವದ ಭಾಗವು “ಚಾಳೋಕ್ಯ ಚಕ್ರವರ್ತಿ ಭೂಲೋಕಮಲ್ಲನ

೩ನೆಯ ಕೀಲಕ ಸಂವತ್ಸರದ ಚೈತ್ರ ಶುದ್ಧ ಸೋಮವಾರ ಸಂಕ್ರಮಣದಂದು **ನವಿಲೆಯ ಜಡೆಯ ಶಂಕರ ದೇವಗ್ಗೆ**...............ಚಾಳುಕ್ಯ ಚಕ್ರವರ್ತಿ ಭೂಲೋಕಮಲ್ಲದೇವರು ಬಿಟ್ಟರು. ಇನ್ತೀ ಧರ್ಮವನಾರು ಪ್ರತಿಪಾಳಿಸುವರು" ಎಂದಿದೆ. ಇದರ ಕಾಲವು ಕ್ರಿ. ಶ. ೧೧೨೮, ಮಾರ್ಚ ತಿಂಗಳಿಗೆ ಸರಿಯಾಗುವುದು. ಸಂಕ್ರಮಣವು ಆ ತಿಂಗಳಲ್ಲಿ ೨೩ ನೆಯ ತಾರೀಖಿಗೆ ಬರುವುದು. ಆದರೆ ಅದು ಚೈತ್ರ ಶುದ್ಧ ಸೋಮವಾರ ಆಗುವುದಿಲ್ಲ.

**೩.** ಇದರಲ್ಲಿ ೨೭ ಸಾಲುಗಳಿದ್ದು ಎರಡು ಬೇರೆ ಬೇರೆ ಕಾಲಗಳಲ್ಲಿ ಕೊಟ್ಟ ದಾನಗಳನ್ನು ಇದು ವಿವರಿಸುತ್ತದೆ. ಆರಂಭದಲ್ಲಿ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲದೇವರ ಬಿರುದುಗಳಿವೆ. ಆಮೇಲೆ ಆತನ ಮಹಾಮಂಡಳೇಶ್ವರನಾದ ಬನವಾಸಿಯ ಕದಂಬವಂಶದ ಭೂತರಸನು "ತತ್ಪಾದಪದ್ಮೋಪಜೀವಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಂ ಬನವಾಸಿಪುರವರಾಧೀಶ್ವರಂ ಕದಂಬಂ ವಿದ್ವಿಷ್ಟಾರಿ ಸಂಹಾರಿ........ಭೀಮ ಕಲಿಯುಗರಾಮ ನವಿಲೆಯ ಪಾರ್ಥಂ ಅಸಹಾಯಸಮರ್ಥಂ ವಾಚಸ್ಪತಿ ಮನ್ನೆಯ ಗೌಡ ಅತಿಶಯ ಧವಳ ಅರಿಮನ್ನೆಯಗಿರಿವಜ್ರದಂಡ **ಶ್ರೀಮಜ್ಜಡೆಯ ಶಂಕರದೇವ**ಪದಾಬ್ಜಭೃಂಗಂ ಅಯ್ಯನ ಸಿಂಗ...........ವಾರಿಧಿ ಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾಮಂಡಳೇಶ್ವರ ಭೂತರಸರು" ಎಂದು ವರ್ಣಿಸಲ್ಪಟ್ಟಿದ್ದಾನೆ. ಈ ಶಾಸನದ ಮೊದಲನೆಯ ದಾನದ ಕಾಲ ಮತ್ತು ವರ್ಣನೆ: "ಸ್ವಸ್ತಿ ಶ್ರೀಮಚ್ಚಾಳೋಕ್ಯ ವಿಕ್ರಮ ವರ್ಷದ.........ನೆಯ ವಿಕಾರಿ ಸಂವತ್ಸರದ ಕಾರ್ತಿಕ ಪೌರ್ಣಮೆ ಬೃಹಸ್ಪತಿವಾರದಂದು **ನವಿಲೆಯ ಶ್ರೀಸ್ವಯಂಭು ಜಡೆಯ ಶಂಕರ ದೇವರ** ನಿಕೇತನಕ್ಕೆ ಸುವರ್ಣಕಳಶಮನೆತ್ತಿಸಿ ಆ ದಿವಸ ಕೃಷ್ಣಾನದಿಯ ತಟಿಯಲು ಶ್ರೀ ಪೂರ್ವದೇವರ ಪ್ರತಿಷ್ಠೆಯಂ ಮಾಡಿ ದೇವರಂಗಭೋಗಕ್ಕಂ....ಮಜ್ಜನಕ್ಕಂ ಕರಡಿಕಲ್ಲು ಸೂಱಬಾಡಂ ಮುತ್ತಗಿಯ ಮನ್ನೆಯುಮಂ ಹೊಱಗಣ ಕೊಳ್ಳಿ ಸಣಮಯದಾಯ ಸಹಿತವಾಗಿ ಕೊಟ್ಟರು."

ಇದರಲ್ಲಿ ಹೇಳಿದ ಕಾಲವು ಕ್ರಿ. ಶ. ೧೧೧೯, ಅಕ್ಟೋಬರ ೨೦ ಆಗುವುದು. ಆದರೆ ಕಾರ್ತಿಕ ಪೌರ್ಣಿಮೆಯು ಬೃಹಸ್ಪತಿವಾರದ ಬದಲು ಸೋಮವಾರ ದಿವಸ ಬರುವುದು. ಶಾಶನವನ್ನು ಕೆಲವು ವರ್ಷಗಳು ಗತಿಸಿದ ಮೇಲೆ ಬರೆದಿರುವುದರಿಂದ ಸಂವತ್ಸರದ ಹೆಸರನ್ನು ಸರಿಯಾಗಿ ಬರೆದಿರಲಿಕ್ಕಿಲ್ಲ. ವಿಕಾರಿಸಂವತ್ಸರದ ಬದಲು ವಿಳಂಬಿ ಸಂವತ್ಸರವೆಂದು ಗ್ರಹಿಸಿದರೆ ಈ ದಾನದ ಕಾಲವು ಕ್ರಿ. ಶ. ೧೧೧೮, ಅಕ್ಟೋಬರ ೩೧ ಬೃಹಸ್ಪತಿವಾರವಾಗುವುದು. ಆ ದಿವಸ ಕಾರ್ತಿಕ ಶುದ್ಧ ಪೌರ್ಣಿಮೆಯಿದೆ.

ಈ ಶಾಸನದ ಎರಡನೆಯ ದಾನವಿದ್ದ ಭಾಗದ ವಿವರ :

"ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಂ............... ....ಕೋಪಣ ಪ್ರತಾಳಸ ರೌದ್ರ ಪ್ರಿಥಿವಿಪಾಮನ ಶ್ರೀ ಶ್ರೀಮನ್ಮಹಾಮಂಡಳೇಶ್ವರ ಮೃಗಮದಾಮೋದನ ಅಖಿಳಭುವನಪ್ರಾಣಿನತ ಲಲಾಟಲೋಚನ........ಖೊದಿ

ಯಾದಿತ್ಯಂ ಸಕಳಜನಸ್ತುತ್ಯಂ ರಿಪು........ಕುಠಾರಂ ಜಿತಭಗಣರವಿ ಅತುಳವಿಕ್ರಮ ಧವಳಂ ನಿರಂಕುಶ ಯಮರಿಪುವ್ಮೃಗವಜ್ರಂ ವಿಮಳಕೀರ್ತಿಧ್ವಜಂ ಕ್ರಿಷ್ಣಾನದ್ಯುವ ಯತವಹಂ ಸಂಸಾರ ಸತಿ............ತಂಶಂ ನಿಜನಾಮಾಂಕಮಾಳಿಕಾದಿರಾಜಿತರಪ್ಪ ಶ್ರೀಮನ್ಮಹಾಮಂಡಳೇಶ್ವರ ಮಾಧವತ್ತಿಯರಸಂ ಶ್ರೀಮಚ್ಚಾಳುಕ್ಯಸರ್ವೋರ್ಜಿತ ಚಕ್ರವರ್ತಿ ಭೂಲೋಕಮಲ್ಲ ವರ್ಷದ ೧೦ ನೆಯ ರಾಕ್ಷಸ ಸಂವತ್ಸರದ ಚೈತ್ರ ಶುದ್ಧ ೫ ಬೃಹಸ್ಪತಿವಾರದಂದು ಪೂರ್ವದೇವರ ಸಮೀಪದಲು ಜಲಶಯನದೇವರ ಶ್ರೌತಿಕೆಯ ತಮಯ್ಯಂ ದಾರಿಯ ಬಡಗಲು ಮೂವತ್ತಾಱು ಗೇಣು ಮನೆಯಲು ಸತ್ರಕ್ಕೆ ಮತ್ತ ಮಾ ಸತ್ರಕ್ಕೆ ದುಬ್ಬಾಣದಿ........ತ್ತ ವಿಕಣಂಗೆ ಮತ್ತ............ಪುರದ............ಗೆ ಬಿಟ್ಟ ಕೆಯಿಂ ಬಡಗಲು ಜವುರದ ಹೊಲದ ಸೀಮೆಯಿಂ ಹಡ್ಯದಲು ನಿವಿಷ್ಟರ ಕೇಯೊ ಳಗಾಗಿ ನಿವಿಷ್ಟರ್ಗೆ ಬ್ರಾಹ್ಮಣರ್ಗೆ ಧಾರಾಪೂರ್ವಕಂ ಮಾಡಿ ಇಂತಿದಾರ್ಚಾರ್ಯ ಚಾಯಣ ಭಟ್ಟೋಪಾಧ್ಯಾಯರ್ಗೆ ಮತ್ತ೧೦ ಬಲದೇವ ನಾಯಕರ್ಗೆ ಮತ್ತ೪ ರೇವಣ ಭಟ್ಟರ್ಗೆ ಮತ್ತ....ಮಿ ಸ್ವಾಧ್ಯಾಯೋಪಾಧ್ಯಾಯರ್ಗೆ ಮತ್ತ ಸಾವಣಭಟ್ಟರ್ಗೆ ಮತ್ತ ಅನ್ತು ಮತ್ತರ್ ೬೪ ಬಿಟ್ಟರಿನ್ತೀ ಧರ್ಮ್ಮಮಂ ಕದಂಬವಂಶದರಸುಗಳ್ ಸ್ವಧರ್ಮದಿಂ ಪ್ರತಿಪಾಳಿಸಿದವರ್ಗೆ ವಾರಣಾಸಿ ಕುರುಕ್ಷೇತ್ರದೊಳ್ ಸಾಯಿರ ಕವಿಲೆಗಳ ಶೃಂಗಗಳಂ ಸುವರ್ಣದಿಂ ಕಟ್ಟಿಸಿ............ವೇದಪಾರಗರಪ್ಪ ಸಾಸಿರ್ವ ಬ್ರಾಹ್ಮಣರ್ಗೆ ಕೊಟ್ಟ ಫಳಮಕ್ಕು ಇನ್ತೀ ಧರ್ಮಮಂ ಕೆಡಪಿ ವಂಶದರಸು ತದ್ಧಾರಾನುಮಳಿದುದೇರಡೆ ಯೋಗಿಗಳಂ ಆ ಬ್ರಾಹ್ಮಣರುಮನಳಿದ ದೋಷಂ ಸಾಗ್ಗೆ || ಕ || ಬಾಱಂಕಾದಿಮ ಯಂಗೆ ಮತ್ತ೧........ಸಕಗೆ ಮತ್ತ ೧.

"ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ ವಸುನ್ಧರಾಂ | ಷಷ್ಟಿವರ್ಷಸಹ ಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ||"

ಇದರಲ್ಲಿ ಹೇಳಿದ ಕಾಲವು ಕ್ರಿ. ಶ. ೧೧೩೫, ಮಾರ್ಚ ೨೧ ಬೃಹಸ್ಪತಿವಾರಕ್ಕೆ ಸರಿಬೀಳುವುದು.

ಮೇಲಿನ ಮೂರೂ ಶಾಸನಗಳಲ್ಲಿ ಜಡೆಯ ಶಂಕರನ ಉಲ್ಲೇಖವಿದ್ದು ಲಿಂಗದ ತಲೆಯ ಮೇಲೆ ಹಿಂಭಾಗದ ಕಡೆಗೆ ಕೂದಲು ಹಿಕ್ಕಿದಂತೆ ಇರುವುದರಿಂದ ಈ ಲಿಂಗವು ಜಡೆಯ ಶಂಕರನೆಂದೂ ಈ ನವಿಲೆಯು ಶಂಕರದಾಸಿಮಯ್ಯನಿಗೆ ಸಂಬಂಧವಿದ್ದ ನವಿಲೆಯೆಂದೂ ಇದರ ಹತ್ತರವಿದ್ದ ಕಂದಗಲ್ಲು ಅವನ ಜನ್ಮಸ್ಥಾನವೆಂದೂ ನಿಶ್ಚಯಿಸಬಹುದು.

ಲಿಂಗಪೂಜೆಯು ಕೆಲವು ಶತಮಾನಗಳಿಂದ ಹಿಂದುಸ್ಥಾನದಲ್ಲಿ ವಿಶೇಷತಃ ಪ್ರಚಲಿತವಿರುವುದೆಂದು ಕಂಡು ಬಂದರೂ ಮೊದಲು ಅದು ಪೃಥ್ವಿಯ ಎಲ್ಲ ಭಾಗಗಳಲ್ಲಿ ರೂಢವಾಗಿತ್ತೆಂದು ಸಂಶೋಧಕರು ಗೊತ್ತು ಪಡಿಸಿರುವರು. ಲಿಂಗದ ಕಲ್ಪನೆಯ ವಿಷಯವಾಗಿ ಇವರಲ್ಲಿ ಭಿನ್ನಾಭಿಪ್ರಾಯಗಳಿದ್ದು ಇವುಗಳಿಗನುಸರಿಸಿ ಅದರ ರೂಪದಲ್ಲಿ ಸಹ ಭಿನ್ನತೆಯಿರುವುದು. ಅದು ಪರಮಾತ್ಮನ ಪ್ರತೀಕವೆಂದೇ

ಹೆಚ್ಚು ಜನರ ತಿಳುವಳಿಕೆಯಿರುವದು. ಲಿಂಗಕ್ಕೆ ಶಿವ, ವ್ಯೋಮಕೇಶ ಮುಂತಾದ ಹೆಸರುಗಳು ಇರುವುವು. ನವಿಲೆಯ ಜಡೆಯ ಶಂಕರಲಿಂಗದ ಸ್ವರೂಪವು ವ್ಯೋಮಕೇಶದ್ಯೋತಕವಾಗಿದೆ. ಈ ತರದ ಲಿಂಗವು ಬೇರೆ ಎಲ್ಲಿಯೂ ಇದ್ದಂತೆ ಕಂಡು ಬರುವುದಿಲ್ಲ. ಇದರ ಎರಡು ಚಿತ್ರಗಳು ಮುಂದಿನ ಪುಟದಲ್ಲಿ ಕೊಡಲ್ಪಟ್ಟಿರುತ್ತವೆ.

**ಮುದನೂರ** - ಈ ಗ್ರಾಮವು ತಾಳೀಕೋಟೆಯ ಈಶಾನ್ಯಕ್ಕೆ ೧೫ ಮೈಲುಗಳ ಮೇಲೆ ನಿಜಾಮ ರಾಜ್ಯದಲ್ಲಿರುವುದು. ಇದೇ ದೇವರದಾಸಿಮಯ್ಯನ ಸ್ಥಳವು.

**ಕಲ್ಯಾಣ** - ನಿಜಾಮ ರಾಜ್ಯದಲ್ಲಿ ಕಲಬುರ್ಗಿಯ ಉತ್ತರಕ್ಕೆ ಹುಮನಾಬಾದ ಪಟ್ಟಣದ ಮೇಲಿಂದ ೬೦ ಮೈಲು ಅಂತರದಲ್ಲಿದೆ. ಹರಿಹರನ ರಗಳೆಯಲ್ಲಿಯೂ ಈ ಕಾವ್ಯದಲ್ಲಿಯೂ ಶಂಕರದಾಸಿಮಯ್ಯನು ಜಯಸಿಂಹನ ಕಾಲಕ್ಕೆ ಈ ಪಟ್ಟಣಕ್ಕೆ ಹೋಗಿ ಪರವಾದಿಗಳನ್ನು ಜಯಿಸಿದನೆಂದು ವರ್ಣಿಸಲ್ಪಟ್ಟಿರುವುದು. ಈ ಜಯಸಿಂಹನು ಕ್ರಿ. ಶ. ೧೦೧೫ ರಿಂದ ೧೦೪೨ ರ ವರೆಗೆ ಆಳಿದ ೨ ನೆಯ ಜಯಸಿಂಹನೆಂದು ಈ ಮೊದಲೇ ಹೇಳಿದೆ.

**ಪೆಂಬೇರ** - ಇದು ಮೈಲಾರನ ಸ್ಥಾನವೆಂದು ಈ ಮೊದಲೇ ಹೇಳಿದೆ. ಆದರೆ ಈ ಸ್ಥಾನವು ಎಲ್ಲಿದೆಯೆಂಬುವುದೆಂಬದನ್ನು ಗೊತ್ತುಪಡಿಸಬೇಕಾಗಿದೆ. ಮೈಲಾರನಿಗೆ ಸ್ಥಾನಭೇದದಿಂದ ಬೇರೆ ಬೇರೆ ಹೆಸರುಗಳಿರುವುವು. ಪುಣೆ ಜಿಲ್ಹೆಯ ಜೇಜೂರಿ ಎಂಬ ಕ್ಷೇತ್ರದಲ್ಲಿ ಇವನ ಪ್ರಸಿದ್ಧ ದೇವಸ್ಥಾನವಿರುವುದು. ಅಲ್ಲಿ ಇವನಿಗೆ ಮಲ್ಹಾರಿ ಎಂದೆನ್ನುತ್ತಾರೆ. ಗೋಪಾಳ ಪಾಂಡುರಂಗ ಬೇಲಸರೆ ಎಂಬವರಿಂದ ಮರಾಠಿಯಲ್ಲಿ ಬರೆಯಲ್ಪಟ್ಟ "ಶ್ರೀ ಕ್ಷೇತ್ರ ಜೇಜೂರಿ ವರ್ಣನೆ"ಯಲ್ಲಿ ಮಾರ್ತಂಡ ಭೈರವನು (ಮಲ್ಹಾರಿಯು) ತನ್ನ ಹೆಂಡಂದಿರಾದ ಗಂಗಾ ಮತ್ತು ಮ್ಹಾಳಸಾ ಇವರ ಕೂಡ ಮಣ್ಣಿನ ಮೂರ್ತಿಗಳಲ್ಲಿ ಐಕ್ಯವಾದ ಸ್ಥಾನಕ್ಕೆ '**ಪ್ರೇಮಪುರ**' ಅಥವಾ '**ಮೈಲಾರ**' ಎಂಬ ಹೆಸರಿದ್ದು ಅದು ಕರ್ನಾಟಕದಲ್ಲಿದೆ ಎಂದು ಬರೆಯಲ್ಪಟ್ಟಿದೆ (ಪುಟ, ೩೪). ಮರಾಠಿ ಓವಿಯಲ್ಲಿರುವ '**ಮಲ್ಹಾರಿಮಹಾತ್ಮೆ**' ಎಂಬ ಚಿಕ್ಕ ಪುಸ್ತಕದ ೧೮ ನೆಯ ಅಧ್ಯಾಯದಲ್ಲಿ ಸಹ '**ಪ್ರೇಮಪುರ**' ಎಂಬ ಕ್ಷೇತ್ರದ ಉಲ್ಲೇಖವಿದೆ. '**ಪೆಂಬೇರ**' ಮತ್ತು ಹೊಸದಾಗಿ ದೊರೆತ ಈ ಕಾವ್ಯದ ಪ್ರತಿಯಲ್ಲಿರುವ '**ಪೆಂಬೂರ**' ಇವು '**ಪ್ರೇಮಪುರ**'ದ ಬೇರೆ ಬೇರೆ ರೂಪಗಳಿರಬಹುದು. '**ಮೈಲಾರ**' ಕ್ಷೇತ್ರವು ಬಳ್ಳಾರಿ ಜಿಲ್ಹೆಯ ಪಶ್ಚಿಮ ದಂಡೆಗೆ ಹರಪನಹಳ್ಳಿ ತಾಲೂಕಿನಲ್ಲಿದೆ. ಇದಕ್ಕೆ ಪ್ರೇಮಪುರವೆಂಬ ಹೆಸರು ಇದ್ದಂತೆ ಆಧಾರವಿಲ್ಲ. ಇಲ್ಲಿಯ ದೇವರ ಮೂರ್ತಿಯ ಮೇಲೆ ಕೊಡೆಯೂ ಇಲ್ಲ. 'ಮಲ್ಹಾರಿಮಹಾತ್ಮೆ'ಯಿಂದ ಸಹ 'ಪ್ರೇಮಪುರ' ಎಂಬುದು ಎಲ್ಲಿ ಅದೆಯೆಂಬುದು ಗೊತ್ತಾಗುವುದಿಲ್ಲ.

ಸಾತಾರೆ ಜಿಲ್ಹೆಯಲ್ಲಿ ಸಾತಾರೆ ಕರಾಡ ಮಾರ್ಗದ ಮೇಲೆ ಸಾತಾರೆಯಿಂದ ೧೬ ಮೈಲು ಅಂತರದ ಮೇಲೆ ತರಲಾನದಿಯ ಎರಡೂ ಮಗ್ಗಲು '**ಪಾಲ**' ಎಂಬ ಮಲ್ಹಾರಿಯ ಪ್ರಸಿದ್ಧ ಕ್ಷೇತ್ರವಿದೆ. ಈ ಗ್ರಾಮದ ನದಿಯ ಒಂದು ಮಗ್ಗಲಿನ ಭಾಗಕ್ಕೆ

## ನವಿಲೆಯ ತ್ರೀಜಡೆಯ ಶಂಕರಲಿಂಗ



ಮುಂದಣ ನೋಟ



ಒಂದು ಮಗ್ಗಲ ನೋಟ

**'ಹೆಂಬರ'** ಎಂಬ **ಹೆಸರಿದ್ದು** ಇಲ್ಲಿ ದೇವಸ್ಥಾನವಿದೆ. ಈ ಗುಡಿಯಲ್ಲಿ ಸ್ವಯಂಭುಲಿಂಗ ವಿದ್ದು ಅದರ ಮೇಲೆ **ಖಂಡೋಬಾ** (ಮೈಲಾರ) ಮತ್ತು **ಮ್ಹಾಳಸಾ** ಇವರ ಹಿತ್ತಾಳಿಯ ಮೂರ್ತಿಗಳು ಪೂಜೆಹೊಂದುತ್ತವೆ. ಇವುಗಳ ಹಿಂದೆ ಪ್ರಭಾವಳಿಯುದೆ. ಅದರ ಮೇಲೆ ಕೊಡೆಯುದೆ. ಪ್ರಭಾವಳಿಯೂ ಕೊಡೆಯೂ ಹಿತ್ತಾಳಿಯವು. **'ಹೆಂಬರ'** ಎಂಬ ಹೆಸರಿಗೆ ಬರೆಹದ ಆಧಾರಗಳಿಲ್ಲದಿದ್ದರೂ ಜನರಲ್ಲಿ ಈ ಹೆಸರು ರೂಢವಿರುವುದು. ಈ ಸಂಗತಿಗಳ ಮೇಲಿಂದ **ಕೊಡೆಯ ಮೈಲಾರನ** ಸ್ಥಾನವು ಇದೇ ಎಂದು ಅನುಮಾನಿಸಬಹುದು.

**ಉಜ್ಜಯಿನಿ** - ಇದು ಬಳ್ಳಾರಿ ಜಿಲ್ಲೆಯ ಕೂಡಲಗಿ ತಾಲೂಕಿನ ದಕ್ಷಿಣ ದಂಡೆಯ ಮೇಲಿರುವುದು. ಇಲ್ಲಿ ಲಿಂಗಾಯತ ಪಂಚಾಚಾರ್ಯರಲ್ಲೊಬ್ಬರಾದ **ಶ್ರೀ ಜಗದ್ಗುರು ಮರುಳಸಿದ್ಧೇಶ್ವರರ** ಪೀಠವಿದ್ದು ಇವರ ಸಲುವಾಗಿ ಆಗ್ಗೆ ಆ ಪ್ರಾಂತದಲ್ಲಿ ಆಳುತ್ತಿದ್ದ ಸಿಂದ ಬಿಜ್ಜಳನ ತಮ್ಮನಾದ ವಿಕ್ರಮಾದಿತ್ಯನು ಅಲ್ಲಿ ಒಂದು ಮಠವನ್ನು ಕಟ್ಟಿಸಿಕೊಟ್ಟನೆಂದು ತಿಳಿದು ಬರುತ್ತಿದೆ. ಅಲ್ಲಿಯ ಮರುಳ ಸಿದ್ಧೇಶ್ವರನ ದೇವಸ್ಥಾನದ ಒಂದು ಮಗ್ಗಲಿನಲ್ಲಿ ಪಾರ್ವತಿಯ ವಿಗ್ರಹವಿರುವುದು. ಈಕೆಗೇ ಮೊದಲು ಮಹಾಕಾಳಿಯೆಂದು ಕರೆಯುತ್ತಿರಬಹುದು.

## (೪) ಶಂಕರದಾಸಿಮಯ್ಯನ ಅನುಯಾಯಿಗಳು

"ದೇವ ಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ, ತಲೆದಂಡ, ತಲೆದಂಡ. ಕೂಡಲ ಸಂಗಮದೇವಾ, ಭಕ್ತರಲ್ಲಿ ಕುಲವನರಸಿದರೆ ನಿಮ್ಮ ರಾಣಿವಾಸದಾಣೆ"[೧]- ಬಸವಣ್ಣ.

ಲಿಂಗಾಯತರು ಯಾವ ಕಾಯಕವನ್ನನುಸರಿಸಿದರೂ ಅವರಲ್ಲ ಭೇದಭಾವ ವನ್ನೆಣಿಸಲಾಗದೆಂದು ಶಾಸ್ತ್ರವು ಹೇಳುತ್ತಿದ್ದರೂ ಮಠ ದೇವಸ್ಥಾನಗಳನ್ನು ಬಿಟ್ಟು ಬೇರೆ ಸ್ಥಳಗಳಲ್ಲಿ ಈ ನಿಯಮವು ಸಾಧಾರಣವಾಗಿ ಅನುಸರಿಸಲ್ಪಡುವುದಿಲ್ಲ. ಒಂದೊಂದು ಕಾಯಕದವರು ಒಂದೊಂದು ಪಂಗಡಗಳಾಗಿ ಅವುಗಳಲ್ಲ ಅನ್ನೋದಕ ಲಗ್ನ ವ್ಯವಹಾರಗಳು ನಡೆಯುತ್ತಿರುವುದಿಲ್ಲ. ಈ ಪಂಗಡಗಳ ಹಿರಿಯರು ಒಬ್ಬೊಬ್ಬರು ಆಗಿ ಹೋಗಿರುತ್ತಾರೆ. ಅವುಗಳಲ್ಲಿ ಬಣ್ಣಗಾರ(ನಾಗಲಿಕ)ರ ಪಂಗಡವು ಒಂದು. ಈ ಪಂಗಡದವರು ತಮ್ಮನ್ನು ನಾಗಲಿಕರೆಂದು ಕರೆದುಕೊಳ್ಳುತ್ತಿದ್ದರೂ ಈ ಶಬ್ದವು ಈ ಪುರಾಣದಲ್ಲಿ ಒಮ್ಮೊಮ್ಮೆ ಬಂದರೂ ಇದರ ಅರ್ಥವೇನೆಂಬುದು ತಿಳಿಯುವುದಿಲ್ಲ. ಇವರು ಶಂಕರದಾಸಿಮಯ್ಯನು ತಮ್ಮ ಹಿರಿಯ ಶರಣನೆಂದು ನೆನೆಯುತ್ತಾರೆ.

---

೧ ರಾ. ಬ. ಹಳಕಟ್ಟಿಯವರಿಂದ ಸಂಪಾದಿತ "ಬಸವೇಶ್ವರ ವಚನಗಳು" ೪ನೆಯ ಆವೃತ್ತಿ, ಪುಟ ೮೫.

ಎಷ್ಟೋ ಶಿವಶರಣರು ತಮ್ಮ ವಚನಗಳಿಗೆ ಒಂದು ಸ್ಥಾವರಲಿಂಗದ ಅಂಕಿತ ವನ್ನು ಉಪಯೋಗಿಸಿರುವರು. ಬಸವಣ್ಣನು ಸಹ ತನ್ನ ವಚನಗಳನ್ನು ಕೂಡಲ ಸಂಗಮದೇವನ ಅಂಕಿತದಿಂದ ಹೇಳಿರುವನು. ಶಂಕರದಾಸಿಮಯ್ಯನು ಘನಗುರು ಶಿವಲಿಂಗ ರಾಮನಾಥನ ಅಂಕಿತದಿಂದ ವಚನವನ್ನು ಹೇಳಿದ ಹಾಗೆ ಈ ಮೊದಲೇ ವಿವರಿಸಿರುತ್ತದೆ. ನವಿಲೆಯ ಜಡೆಯ ಶಂಕರನು ಈತನ ಇಷ್ಟದೇವತೆಯಾಗಿದ್ದರೂ ಇವನು ಬೇರೆ ಅಂಕಿತದಿಂದ ಏಕೆ ವಚನವನ್ನು ಹೇಳಿದನು ತಿಳಿಯದು. ಅದು ಏನೇ ಇರಲಿ, ಇವನು ನವಿಲೆಯ ಜಡೆಯ ಶಂಕರನನ್ನು ತನ್ನ ಇಷ್ಟದೇವತೆಯನ್ನಾಗಿ ಮಾಡಿಕೊಂಡಿದ್ದನೆಂಬುದು ನಿಶ್ಚಯ. ಲಿಂಗಾಯತರು ತಾವು ಮೈ ಮೇಲೆ ಧರಿಸಿ ರುವ ಇಷ್ಟಲಿಂಗವನ್ನು ಹೊರ್ತುಪಡಿಸಿ ಗುಡಿಗಳಲ್ಲಿರುವ ಸ್ಥಾವರಲಿಂಗಗಳ ಸಹಿತ ಎರಡನೇ ಯಾವ ದೇವರನ್ನು ಪೂಜಿಸಬಾರದೆಂಬ ನಿಯಮವಿದ್ದರೂ, ಈ ನಿಯಮವು ಸಹ, ಕಾಯಕಭೇದದಿಂದ ಲಿಂಗಾಯತರಲ್ಲಿ ಭೇದವನ್ನೆಣಿಸಬಾರದೆಂಬ ನಿಯಮ ದಂತೆ ವಾಡಿಕೆಯಾಗಿ ಪ್ರಚಾರದಲ್ಲಿಲ್ಲ. ನಾಗಲಿಕ ಪಂಗಡವು ಶಂಕರದಾಸಿಮಯ್ಯನನ್ನು ತಮ್ಮ ಹಿರಿಯ ಶರಣನೆಂದು ನೆನೆಯುವಂತೆ ಶಂಕರಲಿಂಗನನ್ನು ತಮ್ಮ ಕುಲದೇವರ ನ್ನಾಗಿ ಮಾಡಿಕೊಂಡಿರುತ್ತಾರೆ. ಈ ಪಂಗಡದವರು ವಿಶೇಷವಾಗಿರುವ ಸ್ಥಳಗಳಲ್ಲಿ ಇವರು ಸ್ವತಂತ್ರವಾಗಿ ಶಂಕರಲಿಂಗನನ್ನು ಗುಡಿಗಳಲ್ಲಿ ಪೂಜಿಸುವುದೇ ಇದಕ್ಕೆ ಸಾಕ್ಷಿ.

ಈ ಪಂಗಡದವರ ಕಾಯಕದ ವಿಷಯವಾಗಿ ಇಲ್ಲಿ ಹೆಚ್ಚು ಪ್ರಸ್ತಾಪಿಸುವುದು ಅವಶ್ಯವದೆ. ಇವರಲ್ಲಿ ಕೆಲವರು ವ್ಯಾಪಾರ ಮುಂತಾದ ಬೇರೆ ಹೋರೆಗಳನ್ನು ಮಾಡು ತ್ತಿದ್ದರೂ ಕೆಲವು ವರ್ಷಗಳ ಹಿಂದೆ ಇವರು ಮುಖ್ಯವಾಗಿ ನೂಲುರೇಶಿಮೆಗಳಿಗೆ ಬಣ್ಣ ಹಾಕುವ ಹೋರೆಯನ್ನು ಮಾಡುತ್ತಿದ್ದುದರಿಂದ ಇವರಿಗೆ ಬಣ್ಣಗಾರರೆಂದು ಕರೆಯು ತ್ತಿದ್ದರೆಂದು ನಿಸ್ಸಂಶಯವಾಗಿ ಹೇಳಬಹುದು. ಇವರ ಸಾಂಪ್ರದಾಯದ ಮೂಲಪು ರುಷನಾದ ಶಂಕರದಾಸಿಮಯ್ಯನಿಗೆ ಹರಿಹರನು ತನ್ನ ರಗಳೆಯಲ್ಲಿ ಯಾವ ಕಾಯಕ ವನ್ನು ಹೇಳಿಲ್ಲ. ತೆಲುಗು ಮತ್ತು ಕನ್ನಡ ಬಸವಪುರಾಣಗಳಲ್ಲಿ ಇವನು ಕವುದಿಯನ್ನು ಹೊಲಿಯುವ ಕಾಯಕವನ್ನು ಮಾಡುತ್ತಿದ್ದನೆಂದು ಹೇಳಿದೆ. ಪ್ರಸ್ತುತ ಪುರಾಣದಲ್ಲಿ ಶಂಕರದಾಸಿಮಯ್ಯನು ದೀಕ್ಷೆಯಾದ ಮೇಲೆ ತನಗೊಂದು ಕಾಯಕವ ನಿರೂಪಿಸ ಬೇಕೆಂದು ಗುರುವಾಗಿ ಬಂದ ಜಡೆಯ ಶಂಕರನನ್ನು ಕೇಳಿದನೆಂದೂ ಅವನು ಸೂಜಿಯ ಕಾಯಕವ ಕೈಕೊಳ್ಳೆಂದು ಅನುಗ್ರಹಿಸಿದನೆಂದೂ ಕವಿಯು ಹೇಳಿ ಈ ಕಾಯ ಕವೇ ಯೋಗ್ಯವೆಂದು ಸಮರ್ಥಿಸುವುದಕ್ಕೆ ಸಾಕ್ಷಾತ್ ಶಿವನೇ ಈ ಕಾಯಕವನ್ನು ಮಾಡಿದನೆಂದು ಒಂದು ಪೌರಾಣಿಕ ಕಥೆಯನ್ನು ಸಹ ವಿಸ್ತಾರವಾಗಿ ಬಣ್ಣಿಸಿರುವನು. ಇತ್ತಿತ್ತ ಈ ಪಂಗಡದವರು ಬೇರೆ ಬೇರೆ ಉದ್ಯೋಗಗಳನ್ನು ಮಾಡುತ್ತಿದ್ದರೂ ಮೊತ್ತ ಮೊದಲು ಇವರು ಸೂಜಿಯ ಕಾಯಕವನ್ನು ಮಾಡುತ್ತಿದ್ದರೆಂಬುದಕ್ಕೆ ಕೆಲವು ಆಧಾರಗಳು ದೊರೆಯುತ್ತವೆ. ಹಳ್ಳಿಪಳ್ಳಿಗಳಲ್ಲಿ ಈ ಕಾಯಕವನ್ನು ಮಾಡುವ

ಬಣ್ಣಗಾರರು ಅಲ್ಲಲ್ಲಿ ಇನ್ನೂ ದೊರೆಯುತ್ತಾರೆ. ಸಿಂಪಿಗ ಎಂಬ ಅಡ್ಡ ಹೆಸರಿನ ಕೆಲವು ಮನೆತನಗಳು ಇವರಲ್ಲಿ ಇರುವುದುಂಟು. ಎಲ್ಲಕ್ಕೂ ಹೆಚ್ಚು ಬಲವತ್ತರವಾದ ಸಾಕ್ಷಿ ಯಾವುದೆಂದರೆ, ಈ ಜನರ ಮದುವೆಯಲ್ಲಿ ಮದುಮಗನ ಕೆಯ್ಯಲ್ಲಿ ಅವನು ಮಾಡ ತಕ್ಕ ಉದ್ಯೋಗದ್ಯೋತಕವಾದ ಕತ್ತರಿ ಮತ್ತು ಗಜಕಟ್ಟೆಗೆಗಳನ್ನು ಕೊಡುವ ಪರಿ ಪಾಠವು ಕೆಲವು ವರ್ಷಗಳ ಹಿಂದೆ ಸಾಮಾನ್ಯವಾಗಿತ್ತು. ನನ್ನ ಮದುವೆಯಲ್ಲಿ ಸಹ ಇವುಗಳನ್ನು ನನ್ನ ಕೆಯ್ಯಲ್ಲ ಕೊಟ್ಟದ್ದು ನೆನಪಿಗೆ ಬರುತ್ತದೆ. ಈಗ್ಗೂ ಸಹ ಈ ಪರಿಪಾಠವು ಪೂರ್ಣವಾಗಿ ನಿಂತಿಲ್ಲ.

ಇಲ್ಲಿ ಕೆಲವು ಸಂಶಯಗಳು ತಲೆದೋರುವುವು. ಲಿಂಗಾಯತರಲ್ಲಿ ಶಿವಸಿಂಪಿಗ ಎಂಬ ಪಂಗಡವೊಂದು ಇರುವುದು. ಈ ಪಂಗಡದವರು ಈಗ್ಗೆ ಮುಖ್ಯವಾಗಿ ವ್ಯಾಪಾರ ಮಾಡುತ್ತಿದ್ದರೂ ಮೊದಲು ಇವರ ಕಾಯಕವು ಮುಖ್ಯವಾಗಿ ಹೊಲಿಗೆ ಇತ್ತೆಂದು ತಿಳಿದುಬರುತ್ತದೆ. ಇವರ ಮದುವೆಗಳಲ್ಲಿ ಸಹ ಮದುಮಕ್ಕಳ ಕೆಯ್ಯಲ್ಲಿ ಕತ್ತರಿ ಗಜಕಟ್ಟೆಗೆಗಳನ್ನು ಕೊಡುವ ಪರಿಪಾಠವು ಮೊದಲು ಸಾಮಾನ್ಯವಾಗಿದ್ದು ಈಗ್ಗೆ ಕೆಲಕೆಲವರಲ್ಲಿ ಅದು ಉಳಿದಿರುವುದು. ಇವರ ಹಿರಿಯಶರಣನು ಯಾರು? ಅವನ ಸ್ಥಳವು ಯಾವುದು? ಅವನಿಗೆ ಇಷ್ಟದೇವತೆ ಇದ್ದರೆ ಅದು ಆವುದು? ಶಿವದಾಸಿಮಯ್ಯನು ತಮ್ಮ ಹಿರಿಯ ಶರಣನೆಂದು ಈ ಪಂಗಡದವರು ಹೇಳುವರು. **"ಶಿವಾತ್ರಗಣೇಶ ಪುರಾಣ"** ಎಂಬ ಗ್ರಂಥವು ೧೯೨೭ ಮತ್ತು ೧೯೨೮ ನೆಯ ಇಸ್ವಿಗಳಲ್ಲಿ ಎರಡು ಭಾಗಗಳಾಗಿ ಪ್ರಸಿದ್ಧಿಸಲ್ಪಟ್ಟಿರುತ್ತದೆ. ಇದರ ಒಂದನೆಯ ಭಾಗವು ಪದ್ಯರೂಪವಾಗಿಯೂ ಎರಡನೆಯದು ಗದ್ಯರೂಪವಾಗಿಯೂ ಇರುವುದು. ಇದರ ಒಟ್ಟು ಪುಟಗಳು ೬೦೪. ಇದರ ಕರ್ತನು ಹಂಪೆಯ ಚನ್ನಬಸವನೆಂಬ ವನು (ಸಂಧಿ ೨, ಪದ್ಯ ೫೧). ಹೊಸಹುಬ್ಬಳ್ಳಿಯನ್ನು ಬಸವಪ್ಪಶೆಟ್ಟಿಯೆಂಬವನು ಕಟ್ಟಿಸಿದ ಸಂಗತಿಯು ಈ ಗ್ರಂಥದಲ್ಲಿರುವುದು. ಈ ಪಟ್ಟಣವು ಶಾ. ಶ. ೧೧೪೮ (ಕ್ರಿ. ಶ. ೧೨೨೬) ರಲ್ಲಿ ನಿರ್ಮಿತವಾಯಿತೆಂದು ಈ ಗ್ರಂಥದಲ್ಲಿ (ಸಂ. ೨, ಪ. ೪೩) ಹೇಳ ಲ್ಪಟ್ಟಿದ್ದರೂ ಇದರ ನಿರ್ಮಾಣಕಾಲವು ನಿಜವಾಗಿ ಕ್ರಿ. ಶ. ೧೭೨೭ನೆಯ ವರ್ಷವೆಂದು ಧಾರವಾಡ ಗ್ಯಾಝಿಟಿಯರ (ಪುಟ ೭೨೯) ದಿಂದ ಕಂಡು ಬರುತ್ತದೆ. ಇಡೀ ಪುರಾಣವು ಪದ್ಯದಲ್ಲಿರುವ ಕೈಬರಹದ ಎರಡು ಪ್ರತಿಗಳು ಇತ್ತೀಚೆಗೆ ನನಗೆ ನೋಡಲಿಕ್ಕೆ ದೊರೆ ತುವು. ಒಂದು ಸಾಂಗಲೀ ಸಂಸ್ಥಾನದ ರಬಕವಿ ಗ್ರಾಮದ ಶ್ರೀಮಾನ್ ಮಲಕಪ್ಪಾ ಚನಬಸಪ್ಪಾ ಸವದಿ ಇವರಲ್ಲಿದ್ದದ್ದು, ಇನ್ನೊಂದು ಬೆಳಗಾಂವಿ ಜಿಲ್ಹೆಯ ಯಮ ಕನಮರಡಿ ಗ್ರಾಮದ ಶ್ರೀಮಾನ್ ಈಶ್ವರಪ್ಪಾ ದುಂಡಪ್ಪಾ ಹಲಗತ್ತಿ ಇವರಲ್ಲಿದ್ದದ್ದು. ಈ ಪ್ರತಿಗಳಲ್ಲಿ ಒಟ್ಟು ೫೭ ಸಂಧಿಗಳೂ ೩೫೩೪ ಪದ್ಯಗಳೂ ಇರುವುವು. ೫೭ ನೆಯ ಸಂಧಿಯ ೮೨ ನೆಯ ಪದ್ಯದಲ್ಲಿ ಈ ಪುರಾಣವು ಶಾಲಿವಾಹನ ಶಕ ೧೭೪೮ ವೈಶಾಖ ಶು. ೧೫ ನೆಯ ದಿವಸ ಪೂರ್ಣಮಾದುದೆಂದು ಹೇಳಿರುವುದರಿಂದ ಇದರ ಕಾಲವು ಕ್ರಿ. ಶ. ೧೮೨೬ನೆಯ ವರ್ಷವು.

ಇದರಲ್ಲಿ ಪೌರಾಣಿಕ ಕಥೆಗಳು ತುಂಬಿದ್ದು ಇತಿಹಾಸದ ಅಂಶಗಳು ಬಹಳ ತುಸು ಇರುವುವು. ಸಿಂಪಿಗರ ಮೂಲಪುರುಷರ ವಿಷಯವಾಗಿ ಇದರಲ್ಲಿ ಹೇಳಿರುವುದೇನೆಂದರೆ:- ನಂದೀಶ ಮುಖ ಪ್ರಮಥರು ಬಸವ ಮೊದಲಾದವರಾಗಿ ಭೂಲೋಕದಲ್ಲಿ ಜನಿಸಿ ಕಲ್ಯಾಣದಲ್ಲ ತಮ್ಮ ಪ್ರಭಾವವನ್ನು ಮೆರೆಯಿಸುವ ಕಾಲದಲ್ಲಿ ಶಿವಾತ್ರಿ ಮತ್ತು ಅತ್ರಿ ಎಂಬ ಗಣಶ್ರೇಷ್ಠರು ಶಿತ ನಾಗಲೀಕ ಮತ್ತು ರಕ್ತ ನಾಗಲೀಕ ಎಂಬ ಹೆಸರಿನಿಂದ ಜನಿಸಿ ಸೂಜಿಯ ಕಾಯಕವನ್ನವಲಂಬಿಸಿ ಪ್ರಸಿದ್ಧಿ ಪಡೆದರು. ಶಿತ ನಾಗಲೀಕನೇ ಶಿವದಾಸಿಮಾರ್ಯನು ರಕ್ತ ನಾಗಲೀಕನೇ ಶಂಕರದಾಸಿಮಯ್ಯನು (ಸಂ. ೧೪, ಪ. ೯). ಶಿವದಾಸಿಮಾರ್ಯನೆಂಬ ಬೇರೊಬ್ಬ ಪುರುಷನಿದ್ದ ಬಗ್ಗೆ ಐತಿಹಾಸಿಕ ಆಧಾರಗಳಿಲ್ಲ. ಇಷ್ಟೇ ಅಲ್ಲ, ಭೀಮಕವಿಯು ತನ್ನ ಬಸವಪುರಾಣದಲ್ಲಿ ಶಂಕರದಾಸಿಮಯ್ಯನಿಗೇ ಶಿವದಾಸಿಮಯ್ಯನೆಂದು ಸಂಬೋಧಿಸಿದ್ದಾನೆ (ಸಂಧಿ ೨೩, ಪದ್ಯ ೨೯). ನನ್ನ ಅಭಿಪ್ರಾಯವೇನೆಂದರೆ:- ಬಣ್ಣಗಾರರು ಮತ್ತು ಶಿವಸಿಂಪಿಗರು ಆರಂಭದಲ್ಲಿ ಒಂದೇ ಪಂಗಡದವರಿದ್ದು ಹೊಲಿಗೆಯ ಕಾಯಕವನ್ನು ಅವಲಂಬಿಸಿದ್ದರು. ಇವರಿಬ್ಬರ ಆದ್ಯ ಶರಣನು ಶಂಕರದಾಸಿಮಯ್ಯನು. ಕಾಲಾಂತರದಲ್ಲಿ ಬಣ್ಣದ ಕಾಯಕವು ಹೆಚ್ಚು ಲಾಭದಾಯಕವಾದ ಮೇಲೆ ಬಣ್ಣಗಾರರಲ್ಲಿ ಕೆಲವರು ಈ ಕಾಯಕ ಮಾಡತೊಡಗಿದರು. ಅಂದಿನಿಂದ ಈಗಿನ ಎರಡು ಪಂಗಡಗಳಾಗಿರಬೇಕು.

ಬಣ್ಣಗಾರರು ಶಂಕರದಾಸಿಮಯ್ಯನನ್ನೇ ಮನ್ನಿಸುತ್ತ ಬಂದರು. ಶಿವಸಿಂಪಿಗರು ಶಿವದಾಸಿಮಯ್ಯನೆಂಬವನನ್ನು ಕಲ್ಪಿಸಿಕೊಂಡರು. ಲಿಂಗಾಯತರಲ್ಲಿ ಈಗ್ಗೆ ಈ ಎರಡು ಪಂಗಡಗಳು ಕಂಡು ಬಂದರೂ ಈ ಪಂಗಡದವರ ಆಚಾರವಿಚಾರಗಳಲ್ಲಿ ಏನೂ ಭೇದವಿಲ್ಲೆಂಬುವುದು ಇವರಿಬ್ಬರೂ ಮೂಲದಲ್ಲಿ ಒಂದೇ ಪಂಗಡದವರಿರಬೇಕೆಂಬ ಅನುಮಾನವನ್ನು ಸ್ಥಿರಪಡಿಸುತ್ತದೆ. ಈಗಿನ ಕಾಲದಲ್ಲಿ ಎಲ್ಲ ಪಂಗಡದವರು ಒಬ್ಬರಗೂಡೊಬ್ಬರು ಭೇದಭಾವವಿಲ್ಲದೆ ನಡಕೊಳ್ಳಬೇಕೆಂಬ ಭಾವನೆಯು ಬೆಳೆಯುತ್ತಿರುವಾಗ ಈ ಎರಡೂ ಪಂಗಡದವರು ಕೂಡಲೆ ಒಂದಾಗಲಿಕ್ಕೆ ಯಾವ ಆತಂಕವೂ ಇಲ್ಲ.

ಧಾರವಾಡ, ೨೮ ಮಾರ್ಚ ೧೯೪೧
(ಶಾ|| ಶ|| ೧೮೬೩, ವಿಷುಸಂವತ್ಸರ, ಚೈತ್ರ ಶುದ್ಧ ೧)



# ಒ ಪ್ಪೋ ಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೧ | ೨೦ | ಗ್ರಹಸ್ಥರ | ಗೃಹಸ್ಥರ |
| ೨೨ | ೧,೨ | ಳಿನಿಬರಂ | ಳನಿಬರಂ |
| ೨೨ | ೩ | ಯಿನಿಬರಂ | ಯಾನಿಬರಂ |
| ೬೭ | ೧ | ಭಾಳನೇತ್ರದ | ಭಾಳನೇತ್ರನ |
| ೧೧೬ | ೩೦ | ಶೇಷಾನ | ಶೇಷಾನ್ನ |
| ೧೨೭ | ೧೪ | ಘಟಯೆ | ಘಟಿಯೆ |
| ೧೮೫ | ೯ | ಕೊಲ್ಲುವುದುಃ ವುಂಟೆ | ಕೊಲ್ಲುವುದುಂಟೆ |
| ೧೮೮ | ೧೪ | ಬೆಚ್ಚ ವಾಕ್ಷಣ | ಬೆಚ್ಚ ರಾಕ್ಷಣ |
| ೧೯೧ | ೨೪ | ಆದರಿಸಿ | ಆದರಿಸೆ |
| ೨೧೦ | ೨೫ | ಭೂಸಾರರು | ಭೂಸುರರು |
| ೨೩೮ | ೧ | ಶಂಕರದಾಸಿ- | ಶಂಕರ ದಾಸಿ- |
| ೨೩೯ | ೩೦ | ರಕ್ಷೆಯಂ | ಕಕ್ಷೆಯಂ |



ಶಂಕರದಾಸಿಮಯ್ಯನು ತನ್ನ ಹೆಂಡತಿಗೆ ಲಿಂಗದೀಕ್ಷೆ ಮಾಡುವುದು
(ಸಂಧಿ ೪, ಪದ್ಯ ೧೫)

॥ ಶ್ರೀ ಶಂಕರಲಿಂಗಾಯ ನಮಃ ॥

# ಶಂಕರದಾಸಿಮಯ್ಯನ ಪುರಾಣ

## ಭಾಮಿನಿ ಷಟ್ಪದಿ

## ೧ ನೆಯ ಸಂಧಿ

## ಗೋವಿಂದಭಟ್ಟನ ಜನನ

**ಸೂಚನೆ**

ಆದಿಪರಶಿವಮೂರ್ತಿ ತನ್ನ ವಿ ।
ನೋದದಿಂದವತರಿಸಿ ಮರ್ತ್ಯದಿ ।
ಸಾದರದಿ ಮೆರೆದುದನು ಲಾಲಿಸಿ ಭಕ್ತಜನಸ್ತೋಮ ॥

ಶ್ರೀಮದಗಜಾನಯನಕೈರವ ।
ಸೋಮನಚ್ಯುತನಮರಭರ್ತೃಪಿ ।
ತಾಮಹಾದಿಸುಪರ್ವಸಂಕುಳನಮಿತಪಾದಾಬ್ಜ ॥
ಭೂಮಿ ಕೀಲಾಲಾಗ್ನಿ ಪವನಂ ।
ವ್ಯೋಮವಾದಿತ್ಯೇಂದುರಾತ್ಮೋ ।
ದ್ದಾಮನುನ್ನತರೌಪ್ಯಗಿರಿಸದನಂ ಕೃಪಾವದನಂ ॥ ೧ ॥

ಗೀರ್ವಾ[೧]ಕಮಲಾದಿತ್ಯನಸುರರ ।
ಗರ್ವವನದಾವಾಗ್ನಿ ಭವರುಜೆ ।
ಯುರ್ವಿಧರಕುಲಿಶೋನ್ನತಂ ಪಾಪಾಭ್ರಪವಮಾನಂ ॥
ಶರ್ವನಂಗಜಮದಭಯಂಕರ ।
ಪಾರ್ವತೀಪತಿ ಶಂಕರಂ ಶ್ರೀ ।
ಪರ್ವತಾಧಿಪ ಮಲ್ಲಿಕಾರ್ಜುನದೇವ ಶರಣಾಗು ॥ ೨ ॥

---

೧ ನಿರ್ವಿ (ಉ.)

ಪೊಡವಿ ಮೊದಲಾದಖಿಳ ಲೋಕವ |
ಪಡೆವನೆವೆಯಿಡುವನಿತರೊಳು ತತ್ |
ಪೊಡವಿಮುಖ್ಯಮಹಾಜಗಂಗಳ ನಿಮಿಷಮಾತ್ರದೊಳು ||
ಕೆಡಿಸುವಂ ಭುವನಂಗಳಂ ತ |
ನ್ನೊಡಲೊಳಗೆ ಬೈಚಿಟ್ಟು ರಕ್ಷಿಪ |
ಮೃಡನೊಲಿದು ನಮಗೀಗೆ ನಮ್ಮಿಷ್ಟಾರ್ಥ ಸಿದ್ಧಿಯನು || ३ ||

ಮೃಡನ ಸಭೆಗೈತಂದು ದೇವಂ |
ಗೆಡದ ಕೈಯಂ ತೋರೆ[೧] ಪಾರ್ವತಿ |
ಕಡು ಮುಳಿದು ಬಿಸುಡೆನ್ನ ಶಕ್ತಿಯನೆಂದು ಮೂದಲಿಸೆ ||
ಒಡಲೊಳೊಂದಿದ ರಕ್ತ ಮಾಂಸವ |
ಕೆಡಹಿ ಬಿಸುಟು ವಿವೇಕದಿಂ ಮೂ |
ರಡಿಯ ಪಡೆದ ಮಹಾಮಹಿಮ ಭೃಂಗೀಶ ಶರಣಾಗು || ४ ||

ತಾರಕಾಸುರಮಥನ ಶಿವನ ಕು |
ಮಾರ ಶಿಖಿವಾಹನನು ಶಿವಪದ[೨] |
ವಾರಿಜಕ್ಕಾರಡಿಯೆನಿಪ ನಿರ್ಜರಸಮೂಹಾಂಕ ||
ಕಾರಣೋದ್ಭವ ಶಕ್ತಿಧರನೋಂ |
ಕಾರ ವೃತ್ತಿನ್ಯಾಸಕೋವಿದ |
ವೈರಿದನುಜಸುಭಂಗ ಷಣ್ಮುಖನೀಗೆ ನಮ್ಮಿಷ್ಟ || ೫ ||

ದಕ್ಷಮುಖಮರ್ದನ ಸುರೇಂದ್ರಾ |
ಬ್ಜಾಕ್ಷಚತುರಾನನಭಯಂಕರ |
ಯಕ್ಷಗಂಧರ್ವಾದಿ ಗೀರ್ವಾಣಾರ್ಚಿತಾಂಘ್ರಿಯುಗ ||
ರಾಕ್ಷಸಾರ್ಣವವಡಬ ಶಂಭುವಿ |
ನಕ್ಷಿಜಾತಂ ಪುರಹರಂ ಭಾ |
ಳಾಕ್ಷ ವೀರೇಶಂಗೆ ಭವನಾಶಂಗೆ ವಂದಿಸುವೆ || ೬ ||

ಪರಶಿವನ ಧರ್ಮಕಲೆಯೇ ವಿ |
ಸ್ತರಮಹತ್ವದ ದೇಹಮಾಗವ |
ತರಿಸಿ ರಾಜಗಣಾಭಿಪತ್ಯಮನಾಂತುಮಿಾಶ್ವರನ ||
ಚರಿತಕಾಸ್ಪದವಾಗಿ ಜಗಮಂ |
ಪೊರೆವ ಪಾಪಾರಾತಿ ವೃಷಭೇ |
ಶ್ವರನೊಲಿದು ನಮಗೀಗೆ ಮನದಿಷ್ಟಾರ್ಥದೇಳ್ಗೆಯನು || ೭ ||

೧ ಮುಗಿಯೆ (ಇ.) ೨ ಸುಮೂಕುಚ (ಅ, ಉ.)

ರೇವಣಾಸಿದ್ಧಂಗೆ ಭವವನ |
ದಾವನೆನಿಸುವ ಮರುಳುಸಿದ್ಧಗೆ |
ಯಾವರಣಪ್ರಜ್ಞಾತ್ಮನಾದೇಕಾಂತರಾಮಂಗೆ ||
ಪಾವಕಾಕ್ಷಾನುಮತವಹ ವಿ |
ದ್ಯಾವಿಶೇಷಣ ವೇದಶಾಸ್ತ್ರಯು |
ತಾವದನನಹ ಪಂಡಿತಾರಾಧ್ಯರಿಗೆ ವಂದಿಸುವೆ || ೮ ||

ಇಳೆಗೊಡೆಯ ಬಿಜ್ಜಳ ನೃಪನ ಸಭೆ |
ಯೊಳಗೆ ಬಂದೊಡ್ಡಿದ ಪವಾಡಂ |
ಗಳ ಜಯಿಸಿ ಗುರುಲಿಂಗಜಂಗಮದೆಡೆಗೆ ಕಾಯವನು ||
ಗಳಿಸಿದರ್ಥವ ಮನವನಿತ್ತು |
ಜ್ವಳ ಮಹಾಶಿವಭಕ್ತಿಭಾವವ |
ತಳೆದ ಕಲ್ಯಾಣದ ಬಸವದಂಡೇಶ ಶರಣಾಗು || ೯ ||

ಪರಮ ಸದ್ಗುರುರಾಯ ವಿದ್ಯಾ |
ವರಣಚಿತ್ತಂ ಸಕಲಮತವಿ |
ಸ್ತರಣಖಂಡಣ ವೇದಶಾಸ್ತ್ರಾಗಮವನಮಯೂರಂ ||
ಕರುಣಸಾಗರ ಬಸವಪಾದಾಂ |
ಬುರುಹಷಟ್ಪದನೆರಡನೆಯ ಶಂ |
ಕರನೆನಿಪ ಪಾಲ್ಕುರಿಕೆ ಸೋಮೇಶಂಗೆ ವಂದಿಸುವೆ || ೧೦ ||

ಹರಕುಮಾರಕನಾದ ವಿಘ್ನೇ |
ಶ್ವರನುವಾಮ್ನಾಯಾಂಶಗಳೊಳವ |
ತರಿಸಿ ನೆಗಳ್ದ ಸರಸ್ವತಿಯರೀ ಕೃತಿಗೆ ನೆರೆ ಬಾರ ||
ದಿರರದೇಕೆಂದೊಡೆ ಮಹಾಶಿವ |
ಶರಣ ಶಂಕರದಾಸಿಮಯ್ಯನ |
ಚರಿತೆಯಾದುದರಿಂದೆ ಬಾರದೊಡಾಜ್ಞೆಯಹುದೆಂದು || ೧೧ ||

ಹರನ ಪಾದಾಂಬುಜವನಲ್ಲದೆ |
ಸ್ಮರಿಸದಿಹನಜಗಣ್ಣ ಮಲುಹಣ |
ಶರಣಬಾಣ ಮಯೂರನುದ್ಭಟ ಕೆರೆಯ ಪದ್ಮರಸ ||
ಗರುವ ಭಟ್ಟ ಮಹಿಮ್ನ ರಘುಶೇ |
ಖರ ಮಹಾವ್ಯಾಸಾದಿ ಸುಕವೀ|
ಶ್ವರರ ಪಾದಾಂಬುಜಗಳುಂ ನೆಲಸಿರ್ಕೆ ಮನ್ಮನದಿ || ೧೨ ||

ಪರಮ ಮೋಕ್ಷೇಶ್ವರ ಪುರಾತನ |
ಚರಿತವೆನಿತುಮುಮನಿತುಮುಂ ವಿ |
ಸ್ತರಿಸಿ ಸನ್ಮತ ವೀರಶೈವಾರಂಭವುಮಂ ನೆಗಳ್ದ ||
ಗಿರಿಸುತೆಯ ಕಲ್ಯಾಣದೇಳ್ಗೆಯ |
ನೊರೆದು ವಪುಸಹವಾಗಿ ಪಂಪಾ |
ವರನೊಳೈಕ್ಯಂ ಬಡೆದ ಹರಿದೇವಂಗೆ ವಂದಿಸುವೆ || ೧೩ ||

ಸಲ್ಲಲಿತ ಕವಿಕುಲತಿಲಕ ಶಿವ |
ನಲ್ಲದನ್ಯರ ಪೊಗಳದಿಹ ಕವಿ |
ಬಲ್ಲಹರ ಕಿಂಕರನು ಪೊಳಲ್ಗುಂದಪುರದ ನಿವಾಸ ||
ಕಲ್ಲಿನಾಥನ ಭೃತ್ಯ ರಿಪುಕವಿ |
ದಲ್ಲಣಾಗ್ರಘರಟ್ಟ ಪಂಡಿತ |
ಮಲ್ಲಿಕಾರ್ಜುನ ಕವಿಕಮಲರವಿ ಪೇಳ್ದನೀ ಕೃತಿಯ || ೧೪ ||

ಶೂಲಿಯರ್ಚಕರುಂಡುಳಿದುದಂ |
ಲೀಲೆಯಿಂದುರೆ ಸವಿದು ಸುಖಿಸುವ |
ನಾಲಿಗೆಯೊಳುಸುರಿದನು ಪಂಡಿತಮಲ್ಲಿಕಾರ್ಜುನನು ||
ಕಾಲವಂ ಕಳೆವಂತೆ ಬಹುವಾ |
ಗ್ಜಾಲದೆಸಕವ ಪೇಳ್ವುದಿಲ್ಲಂ |
ಸಾಲದೀ ಕೃತಿಯೊಳಗೆ ರಸಭಾವಂಗಳೆನ್ನದಿರಿ || ೧೫ ||

ರೂಢಿಸುವ ಕರ್ನಾಟಲಕ್ಷಣ |
ಗೂಡಿತಿಲ್ಲೀ ಕಾವ್ಯದೊಳಗೆನ |
ಬೇಡ ತಿಳಿಯದೆ ಪೇಳ್ದುದಿಲ್ಲಂ ಶಬ್ದಶಾಸ್ತ್ರವನು ||
ಪಾಡುಗಬ್ಬದ ಲಕ್ಷಣಂಗಳ |
ನೀಡಿರಿದು ಪದವಿಡೆ ಸುಮೋಹನ |
ಗಾಡಿ ಕೆಡುವುದೆನುತೆ ವಿಭಕ್ತಿಸಮಾಸಗಳನುಳಿದೆ || ೧೬ ||

ಕುಳಕ ಮುಕ್ತಕ ತಿಜ ಸುಬಂತೋ |
ಜ್ವಳಿಪ ಸಿದ್ಧಿ ಸಮಾಸ ಛಂದಂ |
ಗಳತಿ ಮಿರುಗುವ ಗಣ ನವರಸಂ ಶಬ್ದಪರ್ಯಾಯ ||
ರಳಕುಳಾಕ್ಷರಮುಂ ವಿಭಕ್ತಿ |
ಸ್ಥಳವಲಂಕೃತ ಕರ್ತೃಕರ್ಮಂ |
ಗಳ ವಿಚಾರಿಸಲಾಗದೀಶ್ವರಭಕ್ತಚರಿತೆಯೊಳು || ೧೭ ||

ಈ ಕೃತಿಗೆ ಕರ್ತುವೆ ಸದಾಶಿವ |
ನೀ ಕೃತಿಗೆಯಾಚಾರಮೇ ಕ್ರಿಯೆ |
ಯೀ ಕೃತಿಗೆ ಸದ್ವೀರಶೈವದ ಪದ್ಧತಿಯೆ ಕರ್ಮ೦ ||
ಈ ಕೃತಿಗೆ ಭಕ್ತಿಯೆ ವಿಭಕ್ತಿಗ |
ಳೀ ಕೃತಿಗಸಂಖ್ಯಾತಗಣ ಗಣ |
ವೀ ಕೃತಿಗೆ ತ್ರಿಪದಾರ್ಥಮರ್ಥ೦ ಶಿವಪದಮೆ ಸುಪದಂ || ೧೮ ||

ವರಷಡುಸ್ಥಲವೇ ಸಮಾಸಂ |
ಕರುಣಭಾವಮೆ ನವರಸಂ ವಿ |
ಸ್ತರ ತ್ರಿಲಿಂಗಮೆ ಲಿಂಗ ಶಿವಸಿದ್ಧಾಂತಮೇಯಂತಂ ||
ಪರಮ ಲಿಂಗಾಂಗದ ಪ್ರಯೋಗದ |
ಪರಿಯೆ ಸಂಧಿ ಶಿವಾನುಭಾವದ |
ಸಿರಿಯಲಂಕಾರಮುದಸಂಖ್ಯಾ ಮಹಗಣಮೆ ಗಣನಂ || ೧೯ ||

ಯುಕ್ತಿಯಾಗದೊಡೀ ಕೃತಿಯ |
ಶಿವ ಭಕ್ತರೇ ತಿದ್ದುವುದು ರುದ್ರನ |
ಭಕ್ತರೇ ಪ್ರತಿಪಾದಿಸುವುದು ಮಹೇಶ್ವರಾಚಾರ ||
ಶಕ್ತಿಯಾದ ನಿರೂಪಮಂ ಸತಿ |
ಯುಕ್ತಮಂ[1] ಮಾಡುವುದು ಪಶುಪತಿ |
ಭಕ್ತರಲ್ಲದೆ ಖೂಳರಿಗೆ ಗೋಚರಮೆ ಶಿವವಾಕ್ಯಂ[2] || ೨೦ ||

ಶಾಂಭವಾರ್ಚಕ ವಿಮಳಚರಿತಾ |
ರಂಭದಿಂ ಸತ್ಕವಿಗಳಿಗೆ ಸರಿ |
ಯೆಂಬ ಗಾಂಪರ ಬಾಯಿ ಪುಳಿಯದೆ ಮಾಣ್ಬುದೇ ಚೆಲ್ವ ||
ರಂಭೆಯಿದಿರೊಳು ಮೂಕೊರತಿಯಹ |
ಸಿಂಬೆದೊತ್ತಂ ನಿಲಿಸಿ ನೋಡೆ ಸ |
ಮಂ ಬಹುದೆ ಕಟ್ಟಾಣಿ ಮುತ್ತಿರೆ ಸರಿಯೆ ಶಂಖಮಣಿ || ೨೧ ||

ಕರುಣನಿಧಿ ನಾಗಲಿಕ ವಂಶೋ |
ದ್ಧರಣ ಮಿತ್ರಾವರಣ ಸತ್ಯಾ |
ಭರಣ ಶಾಂತಸ್ಫುರಣ ಬಂಧವ ಹರಣ ಶಿವಶರಣ ||
ಸರಸಕೋವಿದ ಸತ್ಕಳಾವಿದ |
ಗರುವ ಗಂಭೀರ ಪ್ರಭುವ ವಿ |
ಸ್ತರಣ ಸದ್ಗುಣಿ ಚೆನ್ನವೀರನ ತನುಜ ಸಂಗಯ್ಯ || ೨೨ ||

---

೧ ಸಲೆ ಯುಕ್ತಿಯುಂ (ಇ.)  ೨ ಕಾವ್ಯಂ (ಇ.)

ಲಿಂಗಜಂಗಮಗುರುಪದಾಂಬುಜ |
ಭೃಂಗನಪ್ರತಿಜಾಣ ಸಜ್ಜನ |
ಸಂಗ ಬೇಡುವವಮಾಗತರ ಪ್ರಕರಕ್ಕೆ ಕಲ್ಪತರು ||
ತುಂಗಗುಣಸಂಪೂರ್ಣ ಸತ್ಕೀ |
ರ್ತ್ಯಾಂಗನಾವಲ್ಲಭ ವಿಚಾರೋ |
ತ್ತುಂಗ ಸೂಜಿಯ ಕಾಯಕದೊಳೆಸೆದಿರ್ಪ ಸಂಗಯ್ಯ || ೨೩ ||

ಆತನುದರಸುಧಾಬ್ಧಿಯೊಳು ಸಂ |
ಜಾತನಹ ಸಂಪೂರ್ಣಚಂದ್ರ |
ಖ್ಯಾತಿಶೇಖರ ಸುಗುಣಮಣಿ ಲೋಕಾಪವಾದಕ್ಕೆ ||
ಭೀತನಾಗಿಹ ಸಚ್ಚರಿತ ವಿ |
ದ್ಯಾತಿಶಯ ಕರೆದಿತ್ತು ಮನ್ನಿಪ |
ದಾತ ವೇಮಾ^೧^ಂಬಿಕೆಯ ಜಠರಾಬ್ಜಭ್ರಮರ ಪರ್ವಂ || ೨೪ ||

ಸರ್ವಸೂಜಿಯ ಕಾಯಕದವರೊ |
ಳೊರ್ವನಧಿಕ ಗ್ರಹಸ್ಥ ಪರಮ ನಿ |
ಗರ್ವಿ ಪೂರುಷ ಶಿವಶರಣರಿಗೆ ಶಿಶು ಸದಾಚಾರ ||
ಕುರ್ವ ಪೃಥ್ವೀವೌಲ್ಯನಹ ಶ್ರೀ |
ಪರ್ವತೇಶನ ಭೃತ್ಯ ಸಂಗನು |
ಪರ್ವ ಪಿತಮಾತಾನುಜರ ನಯನಕ್ಕೆ ಸತ್ಪರ್ವ || ೨೫ ||

ತನ್ನ ವಂಶಾರಾಧ್ಯನಹ ಸ |
ನ್ಮನ್ನೆಯನು ಭಾಳಾಕ್ಷನೀಶ್ವರ |
ಸನ್ನಿಧಾನನುವನ್ಯದೈವಾರ್ಣವವಡಬ ಮುಕ್ತಿ ||
ಕನ್ನಿಕಾರಮಣನು ಭಕುತಿಸಂ |
ಪನ್ನ ಶಿವಭಕ್ತಾಹ್ವಯಶಿರೋ |
ರನ್ನ ಶಂಕರದಾಸಿಮಯ್ಯನ ಕೃತಿಯ ಪೇಳಿಸಿದ || ೨೬ ||

ಪೊಡವಿಯೊಳು ಖಂಡಿಸಿದ ಕೈಗಳ |
ಪಡೆದ ಹೆಂಡದ ಮಾರಿತಂದೆ ಕು |
ರುಡರಿಗಕ್ಷಿಯನಿತ್ತ ಸತ್ಕವಿ ಕಾಳಿದಾಸಯ್ಯಂ ||
ಅಡಗಿದಕ್ಷಿಗಳೂರ್ಧ್ವನೇತ್ರವ |
ಪಡೆದ ಪಂಡಿತ ಭಾಳನೇತ್ರವ |
ಪಡೆದ ಶಂಕರದಾಸಿಮಯ್ಯನ ಕೃತಿಗೆ ಸಹವಾಗು || ೨೭ ||

೧ ದೇವಾ (ಇ)

ಆಸೆಯುಳಿದ ಜಗತ್ಪ್ರಪಂಚಿನ |
ವೇಷವಲ್ಲದ ವಿಷಯತತಿಯಭಿ |
ಲಾಸೆಯಿಲ್ಲದ ನಿರ್ಮಳಜ್ಞಾನಕ್ಕೆ ಪಕ್ಕಾದ |
ಈಷಣತ್ರಯ ದೂರವಾದ ಮ |
ಹಾಶರಣ ಕಾಲಾರಿ ಶಂಕರ |
ದಾಸಿಮಯ್ಯನ ಚರಿತೆಯನು ಚಿತ್ತೈಸಿ ಭಕ್ತಜನ || ೨೮ ||

ಲಿಂಗಜಂಗಮಗುರುವಿಗೆ ಮನಧ |
ನಂಗಳಂಗಮನಿತ್ತು ಶರಣರ |
ಸಂಗವೇಯಸಿಮಸಿಕೃಷಿಯು ವಾಣಿಜ್ಯವೆಂದರಿದು ||
ಜಂಗಮಾಂಘ್ರಿಜಲಪ್ರಸಾದೋ |
ತ್ತುಂಗದಿಂದೆ ಪಸಿವು ತೃಷೆಯ ನೆರೆ |
ಪಿಂಗಿಸುವ ಮಾಹೇಶ್ವರರು ಲಾಲಿಸುವುದೀ ಕೃತಿಯ || ೨೯ ||

ಈ ಕೃತಿಗೆ ಮೊದಲಾವುದೆನೆ ಮಂ |
ಡೂಕ ಮಕರ ವ್ಯಾಳಕುಲವು ಜ |
ಲೂಕ ಕರ್ಕಟ ತಿಮಿ ತಿಮಿಂಗಿಲ ಜಾಳ ವಿಭು ನಕ್ರ ||
ಭೇಕ ಶುಕ್ತಿಕೆ ಶಿಂಶುಮಾರ ಮ |
ಹಾ ಕಮಠ ಕಂಬುಪ್ರಮುಖ ತೋ |
ಯೌಕಸಾಹ್ವಯದಿಂದೆ ರಾಜಿಸುತಿರ್ಪುದಂಬುನಿಧಿ || ೩೦ ||

ತೆರೆ ಕಣಾವಳಿ ಬುದ್ಬುದಂ ಪೆ |
ರ್ದೆರೆ ವಿತಳ್ಪಂಕಂ ವಿಕಾರಂ |
ನೊರೆಗಳಾವರ್ತಂ ಪಲವು ವೈಶೇಷ ಸೀವರವು ||
ಭರತ ತುಂತುರ ಚಕ್ರಭಂಗಂ |
ಮೊರಹಿನಿಂದ ವಿರಾಜಿಸಿತ್ತಾ |
ಧರೆಯು ಬಳಸಿಹ ಭದ್ರ ಪೃಥ್ವಿಗೆಯೆಸೆವ ಸುಸಮುದ್ರಂ || ೩೧ ||

ಪವಳವಳ್ಳಿಗಳಿಂದೆ ಭರದಿಂ |
ಕವಿವ ಮೇಘಾಡಂಬರದಿ ಮುಳು |
ಗುವ ನೆಗೆವ ರತ್ನಪ್ರಭಾಪೂರಣದಿ ಶುಕ್ತಿಯೊಳಿ |
ಭವಿಸಿ ಥಾಳಂಬೆತ್ತ ಮುಕ್ತಾ |
ನಿವಹದಿಂದೆ ವಿರಾಜಿಸುತ್ತ |
ರ್ಣವಮೆಸೆದುದಮಲೇಂದುಕಾಂತಗ್ರಾವದೇಳ್ಗೆಯೊಳು || ೩೨ ||

ಗಂಗೆ ಗೋದಾವರಿ ಯಮುನೆ ಸ್ವ |
ರ್ಣಾಂಗಿ ಭಾಗೀರಥಿ ವರುಣೆ ಕೃ |
ಷ್ಣಾಂಗಿಯುಸಿ ಜಾನ್ಹವಿ ಸರಸ್ವತಿ ಕಪಿಲೆ ಕಾವೇರೀ ||
ತುಂಗಭದ್ರೆಯು ಹೈಮವತಿ ಶೋ |
ಭಾಂಗಿ ಫಲ್ಗುಣಿ ಭೀಮರಥಿಯು |
ತ್ತುಂಗ ಜಗುನಾ ನದಿನದಾ ಸಂಗಮದಿ ಕಡಲೆಸೆಗುಂ || ೩೩ ||

ವಡಬನಿಂ ಕರ್ಪೂರಕದಳಿಯು |
ಗಡಣದಿಂ ದ್ರೋಣಸ್ಸುಲಾಭಂ |
ಪಡಗುಗಳ ಚೆಲ್ವಿಂದೆ ಪೂರ್ವಗಳೊಗೆದ ದ್ವೀಪಗಳ ||
ಒಡಲೊಳಿಟ್ಟತಿ ಮೇನಕಾತ್ಮಜ |
ಗೆಡೆಯ ಕೊಟ್ಟ ಗಭೀರದಿಂದಾ |
ಕಡಲೆಸೆದುದುರ್ವೀ ಶಶಿಯ ಪರಿ ಮಂಡಲದ ತೆರದಿ || ೩೪ ||

ಆ ಮಹಾರ್ಣವ ಬಳಸಿ ಮಿರುಗುವ |
ಭೂಮಿಖಂಡದ ಮಧ್ಯದೊಳ್ ಮಿಗೆ |
ಹೇಮರುಚಿಯಿಂ ಮೇರು ಕಂಗೆಸೆದಿತ್ತು ಘನತೆರದಿ ||
ಸೋಮಸೂರ್ಯರ್ ಬಲವರುವ ಪ್ರೋ |
ದ್ದಾಮಯುತ ಲಿಂಗಂಬೊಲೊಪ್ಪಿದು |
ದಾಮರಾಶ್ರಯವಾಗಿ ಕನಕೋದ್ಗಮದ ಪಾಂಗಿನೊಳು || ೩೫ ||

ಖಂಡಪರಶುವಿನತುಳಬಲ ಕೋ |
ದಂಡವಾದ ತಪಸ್ವಿನಿರ್ಜರ |
ತಂಡಕಾಸ್ಪದವಾದ ಸರ್ವನಗಕ್ಕೊಡೆಯನಾದ ||
ತಂಡತಂಡದ ಲೋಕವೆಂಬ ಸು |
ಮಂಡಲಾನ್ವಿತವಾದ ಧರಣೀ |
ಮಂಡಲದ ನಡುವಾದ ಮಹಮೇರೆಸೆದುದತಿಶಯದಿ || ೩೬ ||

ಆ ಸುಮೇರುವಿನಿಂದ ದಕ್ಷಿಣ |
ವಾಸದೊಳು ಮಿರುಗುವುದು ಕುಂತಳ |
ದೇಶವೈವತ್ತಾರು ದೇಶದ ಮುಖಮುಕುರದಂತೆ ||
ವಾಸವಾಶ್ರಯದಂತೆ ಸುಖದ ನಿ |
ವೇಶವೆನಿಸಿ ಧರಾಂಗನೆಯ ಮಣಿ |
ಭೂಷಣದ ವಲವೆನಿಸಿ ಶೃಂಗಾರದ ಶರಧಿಯೆನಿಸಿ || ೩೭ ||

ಎಂತುಟಾ ಗ್ರಾಮಗಳು ಡಂಬಗ |
ಳಂತೆ ತದು ಡಂಬಗಳು ಪತ್ತನ |
ದಂತೆ ಪತ್ತನಗಳು ನಗರದೊಲ್ ನಗರ ಗೀರ್ವಾಣ ||
ಕಾಂತನಮರಾವತಿಗೆ ಪಡಿಯೆಂ |
ಬಂತೆ ಮೆರೆದುದು ಧಾರುಣೀ ಶ್ರೀ |
ಕುಂತಳದೊಳೊಪ್ಪಂಬಡೆದ ಕುಂತಳದ ದೇಶದೊಳು || ೩೮ ||

ಮುಂಗಡೆಯು ಮಿರುಗುವ ಬನಂಗಳ |
ಪಿಂಗಡೆಯು ಶಾಳೀವನಂಗಳ |
ಪೊಂಗುತುಭಯದ ಪಾರ್ಶ್ವದೊಳು ತೀವಿದ ತಟಾಕಗಳ |
ಸಿಂಗರದಿ ರಾಜಿಸುವ ಬಲು ಗ್ರಾ |
ಮಂಗಳಲ್ಲದೆ ಶೂನ್ಯವೊಳಲಂ |
ಕಂಗಳಿಂ ಕಾಣಲ್ ಪರೀಕ್ಷಿಪರಾರ್ ಸುದೇಶದೊಳು || ೩೯ ||

ತನತನಗೆ ಕರೆಕರೆದು ನೀಡುವ |
ಧನಿಕರಲ್ಲದೆ ಕ್ಷೀಣಸತ್ವದ |
ಮನೆಗಳಿಲ್ಲವು ಧರ್ಮಶಾಲಾನಿಕರವಿಲ್ಲದಿಹ ||
ಘನಶಿವಸ್ಥಾನಂಗಳಿಲ್ಲದ |
ಜನಪದಂ ಶೃಂಗಾರಮಿಲ್ಲದ |
ಬಿನುಗು ಪಟ್ಟಣವಿಲ್ಲವಾ ಕುಂತಳದ ದೇಶದೊಳು || ೪೦ ||

ಚೋರ ಬಾಧೆಗಳೆಂದುಮಿಲ್ಲದ |
ದಾರಿಗಳ್ ದಾರಿಯೊಳು ಛಾಯಾ |
ಪೂರಣದ ಸಾಲ್ಮರಗಳಾ ಮರದಡಿಯಲರವಟಿಗೆ ||
ಸೇರಿ ಮೆರೆದಿಹವರವಟಿಗೆಯೋಳ್ |
ವಾರಿ ಕಬ್ಬಿನ ಕಂಡಿಕೆಗಳೆಳೆ |
ನೀರು ಸಕ್ಕರೆ ಪಾನವಿಟ್ಟಿಹುದಾ ಸುದೇಶದೊಳು[೧] || ೪೧ ||

ಕಳವು ವಂಚನೆ ಟವುಳಿಯೊಳು ಸಂ |
ಚಲ ಕಟಾಕ್ಷದಿ ಕೊಂಕು ಸರ್ಪಂ |
ಗಳ ಗತಿಯೊಳವಿಚಾರ ರಾಜಕುಮಾರರೊಳು ಪೊಳ್ಳು ||
ಕಳವೆಯೊಳಗಾರಡಿಗಳಳಿಯೊಳು |
ಜಳದಿ ಭಂಗ ಕನಿಷ್ಠವಂಗುಲಿ |
ಗಳೊಳಗಲ್ಲದೆ ಕುಂತಳದ ಭೂಮಿಯೊಳು ಕಾಣಿಸವು || ೪೨ ||

---

೧ ವೀಂಟಿಹರೆಲ್ಲಿ ನೋಡಿದರೆ (ಇ.)

ಮದ ಮತಂಗದಿ ಬಡವು ಮಧ್ಯದೊ |
ಳಧನ ಯತಿಗಳೊಳರಸಗುಣವಾ |
ಬಿದಿರೆಲೆಗಳೊಳು ಪುಸಿಯೆ ಪೊಂಬಾಳೆಯೊಳು ಬಡಬಾಸೆ ||
ಸುದತಿಯರೊಳರಿವುದು ಗಡಣದೊಳು |
ಕದನ ಸೆರೆಕಟ್ಟೆಂಬ ನುಡಿ ಬಂ |
ದೊದಗಿಹುದು ಚದುರಂಗ ನೆತ್ತದೊಳಿಲ್ಲಮುಳಿದೆಡೆಯ || ೪೩ ||

ಇಂತೆಸೆವ ಕುಂತಳ ಮಹಾದೇ |
ಶಾಂತರದಿ ರಾಜಿಸುತಿಹುದು ಸೊಬ |
ಗಂ ತಳೆದು ಕಂದಶಿಲೆಯೆಂಬ ಪುರಂ ವಿಶೇಷದೊಳು ||
ಸಂತತಂ ಪೊಗಳುವರಳವೆ ಫಣಿ |
ಕಾಂತ ಷಣ್ಮುಖ ನಳಿನಜರಿಗೆಂ |
ಬಂತೆ ತದ್ದೇಶಾಂಗನೆಯ ಸೀಮಂತಮಣಿಯಂತೆ || ೪೪ ||

ಶರಧಿಯೇ ಕಾಸಾರದಂತಾ |
ಧರೆಯೆ ತಾವರೆಯಂತೆ ಕುಂತಳ |
ದಿರವೆ ವಿಕಸಿತವಾದ ವಾರಿಜದಂತೆ ಕಂದಶಿಲೆ ||
ಪುರವೆ ಕರ್ಣಿಕೆಯಂತೆ ಮಿಗೆ ವಿ |
ಸ್ತರದಿನೊಪ್ಪಂ ಬೆತ್ತಿಹುದು ಸಿಂ |
ಗರದ ಗೋಪುರ ಸಾಲಪರಿವೇಷ್ಟನಗಳಿಂದಮುರ್ದ || ೪೫ ||

ಧಾತ್ರಿಯೊಳು ರಾಜಿಸುವ ಪುಣ್ಯ |
ಕ್ಷೇತ್ರ ಶಿವಭಕ್ತಾಂಬುಪೂರಣ |
ಪಾತ್ರ ಮಹಿಮಾಪದವಿಶೇಷಣ ವರ್ಣಯುತಸೂತ್ರಂ ||
ಪುತ್ರಮೋಕ್ಷೋತ್ತರದ ಪರಮ ಪ |
ವಿತ್ರಮಾದ ಸ್ಥಳಮೆನಿಪುದತಿ |
ಚಿತ್ರ ನವರಸಭರಿತ ಕಂದಶಿಲಾಪುರ ಸ್ಥಿರದಿ || ೪೬ ||

ಆ ಮಹಾಪುರದೊಳಗೆ ನೆಗಳ್ದಿಹ |
ಸೋಮನೊಳು ತಿಳಿಜೊನ್ನ ರವಿಯೊಳು |
ಧಾಮ ದರ್ಪಣದೊಳಗೆ ನಿರ್ಮಳ ಪುಷ್ಪಿನೊಳು ಕಂಪು ||
ಹೇಮದೊಳಗುರು[೧] ಬಣ್ಣವೆಸೆವಂ |
ತಾ ಮಹಿಮ ಸದ್ಬ್ರಾಹ್ಮಣೋತ್ತಮ |
ನಾಮಲಾನ್ವಯ ಭರಿತನಹ ಗೋವಿಂದ ದೇವಗಳು || ೪೭ ||

---

೧ ನೆರೆ (ಇ.) ; ನರು (ಉ.)

ವೇದಪಾರಂಗತ ನಿಗಮಶಾ |
ಸ್ತ್ರಾದಿಸಕಲಪುರಾಣಕೋವಿದ |
ನಾದಿಮಧ್ಯಾಂತತ್ರಿ[1]ಕಾಲಜ್ಞಾನಿ ಪರಮಾತ್ಮ ||
ಬೋಧಕಂ ಪ್ರಣವಾಂಗ ಪಂಚಕ |
ಸಾಧಕಂ ಶಾಂತಂ ದಯಾಕರು |
ಣೋದಯಂ ಸನ್ಮಾರ್ಗಿಯಹ ಗೋವಿಂದ ದೇವಗಳು || ೪೮ ||

ಆತನರಸಿ ನವೀನ ಸತ್ಕುಲ |
ಜಾತೆ ಪುಣ್ಯಾಂಗನೆ ಪತಿವ್ರತೆ |
ನೀತಿವಂತೆ ವಿಶೇಷಸೌಂದರಿ ಸಕಲಗುಣಭರಿತೆ ||
ಭೀತೆ ದುರ್ಗುಣ ಧರ್ಮಚರಿತಾ |
ಖ್ಯಾತಿಮಯೆ ದೇಶಿಕಜನಂಗಳ |
ಮಾತೆ ಸತ್ಯದೊಳೆಸೆದಿಹಳು ದುಮ್ಮವ್ವೆ ಪೆಸರಾಂತು || ೪೯ ||

ಪತಿಯನುದಯದೊಳೆದ್ದು ನೋಡುವ |
ಪತಿಯ ಪಾದಾರ್ಚನೆಯ ಮಾಡುವ |
ಪತಿಯ ಪಾಡುವ ಪತಿಯುವುಂಡುಳಿದುದನು ತಾನುಂಬ ||
ಪತಿಯ ಸೇವಾಭಕ್ತಿಯೊಳಗಿಹ |
ವ್ರತದೊಳನುದಿನ ಸುಖಿಸುತಿಹಳಾ |
ಸತಿಜನದ ಸಿರಿವನೆಯು ದುಮ್ಮವ್ವೆಯರು ಸಂತಸದಿ || ೫೦ ||

ಧರ್ಮವಶದಿಂದನುದಿನಂ ಷಟ್ |
ಕರ್ಮಮಂ ತಪ್ಪದೆ ಗ್ರಹಸ್ಥರ |
ಧರ್ಮಶಾಸ್ತ್ರದ ಕೃತ್ಯಮಂ ನಡೆಸುತ್ತ ಶ್ರುತಿಸ್ಮೃತಿಯ ||
ವರ್ಮಮಂ ಕೆಲಬರಿಗೆ ಬೋಧಿಸಿ |
ನಿರ್ಮಳಾತ್ಮರ ಮಾಡುತಂ ದು |
ಷ್ಕರ್ಮವಶವಾಗದೆ ನೆಗಳ್ವರಾ ಸತಿಪತಿಯರೊಲಿದು || ೫೧ ||

ವೇದಘೋಷಣೆಗಾ ಮನೆಯೆ ಯ |
ಜ್ಞಾದಿಶೋಭನೆಗಾ ಮನೆಯೆ ಕಾ |
ಲಾದರಣೆಗಾ ಮನೆಯೆ ಬಂದ[2]ವರಿಷ್ಟಕಾ ಮನೆಯೆ ||
ಆದಿಯನ್ವಯಕಾಮನೆಯೆ ಭ |
ಕ್ತ್ಯಾ[3]ದಿ ದಾನಕ್ಕಾಮನೆಯೆ ಸೌ |
ಖ್ಯೋದಯ[4]ಕ್ಕಾ ಮನೆಯೆನಿಸಿದರ್ ದಂಪತಿಗಳೊಲಿದು || ೫೨ ||

---

೧ ತಾಂಗ (ಇ, ಉ.) ೨ ಬಾಂಧ (ಉ.) ೩ ಭೃ । ತ್ಯಾ (ಉ.) ೪ ಚರು । ವೇದನ (ಅ.)

ರತಿಯುಮಂಬುಜಬಾಣನುಂ ಭಾ |
ರತಿಯುಮಬುಜಜನುಂ ಮಹಾ ಪಾ |
ರ್ವತಿಯುಮೀಶ್ವರನುಂ ಶಚಿಯುಮಿಂದ್ರನುಮರುಂಧತಿಯು ||
ಅತಿಮಹಾತ್ಮವಸಿಷ್ಠನುಂ ಮಾ |
ಸತಿಯುಮಬುಜೋದರರೆಸೆವವೊಲು |
ಸತಿಪತಿಯರೊಪ್ಪಂ ಬಡೆದರಾ ಕಂದಶಿಲೆಯೊಳಗೆ || ೫೩ ||

ಏನ ಹೇಳುವೆನುದಯಕಾಲದಿ |
ಸ್ನಾನವಿಲ್ಲದೆಯರ್ಘ್ಯಮುಂ ಶ್ರೀ |
ಭಾನುವಿಂಗೆತ್ತದೆಯು ಜಪವಿಲ್ಲದೆ ಜಪಾಂತರದಿ ||
ಹೀನ ಹೋಮದ ಕೃತ್ಯವಿಲ್ಲದೆ |
ದಾನವಾರಿಯ ಪೂಜೆಯಂತರ |
ಮಾ ನವೀನಾತಿಥ್ಯಮಿಲ್ಲದೆ ವೈಶ್ವದೇವಯುವನು || ೫೪ ||

ಮಾಡಲೊಲ್ಲರು ವ್ರತವ ಹೀನರ |
ನೋಡರನೃತ ವಚಗ್ನರೊಳು ಮಾ |
ತಾಡರಘಪೂರಣರ ನೀಚರ ಪಿಸುಣವರ್ತಕರ ||
ಕೂಡರಾಶಾಪಾಶದಿಂದುರೆ |
ಕಾಡರುಳಿದಾದವರನೀಪರಿ |
ರೂಢಿಯೆತ್ತಿಹರೊಲಿದು ದಂಪತಿಯರು ವಿಲಾಸದೊಳು || ೫೫ ||

ಪರಮಯಜನಂ ಯಾಜನಂ ವಿ |
ಸ್ತರದ ದಾನಪ್ರತಿಗ್ರಹಂ ಗೋ |
ಚರಿಸುವಧ್ಯಯನಗಳನಧ್ಯಾಪನಭರಿತನಾಗಿ ||
ಕರುಣದಿಂ ಕಲಿಯುಗದ ಧರ್ಮದ |
ಸ^೧ರಣಿಯಲ್ಲದ ಮಾರ್ಗದಿಂ ಭೂ |
ಸುರ ತಿಲಕ ಗೋವಿಂದದೇವಂ ನೆಗಳ್ದ ಸತಿಸಹಿತ || ೫೬ ||

ನೆನೆದ ಕಾರ್ಯಂ ಸಿದ್ಧಿಸಲಿ ಯ^೨ |
ವನಮುದಾಗಲಿ^೨ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೫೭ ||

**ಸಂಧಿ ೧ಕ್ಕಂ ಪದ ೫೭ಕ್ಕಂ ಮಂಗಳಂ**

---

೧ ಸ್ಮರಣೆ (ಇ.) ೨ ಯೌ । ವನಿಯರೊಲಿಯಲಿ (ಉ.)

೨ನೆಯ ಸಂಧಿ

# ಗೋವಿಂದಭಟ್ಟನು ನವಿಲೆಯ ಜಡೆಯ ಶಂಕರನನ್ನು ಕಂಡದ್ದು

**ಸೂಚನೆ**

ಕಾಶಿಗೈದುವೆನೆಂದು ಘನ ಸಂ |
ತೋಷ ಮಿಗೆ ನಡೆತಂದು ಸದ್ಗುಣಿ |
ಭೂಸುರೋತ್ತಮ ಕಂಡ ನವಿಲೆಯ ಜಡೆಯ ಶಂಕರನ ||

ಭುಜಗರಾಜವಿಭೂಷಣಂ ಸಾ |
ಮಜಸುರಾಜಿನವಸನನನುಪಮ |
ರಜತಗಿರಿಶಿಖರಾಶ್ರಯಂ ತ್ರಿಪುರಾಂತಕಂ ಶರ್ವಂ ||
ಅಜಹರೀಂದ್ರಾರ್ಚಿತಪದಾಬ್ಜಂ |
ತ್ರಿಜಗನಾಯಕನಪ್ರತಿಮನಂ |
ಗಜಭಯಂಕರ ಶಂಕರಂ ರಕ್ಷಿಸುಗೆ ಕಿಂಕರರ || ೧ ||

ಇಂತಧಿಕ ಸುಖದೊಳಗಿರುತಮೋ |
ರಂತೆಯೊಂದಾನೊಂದು ದಿನ ಮೋ |
ಕ್ಷಾಂತವಹ ಸದ್ಧರ್ಮದೇಳ್ಗೆಯನೊರೆದ ತನ್ನ ನಿಜ ||
ಕಾಂತೆ ದುಮ್ಮವ್ವೆಯೊಳು ಮಿಗೆ ವೇ |
ದಾಂತಕೋವಿದ ಸಕಲಶಾಸ್ತ್ರಾ |
ದ್ಯಂತಪಾರಂಗತನೆನಿಪ ಗೋವಿಂದದೇವಗಳು | || ೨ ||

ಕಮಲಮುಖಿ ಕೇಳೊಲಿದು ಚತುರಾ |
ಶ್ರಮದೊಳಧಿಕಂ ಬ್ರಹ್ಮಚರ್ಯಾ |
ತ್ಯಮಲ ವಾನಪ್ರಸ್ಥ ಸನ್ಯಾಸಾದಿ ಮೂರು ಗತಿ ||
ಭ್ರಮಣಿಗಾಸ್ಪದವೀ ಗ್ರಹಸ್ಥಾ |
ಶ್ರಮಮುಮದುಮಿದರಿಂದ ಮೋಕ್ಷಾ |
ಗಮವಗೋಚರ ಜ್ಞಾನದೀಪಕ್ಕಿದೆ ಮಹಾಪವನಂ || ೩ ||

ಕಾಮಮುಖ ಷಡ್ವರ್ಗದೇಳ್ಗಿಗೆ |
ಹೇಮಮೊದಲಾದೀಷಣತ್ರಯ |
ವಾ ಮದಾಷ್ಟಕದೂರ್ಜಿತಕೆ ಘನಸಪ್ತವ್ಯಸನಕ್ಕೆ ||
ತಾಮಸಾಚಾರಕೆ ಷಡೂರ್ಮಿಯ |
ಭೀಮತೆಗೆ ಪಕ್ಕಾಗಿಹುದು ಕೇಳ್ |
ಕೋಮಲಾಂಗಿ ವಿಚಾರಗತ ಸಂಸಾರವತಿಘೋರ || ೪ ||

ರೂಢಿಸುತ ಕೊಡುವವರ ನೆರೆ ಬರ |
ಬೇಡಿಸುವುದತಿ ಗೌರವರ ಲಘು |
ಮಾಡುವುದು ನಿರುಪಾಧಿಕರನೆಯುಪಾಧಿವರ್ತಕರ ||
ಮಾಡುವುದು ದಾತೃಗಳ ದೀನರ |
ಮಾಡುವುದು ಕರ್ತೃಗಳ ಭೃತ್ಯರ |
ಮಾಡುವುದು ಸಂಸಾರಸಾಗರವೆಲೆ ಸರೋಜಮುಖಿ || ೫ ||

ಇಹದೊಳಗೆ ಸುಖವಿಲ್ಲ ಪರಕಿದು |
ವಿಹರಿಸುವರಳವಲ್ಲ ಕಾಮ್ಯದ |
ಸಹಜರುಚಿಯಿದಕಿಲ್ಲ ಧರ್ಮಾರ್ಥಕ್ಕೆ ಕಂಟಕವು ||
ಮಹಿಮೆಯುತ ಮೋಕ್ಷಪ್ರಯೋಗ |
ಕ್ಕೆ ಹಿತಮಿದರಿಂದಿಲ್ಲ ಮಾಯಾ |
ಗಹನಚಿತ್ತವೆನಿಪ್ಪುದೀ ಸಂಸಾರವಿಂದುಮುಖಿ || ೬ ||

ಕಾಂತೆ ಕೇಳ್ ಸಂಸಾರಮಾರ್ಗದ |
ಭ್ರಾಂತಿ ಮಿಗೆ ಬಿಡದಾಯ್ತು ನೀನ |
ತ್ಯಂತ ಭಾಗ್ಯಾನಂದೆಯಾಗಿರು ನಾವು ನಿಜ ಸುಖದ ||
ಸಂತಸದಿ ಪುಣ್ಯವ ಕೊಡುವ ದೇ |
ಶಾಂತರವ ಮಾಡುತ್ತ ಕಾಶೀ |
ಕಾಂತ ವಿಶ್ವೇಶ್ವರನ ದರ್ಶನವಾಗಬೇಕೆಂದ || ೭ ||

ಎನೆ ನಗುತ ಕಮಲಾಕ್ಷಿ ಮಜ್ಜೀ |
ವನರಮಣ ನೀನ್ನೈದೆ ನಾನೀ |
ಬಿನುಗು ಪದವಿಯೊಳಿರ್ದು ಪಾಪಕ್ಕೆಡೆಯುಹೆನೆಯಕಟಾ ||
ಎನಗೆ ನೀನೇ ಸಕಲ ಪದಸಾ |
ಧನ ಮಹಾಮೋಕ್ಷಾಸ್ಪದಂ ನಿಜ |
ವೆನುತ ಕಾಂತಗೆ ಮಗುಳೆ ಬಿನ್ನೈಸಿದಳು ಸಂತಸದಿ || ೮ ||

ಪತಿಯ ಸೇವೆಗೆ ಶಿಷ್ಯಳಂದದಿ |
ಪತಿಯ ಕೂಟದಿ ವೇಶ್ಯಳಂದದಿ |
ಪತಿಯ ಮನದಿಷ್ಟಾರ್ಥವಾಕ್ಯಕೆ ಮಿತ್ರರೆಂತಂತೆ ||
ಪತಿಯ ರಕ್ಷೆಗೆ ಮಾತೆಯಂದದಿ |
ಪತಿಯ ಸಂಗಡ ಛಾಯೆಯಂದದಿ |
ಗ[1]ತಿಸಬೇಕಲ್ಲದೊಡೆ ರೌರವನರಕ ಸತಿಯರಿಗೆ || ೯ ||

ಕಾಂತನೊಳ್ವಾತಿಂದೆ ಶ್ರೋತ್ರದ |
ಕಾಂತನಾಲಿಂಗನದೆ ಗಾತ್ರದ |
ಕಾಂತನಾಕಾರಾವಲೋಕನದಿಂದೆ ನೇತ್ರಗಳ ||
ಕಾಂತನುಳಿದುದರಿಂದೆ ಜಿಹ್ವೆಯ |
ಕಾಂತನುಸುಗಂಧದಿಂದೆ ಘ್ರಾಣದ |
ಭ್ರಾಂತಿಯಂ ಪರಿಹರಿಸಬೇಕಲ್ಲದೊಡೆ ಮಹಪಾಪಂ || ೧೦ ||

ಅಸಿಯಮೊನೆ ತಾ ತಾಗಲಾನುವ |
ರಸದವೊಲು ಪ್ರಾಣೇಶ್ವರನ ಮನ |
ದೆಸಕದಿಚ್ಛೆಯನರಿದುವೊಡಗೂಡುವ ಪತಿವ್ರತೆಗೆ ||
ವಿಷವಮೃತವಪ್ಪುದು ಭುಜಂಗಂ |
ವಿಸುಪ ನೇವಳಮಹುದು ಕೂರಸಿ |
ಕುಸುಮದೆಸಳಂತಹುದು ದಳ್ಳುರಿ ಜೊನ್ನದಂತಹುದು || ೧೧ ||

ಪತಿಯೊಲಿದು ಲಾಲಿಸೆ ಬೆದರದಿಹ |
ಪತಿ ಕನಲಿ ಶಿಕ್ಷಿಸೆ ಮರುಗದಿಹ |
ಪತಿಯ ಸುಖದುಃಖಂಗಳೇ ತನಗೆಂಬ ಪತಿವ್ರತೆಗೆ ||
ಪತಿಯ ಕಾಣೆನು ತ್ರಿಜಗದೊಳರುಂ |
ಧೃತಿಯಳಲ್ಲದೆಯಾಸತಿಗೆ ದು |
ರ್ಗತಿಯ ಕಾಣೆನು ಮೋಕ್ಷದುತ್ತರ ಸುಗತಿಯಲ್ಲದತಿ || ೧೨ ||

ಈ ಪರಿಯ ಬೋಧೆಯನು ನೀವು ನಿ |
ರೂಪಿಸಿದಿರಿ[2]ಂದೇಯೆನಗೆ ಮಗು |
ಳಾಪರಿಯೊಳಿಹುದುಚಿತವಲ್ಲದೆನುತ್ತೆ ನಿಮ್ಮಧಿಕ ||
ಶ್ರೀಪದಂಗಳ ಬಳಿವಿಡಿದು ಬಹೆ |
ನಾ ಪೆರವಳೇ ನಿಮಗೆನುತಲಾ |
ಚಾಪಲಾಂಬಕಿ ಬಿನ್ನವಿಸಿದಳು ಪತಿಗೆ ಕೈಮುಗಿದು || ೧೩ ||

---

೧ ಸ (ಅ, ಇ, ಉ.) ೨ ದರಿಂ (ಇ.)

ಪೆಂಡಿವಾಸದ ಮಾತು ನಿರ್ಕುಳಿ |
ಗೊಂಡುದಾತನ ಮನವ ಕೃಪೆಯೆಡೆ |
ಗೊಂಡು ಸಂತೋಷದೊಳು ರಮಣಿಯನೊಲಿದು ಬುಲ್ಲವಿಸಿ ||
ಅಂಡಲೆವ ಮಾಯಾಪ್ರಬಲವೇ |
ದಂಡಕೇಸರಿ ಸತ್ಯಸಾರಕ |
ರಂಡ ಗೋವಿಂದರಸನುದ್ಯೋಗಿಸಿದ ಸದ್ಗತಿಯ || ೧೪ ||

ಗಳಿಸಿದಧಿಕ ದ್ರವ್ಯಮಂ ನಿ |
ಶ್ಚಲಮನದಿ ವಿಪ್ರರ್ಗೆ ದಾನಂ |
ಗಳನೊಲಿದು ಕೊಟ್ಟಧಿಕ ಬಾಂಧವ ಜನಕೆ ಮೆಯ್ಯಿತ್ತು ||
ಬಳಿಯೊಳಾಶ್ರಯಿಸಿರ್ದನಾಥ |
ರ್ಗಳ ಕರೆದು ಮಿಗೆಯಿತ್ತು ನಿರ್ವ್ಯಾ |
ಕುಳದಿ ಪೊರವಂಟಂ ಮಹಾಸತಿಸಹಿತಲಾ ವಿಪ್ರ || ೧೫ ||

ಪುರದ ಪುಣ್ಯಂ ಪೋಗುತಿದೆಯೆಂ |
ದುರೆ ಮರುಗುತಿಹ ಪೌರಜನಮಂ |
ಕರುಣದಿಂ ಸಂತೈಸಿ ಬಾಂಧವತತಿಯ ಬೀಳ್ಕೊಂಡು ||
ಪಿರಿಯರಿಗೆ ವಂದಿಸಿಯವಂದಿರ |
ಪರಕೆಯನೆ ಕೈಕೊಳುತೆ ಗೋವಿಂ |
ದರಸ ಕಾಶಿಯ ಪಥದೊಳೈದಿದ ನಿಜರಮಣಿ ಸಹಿತ || ೧೬ ||

ಪೊತ್ತ ಚಿಂತಾಭಾರದಿಂ ಪುರ |
ದತ್ತಲೈದಿತು ಪುರಜನಂ ಮಗು |
ಳಿತ್ತ ನಡೆದರ್ಸತಿಪತಿಯರೇಕಾನುಭಾವದೊಳು ||
ಉತ್ತರಾಭಿಮುಖತ್ವಮಾಗಿ ಸು |
ಚಿತ್ತದೊಳು ಕಾಶೀಪುರಾಧಿಪ |
ನೆತ್ತಿಗಣ್ಣನ ಕಾಂಬ ತವಕದಿ ತೀವ್ರಗತಿಯಿಂದೆ || ೧೭ ||

ಪರಿಣಯೋತ್ಸಾಹಗಳು ತುಂಬಿದ |
ಹರವಿಗಳು ಕನ್ಯಾಸಮೂಹಂ |
ಕರಿಗಳೆಸೆದೊಪ್ಪುವ ಕುಸುಮ ಪೊಂಬಾಳೆ ಪೂಗಫಲಂ ||
ಕರವಿಡಿದು ಜೋಡಾಗಿ ಬಹ ಭೂ |
ಸುರರು ಕಂಗೊಳಿಸಿದರು ಗೋವಿಂ |
ದರಸನೈದುವ ಪಥದೊಳಗೆ ಶುಭಕಾರ್ಯಸೂಚನೆಗೆ || ೧೮ ||

ಎಂತುಟಾ ಸತ್ಯರ ಮಹಿಮೆಯಾ |
ಪಾಂಥದೊಳು ಮಂದಾನಿಲಂ ಕುಳಿ |
ರಾಂತು ಬಿಜ್ಜಣವಿಕ್ಕಿದುದು ಶುಭ್ರಾಭ್ರಸತ್ತಿಗೆಯ ||
ಪಂತಿಯಾದುವು ಸಕಲ ಕುಜಮೋ |
ರಂತೆ ಫಲಗಳನಿತ್ತುವಾ ಭೂ |
ಕಾಂತೆ ಕಠಿಣವನುಳಿದು ನೆರೆ ಮೃದುವಾದಳಾಕ್ಷಣದಿ || ೧೯ ||

ತಳಿತ ಮಾವಿನ ಬನದೆಡೆಯ ಪೂ |
ದಳಿರ ಸಂಪಗೆಮರದೆಡೆಯ ಫಲ |
ದಳೆದ ಪಲಸುಗಳೆಡೆಯ ಕೋಮಲವಲ್ಲರಿಗಳೆಡೆಯ ||
ನೆಳಲೆಸೆವ ಮುಳ್ಳಿಲ್ಲದಿಹ ತಂ |
ಬುಳಿನವಟ್ಟೆಯೊಳೈದಿದರು ನಿ |
ರ್ಕುಳಿಗೊಳುತ ಚಿತ್ತದೊಳು ಸಂತೋಷಕ್ಕೆ ಪಕ್ಕಾಗಿ || ೨೦ ||

ತಂಪ ಸಾರುತ ವಿವಿಧ ಪುಷ್ಪದ |
ಕಂಪನಾಘ್ರಾಣಿಸುತ ಮಾಂದಳಿ |
ರ್ಜೊಂಪಮಂ ಕಂಗೊತ್ತಿಕೊಳುತೆ ನವೀನ ಶಾಖೆಗಳ ||
ಸೊಂಪ ನೋಡುತ ಮಧುರತಸಿರಸ |
ದಿಂಪೆಸೆವ ಪಣ್ಣುಗಳ ಸವಿಯುತ |
ದಂಪತಿಗಳೈದಿದರು ಗಿಳಿಗಳ ಮಾತನಾಲಿಸುತ || ೨೧ ||

ಪಾದ ಸೋಂಕಿದ ಭೂಮಿ ಕ್ಷೇತ್ರಗ |
ಳಾದವಾಶ್ರಯಿಸಿರ್ದ ಕುಜ ಸುರ |
ಪಾದಪಗಳಾದುವು ನಿರೀಕ್ಷಿಸಿದಖಿಳ ಮೃಗಕೆ ಗತಿ[1] ||
ಸಾಧಕಗಳಾದುವು ಸಮಸ್ತ ಖ |
ಗಾದಿಗಳು ಸುಕೃತಾನುಬಂಧಗ |
ಳಾದುವವರೈತಪ್ಪ ಪಥದೊಳಗೇನ ಬಣ್ಣಿಸುವೆ || ೨೨ ||

ಬರುತಬರುತಂ ಮುಂಗಡೆಯ ಕಂ |
ಡರು ಮಹಾ ಪಾತಾಳ ನಿಮ್ನದ |
ಪರಿಖೆಯಿಂದಟ್ಟಣೆಯ ಸಹ ಕಂಗೆಸೆವ ಕೊತ್ತಳದಿಂ ||
ತರವಿಡಿದ ಪ್ರಾಕಾರದಿಂ ಗೋ |
ಪುರದ ಶೃಂಗಾರದಿ ಮಿರುಗಿ ಗೋ |
ಚರಿಸುತಿರ್ಪ ಮಯೂರಪುರಮಂ ಪುಣ್ಯದಾಗರಮಂ || ೨೩ ||

---

೧ ತತಿಯು (ಉ.)

ಪೊಡವಿನಾರಿಯ ಮುದ್ದು ಮುಖ ಕೈ
ಪಿಡಿಯೆನಿಸಿ ಶೃಂಗಾರ ಸಾರ |
ಕ್ಕೊಡಲೆನಿಸಿ ನೋಡುವರ ನೇತ್ರಾಧಾರ ತಾನೆನಿಸಿ ||
ಇಡಿಕಿರಿದ ಸೌಭಾಗ್ಯಲಕ್ಷ್ಮಿಯು |
ತೊಡವೆನಿಪ್ಪಾ ವಾರಣಾಸಿಗೆ |
ಪಡಿಯೆನಿಸಿ ರಾಜಿಸುವ ನವಿಲೆಯ ಕಂಡರರ್ತಿಯಲಿ || ೨೪ ||

ಆನಗರ ಬಾಹ್ಯದೊಳು ಮಿರುಪ ನ |
ವೀನ ಪನಸಾಮ್ರಂ ಕದಳಿ ಸುರ |
ಧೇನುವಹ ಚೆಂದೆಂಗು ಮಾದಳ ನಿಂಬೆ ಕಿತ್ತಳೆಯುಂ ||
ಜೇನೊಗುವ ಪುಂಡ್ರೇಕ್ಷುವಡಕೆಪ್ರ |
ಸೂನ ಕೋಮಳ ವಲ್ಲಿ ಮುಖ್ಯ ಕು |
ಜಾನುಬಂಧದೊಳಿಪ್ಪ ನಂದನವನವ ನೋಡಿದರು || ೨೫ ||

ನೆಲ್ಲಿಯರೆನೇರಿಲು ಬಕುಳ ಕೆ |
ನ್ನೆಲ್ಲ ಪಾದರಿ ಪಾರಿಜಾತಂ |
ಪಲ್ಲವಿಸಿ ಪೂವಾದ ಸಂಪಿಗೆ ಸುರಗಿ ನಾರಂಗ ||
ಸಲ್ಲಲಿತ ಸೇವಂತಿ ಚಂದನ |
ಬೆಲ್ಲವಂತ ಮುಗುಳ್ವತಂಗಂ |
ಮಲ್ಲಿಗೆಗಳಿಂದೆಸೆವ ನಂದನವನವ ನೋಡಿದರು || ೨೬ ||

ಎಲೆಯ ಬಳ್ಳಿಗಳಡರಿ ರಾಜಿಪ |
ವುಲಿಯಗಸೆ ನುಗ್ಗಿಗಳು ರಸಯುತ |
ಫಲದ ಜೊಂಪಗಳಿಂದ ಜೋಲುವ ದ್ರಾಕ್ಷೆ ಖರ್ಜೂರ ||
ಜಲ ತುಳುಂಕುವ ಚಂದ್ರಕಾಂತದ |
ಶಿಲೆಯ ಸೋಪಾನದ ಜಗುಲಿಗಳ |
ಪಲವು ಸಹಕಾರಂಗಳಿಹ ನಂದನವ ನೋಡಿದರು || ೨೭ ||

ನಡೆವ ರಾಜಮರಾಳಗಳ ಮೆ |
ಲ್ನುಡಿವ ಗಿಳಿಗಳ ಮಧುರ ಫಲಮಂ |
ತುಡುಕುತಿಹ ಗೊರವಂಕಗಳ ಪೊಸ ಸೋಗೆನವಿಲುಗಳ ||
ಜಡಿವ ಚಕ್ರಂಗಳ ಚಕೋರಿಯ |
ಜಡಖಗವ ಕೊಳರ್ವಕ್ಕಿನಿಕರ |
ಕ್ಕೆಡೆಯೆನಿಸಿ ಕಂಗೆಸೆವ ಬನವಂ ನೋಡುತೈದಿದರು || ೨೮ ||



**ಸವಿಲೆಯ ಶ್ರೀ ಜಡೆಯ ಶಂಕರ ದೇವಾಲಯ**

(ಸಂಧಿ ೨, ಪದ್ಯ ೨೯-೩೦)

ಗಡಣದಿಂದಿಹ ವನವ ನೋಡುತ |
ನಡೆದು ಮುಂದಕೆ ಬರುತ ಕಂಡರು |
ಪೊಡವಿಮೊದಲಾದೇಳು ಲೋಕಂಗಳಿಗೆ ನಾಯಕನ ||
ಉಡುಪನಾದಿತ್ಯಾಗ್ನಿನೇತ್ರನ |
ಮೃಡನ ಗಿರಿಜಾವಲ್ಲಭನ ಶ್ರೀ |
ಜಡೆಯ ಶಂಕರದೇವರಾಲಯಮಂ ಮಹೋತ್ಸಹದಿ || ೨೯ ||

ಪೊಂಗಳಸ ಬಹು ಚಿತ್ರಕೀರ್ತಿ ಮು |
ಖಂಗಳಿಂದಿಹ ಚಿತ್ರ[೧] ತೋರಣ |
ರಂಗಮಂಟಪ ವಿವಿಧ ಪಂಚಾವರಣಪ್ರಾಕಾರ ||
ಮುಂಗಡೆಯ ನವನೆಲೆಯ ಗೋಪುರ |
ಪುಂಗವಧ್ವಜ ಗುಡಿಗಳಿಂದಂ |
ಕಂಗೊಳಿಪ ಶಿವಭವನವಂ ನಲವಿಂದ ನೋಡಿದರು || ೩೦ ||

ನಾರಿದರು ಶಿವನಿಳಯಮಂ ರವಿ |
ಸಾರಿದಂ ಪಡುಗಡಲಿಗಾಕ್ಷಣ |
ನೀರಜಗಳಳಿಗೂಡಿ ಮುಗಿದುವು ನೈದಿಲರಳಿದುವು ||
ಧಾರುಣಿಯ ಕತ್ತಲೆಯ ಮುಸುಕಿತು |
ತಾರಕಾವಳಿ ಬೆಳಗೆ ತೆಂಕಣ |
ಮಾರುತಂ ತೀಡಿದುದು ಮೆಲ್ಲನೆ ಕಂಪುತಂಪಡರಿ || ೩೧ ||

ಮೂಡಿದುದು ಪೂರ್ಣೇಂದು ಧರೆಯೊಳು |
ರೂಢಿಸಿತು ತಿಳಿಜೊನ್ನ ಪೆರ್ಚುಗೆ |
ಗೂಡಿದುದು ಪಾಲ್ಗಡಲಗಲಿದುವು ಚಕ್ರಮಿಥುನಗಳು ||
ಕೂಡಿದುವು ಸುಚಕೋರದಂಪತಿ |
ಗೂಡುಗೊಂಡುವು ಖಗಮೃಗಂಗಗಳು |
ಗಾಡದಲಿ ಕಂಗೆಡ್ಡಮಾದುದು ರಾತ್ರಿಯಾಕಾರ || ೩೨ ||

ಭವನದೊಳು ದೀವಿಗೆಗಳೆಸೆದುವು |
ಭವಿಸಿದುದು ಮಿಗೆ ತುಹಿನ ಜಾರಾ |
ನಿವಹ ಸಂಚರಿಸಿದುದು ಪಕ್ಕಿಗಳುಲುಹು ಪಿಂಗಿದುವು ||
ತವೆಯೊಸರಿದುದು ಚಂದ್ರಕಾಂತಂ |
ಧವವಿರಹದಿಂ ವಿಪ್ರಯೋಗದ |
ಯುವತಿಯರು ಪೊರಳಿದರು ರಾತ್ರಿಯ ಸಿರಿ ವಿರಾಜಿಸಿತು || ೩೩ ||

---

೧ ಶಿಖರ (ಇ, ಉ.)

ಆ ಸಮಯದೊಳು ಜಡೆಯ ಶಂಕರ |
ವಾಸದೊಳು ಮೊಳಗಿದುವು ದುಂಧುಭಿ |
ಯಾಸರದಿ ಪೆರ್ಗಹಳೆಯೊರಲಿದುವಾಗ ಪಡಿಯರರು ||
ಘೋಷದಿಂ ಗಜರುತ್ತೆ ಭೋಗದ |
ವೇಸಿಯರ ಕರೆಯಲ್ಕೆ ಬೇಗದೊ |
ಳಾಸತಿಯರೊದಗಿದರು ದೇವನ ಸೇವೆಯುಜ್ಜುಗಕೆ || ೩೪ ||

ಜಾಣರಂ ಬೀಳ್ಕೊಟ್ಟು ಬಾಜಿಪ |
ವೀಣೆಗಳ ಕೆಲಕಿರಿಸಿ ಸವಿನಯ[1] |
ವಾಣಿಗಿಳಿ[2] ಪಂಜರವ ಪೊಗಿಸಿ ನವಿಲುಯ್ಯಲೆಯನಿಳಿದು ||
ವಾಣಿಯಿಂದೋದುವ ಕಕೋಕವ |
ಕೋಣೆಯೊಳಗೊಯ್ದಿಟ್ಟು ಬೇಗ ಪ್ರ |
ವೀಣೆಯರು ಸಿಂಗರಿಸಿ ನಡೆದರು ಶಿವಭವನಕೊಲಿದು || ೩೫ ||

ನಿಡು ಮುಡಿಯ ಪೆರೆನೊಸಲ ಮರಿಯಾ |
ರಡಿಗುರುಳ ಮುರಿದೆಸೆವ ಪುರ್ಬಿನ |
ಕುಡಿತೆಗಂಗಳ ಸಂಪಿಗೆಯ ಮುಗುಳೆನಿಪ ನಾಸಿಕದ ||
ತಡಿಯೊಳೊಪ್ಪಂಬೆತ್ತೆಸೆವ ಕ |
ನ್ನಡಿಗದಪುಗಳ ತೊಂಡೆವಾಯ್ಗಳ |
ಮಡದಿಯರು ನಡೆದರು ಮನೋಜನ ಸೇನೆ ನಡೆದಂತೆ || ೩೬ ||

ಕಂಬು ಕಂಠದ ಲಸಿತ ತೋಳ್ಗಳ |
ಕುಂಭಕುಚಗಳ ಭಾವವಡೆದ ನಿ |
ತಂಬನದ ಬಡಬಾಸೆಯೊಂದಿದ ತೆಳುವಸುರ ತ್ರಿವಳಿ ||
ಇಂಬೆನಿಪ ಸುಳಿನಾಭಿ ಪಿಡಿನಡು |
ಪೊಂಬರಹದೆಳೆವಾಳೆದೊಡೆಗಳ |
ತುಂಬಿಗುರುಳಿನ ಮೆಲ್ಲಡಿಯ ಸೊಬಗಿಯರುಯ್ದೈದಿದರು || ೩೭ ||

ಕೀರಣೆಯ ಕಟಿಸೂತ್ರ ಪೊನ್ಮುಡಿ |
ದಾರ ಕಾಂಚಿಯ ದಾಮ ನವಮಣಿ |
ಹಾರ ಕುಶಲದ ಗೌಳಸರಗಳ ರವೆಯ ಕಂಕಣದ ||
ತೋರಮುತ್ತಿನ ಕಂಠಮಾಲೆಗ |
ಳೋರಣದ ಪೊಂದೋಳಬಂದಿಯ |
ನಾರಿಯರು ನಡೆತಂದರಾ ಜಗದೀಶನೋಲಗಕೆ[3] || ೩೮ ||

---

೧ ನುಡಿಸುವ (ಇ, ಉ.) ೨ ಗಿಣಿಗಳಂ (ಇ, ಉ.) ೩ ನಾಲಯಕೆ (ಇ, ಉ.)

ಪಟ್ಟಚಂದ್ರಿಕೆ ಸಾರಿಯುಂಬೆ |
ಳ್ಮಟ್ಟಸಂಪಿಗೆಗಾವಿ ಕಂಗಳ |
ವಟ್ಟ ಪೊಪ್ಪುಳಿಬಂಣಗೆರೆಕಡಿತಾಸನಂ ಸಾರಿ ||
ಘಟ್ಟಣೆಯ ಕೈಬರಹ ವಸ್ತ್ರವ |
ನುಟ್ಟು ಮೇಲುದ ಪೊತ್ತು ಮೇಲ್ಮುಸು |
ಕಿಟ್ಟು ಬಂದರು ಸ್ಮರನ ಮಂಗಳ ಗುಡಿಗಳೆಂತಂತೆ || ೩೯ ||

ಸರಸಿಜದ ಕನ್ನಡಿಯ ಚಂದ್ರನ |
ಪರಿಯೆನಿಪ ಮುಖ ತುಂಬಿ ಶಿಖಿ ಕಾ |
ಳುರುಗನಂತಿಹ ಕೇಶವೆಳವೆರೆ ತೊಂಡೆವಣ್ಬಾವಳ ||
ದಿರವೆನಿಪ ಚೆಂದುಟಿಯ ಚಕ್ರವ |
ಕರಿಯ ತಾವರೆ ಮುಗುಳ ನಗುತಿ೧ |
ಪ್ಪುರಸಿಜದ ಸಿರಿವೆಂಡಿಯರು ನಡೆತಂದರಾಕ್ಷಣದಿ || ೪೦ ||

ಎದೆಯೊಳಿರ್ದನುರಾಗವೇ ಶ್ರೀ |
ವದನಕೈತಂದಂತೆ ಮಾಂದ್ಯವೆ೨ |
ಪದವ ಸಾರ್ದೊಲು ಕುಟಿಲವೇ ಕುಂತಳಕೆ ಬಂದಂತೆ ||
ಮು೩ದವೆ ಮೈಗಿಳಿದಂತೆ ಸಂಚಲ |
ದೊದವೆ ನೇತ್ರವನಾಶ್ರಯಿಸಿದೊಲು |
ಚದುರೆಯರು ನಡೆತಂದರೀಶ್ವರ ಮಂದಿರಕ್ಕೊಲಿದು || ೪೧ ||

ಬೇಟದ ಬೆಡಂಗಿಯರು ಮೋಹನ |
ದಾಟದಾಪಾಂಗಿಯರು ವಿವಿಧಾ |
ಘಾಟದೊಳುನುಡಿಯುವರು ಭಾವವನರಿವ ಚದುರೆಯರು ||
ನೋಟದೊಳು ರಂಜಿಪರು ಸೊಬಗಿನ |
ತೋಟಿಗಾಸರದಿಹರು ಹೊಸಕ |
ದಾಟಕಾರ್ತಿಯರೈದಿದರು ಶಂಕರನ ಭವನಕ್ಕೆ || ೪೨ ||

ತೋರ ಮೋಲೆಯೊಳು ಬಳಿದ ಕುಂಕುಮ |
ಸಾರಗಂಧದ ಕೊಂಕುಳೊಳು ಕ |
ಸ್ತೂರಿಲೇಪದ ಕರ್ಣದೊಳು ತೀವಿದ ಜವಾದಿಗಳ ||
ತೋರಕಮ್ಮಲರ್ವಿಡಿದ ಮುಡಿ ಕ |
ರ್ಪೂರ ವೀಳ್ಯೆಯದಿನಿರಸದ ನಸು |
ಚಾ೪ರಣೆಯ ಚೆಂದಳಿದುರ್ಟಿಯುರುಂ೫ ಬಂದರೋಲಗಕೆ || ೪೩ ||

---

೧ ಮುಗುಳಿನಂತಿ (ಉ.) ೨ ದಳಿರ್ (ಉ.) ೩ ಮು: (ಇ, ಉ.) ೪ ಸಾ (ಎ.)
೫ ಚೆಂಬವಳದುಟಿಯುರು (ಇ, ಉ.)

ನಡೆಯ ನಟನೆಯೊಳಿನಿ೧ಬರಂ ಕಂ |
ಗಡೆಯ ನೋಟದೊಳಿನಿ೧ಬರಂ ಮೊಲೆ |
ಯೆಡೆಯ ತೋರಿಸಿಯಿನಿ೧ಬರಂ ನಸುನಗೆಯೊಳುರೆ ವಿಟರ ||
ಕೆಡಹಿಕೊಳುತಂ ಕಾಲಸರಪಳಿ |
ಕಡೆಯದುಲುಪಿಂ ಬಂದು ನಿಂದರು |
ಜಡೆಯ ಶಂಕರ ದೇವನಿಕ್ಕೆಲದೊಳಗೆ ನಾರಿಯರು || ೪೪ ||

ಚಂಚಲಾಕ್ಷಿಯ ತೊಳಪ ಕದಪಿನ |
ಮಿಂಚು ಮಾಣಿಕಕರ್ಣಪೂರದು |
ದಂಚಿನೊಬ್ಬುಳಿವೆಳಗು ನುಣ್ದೋಳುಗಳ ನರುವಣ್ಣ ||
ಮುಂಚಿ ಮುಪ್ಪುರಿಯಾಗಿ ಪಸರಿಸಿ |
ಸಂಚರಿಸಿದುದು ದೇವಸದನದಿ |
ಪಂಚಮುಖನಂಗಪ್ರಭಾಪರಿಪೂರ್ಣಮಾದಂತೆ || ೪೫ ||

ಕೆಲರು ಚಾಮರವಾಲವಟ್ಟವ |
ಕೆಲರು ಹಡಪ ಕಟಾರಿ ಡವಕೆಯ |
ಕೆಲರು ಕುಂಭಾರತಿಯ ಕೆಲಬರು ಮಂಗಳಾರತಿಯ ||
ಕೆಲರು ಮುದ್ದಳೆಯಾವುಜಂಗಳ |
ಕೆಲರು ತಾಳವ ಕೆಲರು ದಂಡಿಗೆ |
ಗಳ ಕೆಲರು ಬಹುತಂತಿವಾದ್ಯವನಾಂತರಾ ಕ್ಷಣದಿ || ೪೬ ||

ಬಟ್ಟಮುತ್ತುಗಳಿಂ ಬಿಗಿದ ಮೊಲೆ |
ಕಟ್ಟನಮರಿಸಿ ಚಿತ್ರಮಯ ಪೊಂ |
ಬಟ್ಟೆಯಿಂ ಕೈಗೈದು ರಾಜಿತಮಾದ ಕಾಶೆಗಳ ||
ನುಟ್ಟು ಬಿರಿದಿನ ಕಡೆಯ ಸರಪಳಿ |
ಯಿಟ್ಟು ಡಿಂಡಿಮರವದೆ ವೈರಿಘ |
ರಟ್ಟಪಾತ್ರದ ಸತಿಯರಾಯತವಾದರೋಲಗಕೆ೨ || ೪೭ ||

ಸಾಗಿ ಸಂದಣಿ ಬೇಡ ಸೇರುವೆ |
ಯಾಗಿ ನಿಲಿ ಸಮ್ಮುಖವ ಬಿಡಿ ನೆರೆ |
ಕೂಗಿ ಮಾತಾಡದಿರಿಯೊಬ್ಬರನೊಬ್ಬರುಲಿಯದಿರಿ ||
ಹೋಗಬೇಡಲ್ಲಲ್ಲಿಯಾಯತ |
ವಾಗಿ ಬೇಗದಿ ದೇವನೊರ ತಾ |
ನಾಳಿಗುತಿದೆಯೆಂದೊದರಿದರು ಪಡಿಯರರು ಪರುಟವಿಸಿ || ೪೮ ||

---

೧ ರೆ (ಉ, ಎ.) ೨ ರೋಲವಿಂದೆ (ಇ, ಉ, ಎ.) ೩ ದೇವನವಸರ । ವಾ (ಇ, ಉ.)

ಪಿರಿದು ಪೂಜೆಯ ಮಾಡಿ ಬಾಗಿಲ |
ತೆರೆಯ ತೆಗೆಯೆ ವಿರಾಜಿಸಿದ ಶ್ರೀ |
ಕರ ಸದಾಶಿವ ಸರ್ವಗತ ಖಂಡೇಂದುಯುತಮಕುಟ ||
ಉರಗಭೂಷಣನಪ್ರತಿಮ ಮಾ |
ವರನಮಿತಪಾದಾಬ್ಜ ಮನ್ಮಥ |
ಹರ ಚತುರ್ಮುಖಶಿರಕರಂ ಶ್ರೀ ಜಡೆಯ ಶಂಕರನು || ೪೯ ||

ಝುಗಝುಗಿಪ ತೋರಣದ ಮಣಿಗಣ |
ಬಿಗಿದ ತೊಳಪ ಪ್ರಭಾವಕಾಂತಿಯ |
ನುಗುಳುತಿಹ ನಕ್ಷತ್ರಮಾಲೆಯ ಫಣಿಯ ಸತ್ತಿಗೆಯ ||
ಪೊಗರೊಗುವ ಪೊಂಗಂಭದೊಳು ದೀ |
ವಿಗೆಯ ಸಾಲ್ಗಳ ರನ್ನವೆಳಗಿಂ |
ಮಿಗೆ ಮೆರೆಯುತಾ ಜಡೆಯ ಶಂಕರದೇವನೆಸೆದಿರ್ದ || ೫೦ ||

ಪಾದರಿಯ ವನಸಂಪಗೆಯ ಪೊಂ |
ಗೇದಗಿಯ ಪಡ್ಡಳಿಯ ಸುರಗಿಯ |
ಮಾಧವಿಯ ಮಲ್ಲಿಗೆಯ ಮೊಲ್ಲೆಯ ನಾಗಕೇಸರದ |
ಮೂದೆರದ ತಾವರೆಯ ಜಾಜಿಯ |
ನೈದಿಲಿರವಂತಿಗೆಯ ಬಂದುಗೆ |
ಯಾದಿಯಾದ ಸಮಸ್ತ ಪೂಜೆಯೊಳೆಸೆದನಾ ಶಿವನು || ೫೧ ||

ರಾಜಿಸುವ ಖಂಡಣೆಯ ಚಿತ್ರದ |
ಪೂಜೆ ಬಾಳಿಯ ಮಂಟಪಂಗಳ |
ಪೂಜೆ ಮರುಗದ ಬಿಲ್ವಪತ್ರದ ಪರ್ಣತೆತ್ತಿಸಿದ ||
ಪೂಜೆ ತಂಡುಲದಿಂದೆ ರಚಿಸಿದ |
ಪೂಜೆ ವಸ್ತ್ರದ ಪೂಜೆ ರನ್ನದ |
ಪೂಜೆಯಿಂ ಕಂಗೊಪ್ಪುವಡೆದಂ ಜಡೆಯ ಶಂಕರನು || ೫೨ ||

ಊಳಿದುವು ಪೇರ್ಗಹಳೆಗಳು ನಿ |
ಸ್ಸಾಳ ದುಂದುಭಿ ಮೊಳಗೆ ಪೆರ್ಬರೆ[1] |
ಸೂಳಯಿಸಿದುವು ಘಂಟೆ ಜಯಘಂಟೆಗಳುಲಿದವಾಗ ||
ಡೊಳ್ಳು ಮೌರಿಯುಮೊದರಿದುವು ಕಂ |
ಸಾಳ ಕರಡಿ ಮೃದಂಗ ಶಂಖಗ |
ಳೂಳಿದುವು ಶಂಕರನ ಸಮ್ಮುಖದೊಳಗೆ ಘೂರ್ಮಿಸುತ || ೫೩ ||

---

೧ ಭೋರ್ಗರೆ (ಇ.)

ಕಿರಣೆಯ ಬೆಳಗೆಸೆವ ಮಾಣಿಕ |
ದಾರತಿಯ ಕಟ್ಟಾಣಿ ಮೌಕ್ತಿಕ |
ದಾರತಿಯ ಸಾಂಬ್ರಾಣಿಯಹ ಪೊಸಪವಳವಲ್ಲರಿಯ ||
ಆರತಿಯ ಪಳುವಚ್ಚಿಕರ್ಪೂರ |
ದಾರತಿಯ ದೀಪಪ್ರಬಲ ಪೊ |
ನ್ನಾರತಿಯ ಧೂಪಾರತಿಯನೆತ್ತಿದರು ಶಂಕರಗೆ || ೫೪ ||

ಸತಿಯರೊಲವಿಂ ಪೂರ್ಣಕುಂಭಾ |
ರತಿಯನೆತ್ತಿದರಾಕ್ಷಣದಿ ಪ |
ದ್ಧತಿವಿಡಿದು ವಿಂಗೆ ತಾಳ ದಂಡಿಗೆ ವೇಣು ಮದ್ದಳೆಯ ||
ಶೃತಿಸಹಿತ ಮಂಗಳಪದನ ಪಾ |
ಡುತ ಸುವರ್ಣದ ತಟ್ಟೆಯೊಳಗಾ |
ರತಿಯನಭಿನಯ ಸಹಿತಲೆತ್ತಿದರಿಂದುವದನೆಯರು || ೫೫ ||

ಮಂಗಳಂ ಶ್ರೀಗೌರಿಯರಸಗೆ |
ಮಂಗಳಂ ತ್ರಿಜಗಾಧಿನಾಥಗೆ |
ಮಂಗಳಂ ಫಣಿದೊಡಗೆ ಪಾಪಾಂತಕಗೆ ಪವಿಧರಗೆ ||
ಮಂಗಳಂ ದೇವೇಂದ್ರನಮಿತಗೆ |
ಮಂಗಳಂ ಭಾಳಾಗ್ನಿನೇತ್ರಗೆ |
ಮಂಗಳಂ ಹರಿಯಜರರಸಿ ಕಾಣದ ಮಹಾತ್ಮಂಗೆ || ೫೬ ||

ಮಂಗಳಂ ಮನ್ಮಥಘರಟ್ಟಗೆ |
ಮಂಗಳಂ ತ್ರಿಪುರಾಸುರಾರಿಗೆ |
ಮಂಗಳಂ ಗಜದನುಜಪುಷ್ಕರಘೋರಮಾರುತಗೆ ||
ಮಂಗಳಂ ಭವವಿಪಿನದಾವಗೆ |
ಮಂಗಳಂ ವ್ಯಾಘ್ರಾಸುರಾರಿಗೆ |
ಮಂಗಳಂ ಋಣರೋಗದಾರಿದ್ರಾದ್ರಿಕುಲಿಶಂಗೆ || ೫೭ ||

ಮಂಗಳಂ ಗಂಗಾಕಿರೀಟಗೆ |
ಮಂಗಳಂ ಸರ್ವಜ್ಞಮೂರ್ತಿಗೆ |
ಮಂಗಳಂ ನವಿಲೆಯ ಪುರಾಧಿಪ ಜಡೆಯ ಶಂಕರಗೆ ||
ಮಂಗಳಂ ಮಂಗಳವೆನುತ ಲಲಿ |
ತಾಂಗಿಯರು ಸೊಬಗಿಂದಲಾಡುತ |
ಮಂಗಳಾರತಿಯೆತ್ತಿದರು ಸದ್ಭಕ್ತಿಭಾವದೊಳು || ೫೮ ||

ತ್ರಿಣಯು ಶಂಕರದೇವಗಾರೋ |
ಗಣೆಯ ವೇಳೆಯಿದೆನುತ ಯುವತೀ |
ಗಣವನೊತ್ತರಿಸಿದರು ಕಟ್ಟೆಗೆಯವರು ಪೊಯಿ ಪೊಯಿದು ||
ಗಣಿಸಲಳವೇ ಕಾಂಚನದ ಪರಿ |
ಯಣಗಳೊಳು ಬಡಿಸಿದರು ಸವಿಯಾ |
ಗ್ರಣಿಗಳಹ ಷಡುರುಚಿಗೆ ಪಕ್ಕಾಗಿಹ ಪದಾರ್ಥಗಳ || ೫೯ ||

ಹಲವು ತಾಳಿಲ ಕೊನಬು ಪಚ್ಚಡಿ |
ಕಲಸಿದವು ಬಹಳುಪ್ಪುಗಾಯಂ |
ಬಲಿರಸಾಯನ ಪಂಚಭಕ್ಷವ ಘೃತವಮ್ಮೃತಸಾರ ||
ಪಲತೆರದ ಪಾಯಸ ಕಷಾಯಂ |
ಪಲ ಫಳಂ ದಧಿ ತಕ್ರ ಚಿಲುಪಾಲ್ |
ನೆಲದಿ ಪೊಸ ಸಕ್ಕರೆಯ ಬಡಿಸಿದರೀಶಗೊಲವಿಂದೆ || ೬೦ ||

ಖಂಡಪರಶುವಿಗಕ್ಕರಿಂದೆ |
ಳ್ಖಂಡೆಯುಶನಂ ಪೂಪ ಹಪ್ಪಳ |
ಸಂಡಗೆಯ ಬಾಳುಕಗಳಂ ಕಲಸೋಗರಂಗಳನು ||
ತಂಡತಂಡದೊಳಿಟ್ಟು ಸವಿಯು ಕ |
ರಂಡವಹ ನೈವೇದ್ಯಮಂ ಮಾ |
ರ್ತಂಡಕೋಟಿಪ್ರಭೆಯ ಬೆಳಗುವಗರ್ಪಿಸಿದರೊಲಿದು || ೬೧ ||

ಕಾರಣಾಗಮ ಪೇಳ್ವ ಮಂತ್ರೋ |
ದ್ಧಾರಣೆಯೊಳರ್ಪಿಸಿ ವಿಮಳ ಪ |
ನ್ನೀರ ನೈವಾಳಿಸಿ ಸುವರ್ಣದ ತಗಡಿನಂತೆಸೆವ ||
ಚಾರುವರ್ಣದ ಮಾಣಿಕಂಗಳಿ |
ಗೋರಗೆಯ ಕ್ರಮುಕಂಗಳಂ ಕ |
ರ್ಪೂರ ವೀಳ್ಯೆಯುಮಂ ಸಮರ್ಪಿಸಿದರು ಮಹೇಶಂಗೆ || ೬೨ ||

ತೆರೆಯು ತೆಗೆಯಲೊಡಂ ಮಹಾ ಭೂ |
ಸುರರು ಜಯ ಜಯತೆಂದು ಪೊಗಳಲು |
ಪುರಜನಂ ಮಿಗೆ ದೀರ್ಘದಂಡನಮಸ್ಕರವ ಮಾಡಿ ||
ಪುರಮಥನ ಪಾಪಾಂತಕಂ ಶಂ |
ಕರನೆ ಶಿವ ಶಿವ ತ್ರಾಹಿಯೆನುತಿ |
ರ್ದರು [1]ಸ್ತುತಿಸಿದರು ಭಕ್ತಿಪ್ರೇಮದೊಳಾಗ ಸೂಳೆಯರು[1] || ೬೩ ||

---

೧ ಸುವಾದ್ಯಂ ಸೂಳಯಿಸಿದುವು ದೇವನಿದಿರೊಳಗೆ (ಇ, ಉ.)

ತಾಳ ಮದ್ದಳೆಯಾವುಜಂ ಶ್ರುತಿ |
ಗಾಳೆ ದಂಡಿಗೆಯರುಮೆ ವೀಣೆಯ |
ತಾಳಿ ನಿಂದರು ಶ್ರುತಿಯನಾರೈವುತ ಲತಾಂಗಿಯರು ||
ಮೇಳ ಕಂಗೆಸೆದಿತ್ತು ಗಾಡಿಯ |
ಹಾಳವಿಸುತಲಿ ಪಾತ್ರದವರು ಚ |
ಢಾಳಿಸುತೆ ನಿಂದರು ವಿಲಾಸದಿ ರಂಗಮಂಟಪದಿ || ೬೪ ||

ಹರುಷದಿಂ ಪಾಡಿದರು ರಾಗಗ |
ಳರವರಿದು ಗಾನೆಯರು ಶಬ್ದದ |
ಸರಣಿ ಮಿಗಿಲುಗ್ಗಡಿಸಿದರು ತಾಳದ ಲತಾಂಗಿಯರು ||
ಪಿರಿದು ಬಾರಿಸಿ ತೋರಿದರು ಮೋ |
ಹರಗಳನು ಮರ್ದಳೆಯವರು ಬಂ |
ದರರೆ ನಿಂದರು ಮಂಡಲಂಗಳ ರಾಯಪಾತ್ರಗಳು || ೬೫ ||

ಚಾರು ಪುಷ್ಪಾಂಜಲಿಯ ಮಿಗೆ ವೊಗ |
ಚಾರು ಶಬ್ದದ ಭೇದವಂ ವೈ |
ಯ್ಯಾರದಿಂ ಗೀತಪ್ರಬಂಧವ ಚಿಂದು ಜಕ್ಕಡಿಯ ||
ಪೇರಣೆಯವಜ್ಜಡದುವಾಡದ೧ |
ನೇರು ಕಟ್ಟಣೆ ತಿರುಪುಗುಗಳಾ |
ನಾರಿಯರು ನಯವಾಗಿ ಕೊಂಡರು ಲಕ್ಷ ಲಕ್ಷಣದಿ || ೬೬ ||

ನಟ್ಟ ಸಂತೋಷದಲವರ ಪೊರೆ |
ಯಿಟ್ಟು ನಿಲಿಸಿಯೆ ಕರುಣೆ ಮಿಗೆ ಪೊಂ |
ಬಟ್ಟಲೊಳು ತಾಂಬೂಲ ಮುಖ ಗಂಧ ಪ್ರಸಾದವನು ||
ಕೊಟ್ಟು ಮನ್ನಿಸಿ ಸರ್ವರಂ ಬೀ |
ಳ್ಕೊಟ್ಟರಾಸ್ಥಾನೀಕರೀಶ್ವರ |
ಪಟ್ಟವರ್ಧನ ಜಡೆಯ ಶಂಕರದೇವ ಪವಡಿಸಿದ || ೬೭ ||

ನೋಡಿದಂ ಗೋವಿಂದರಸನೆವೆ |
ಯಾಡದೀಶ್ವರ ಮೂರ್ತಿಯಂ ಮುಳಿ |
ಗಾಡಿದಂ ಸದ್ಭಕ್ತಿಗಡಲೊಳು ಸ್ವಾನುಭಾವದೊಳು ||
ಪಾಡಳಿದುದಂಗಂ ಸುಚಿತ್ತದ |
ಗಾಡಿ ಪಲ್ಲವಿಸಿದುದು ಸಾತ್ವಿಕ |
ಮೂಡಿದುದು ಮನದೊಳಗೆ ತೂಳದ ಜುಮ್ಮು ಪಸರಿಸಿತು || ೬೮ ||

---

೧ ವಾಡುವ (ಇ, ಉ.)

ಜಡೆಯ ಶಂಕರ ದೇವನಂ |
ಮನದೆಡೆಯೊಳಿರಿಸಿದ ಪೆಂಪಿನಿಂ ಮೈ |
ನಡುಗುತಂ ರೋಮಾಂಚನಂ ಬಾಷ್ಪಾಂಬುವಟ್ಟೆಯೊಳು ||
ಒಡಲು ಮರೆದು ಸಮೀಪದೊಳಗಿಹ |
ಮಡದಿಯಂ ಲೆಕ್ಕಿಸದೆ ಜ್ಞಾನದ |
ನಡುವೆ ಚಿತ್ತವನಿಲಿ೧ಸಿ ಕಂಗೆಸೆದಿರ್ದನಾ ಶರಣ || ೬೯ ||

ನೆನೆದ ಕಾರ್ಯಂ ಸಿದ್ಧಿಸಲಿ ಯೌ |
ವನಮದಾಗಲಿ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿ ಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನ ಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೭೦ ||

**ಅಂತು ಸಂಧಿ ೨ಕ್ಕಂ ಪದ ೧೨೭ಕ್ಕಂ ಮಂಗಳಂ**



---

೧ ರಿ (ಇ, ಉ.)

೩ನೆಯ ಸಂಧಿ

# ಗೋವಿಂದಭಟ್ಟನಿಗೆ ಜಡೆಯ ಶಂಕರನು ವೀರಶೈವವನ್ನು ಬೋಧಿಸಿದ್ದು

**ಸೂಚನೆ**

ಸಾರಗುಣಸಂಪನ್ನ ವೇದೋ |
ಧ್ಧಾರನಹ ಗೋವಿಂದದೇವಗೆ |
ವೀರಶೈವವ ಬೋಧಿಸಿದನಾ ಜಡೆಯ ಶಂಕರನು ||

ಧರೆಯೆ ರಥ ಸೂರ್ಯೇಂದು ಗಾಲಿಗ |
ಳುರಗಪತಿ ಹೆದೆ ಮೇರು ಕಾರ್ಮುಕ |
ಮುರಮಥನ ಶರ ಕಮಲಭವ ಸಾರಥಿ ತುರಗ ವೇದ ||
ಸುರರು ಪಶುವಾಗಲ್ಕೆ ಸಾಕ್ಷಾ |
ತ್ಕರಿಸಿ ಪಶುಪತಿಯಾಗಿ ತ್ರಿಪುರವ |
ನುರುಪಿ ತ್ರಿಜಗಂಗಳ ಸಲಹಿದೀಶ್ವರಗೆ ವಂದಿಸುವೆ || ೧ ||

ಮೂಡ ಕೆಂಪೇರಿದುದು ಕತ್ತಲೆ |
ಯೋಡಿದುದು ತಂಬೆಲರು ಮೆಲ್ಲನೆ |
ತೀಡಿದುದು ಮರೆಸಿದುವು ತಾರಾನಿಕರ ಚಂದ್ರಮನ ||
ಗಾಡಿ ಕೆಟ್ಟುದು ನೈದಿಲೆಯ ಮುಖ |
ಬಾಡಿದುವು ತಾವರೆಗಳೊಳಗಳಿ |
ಪಾಡಿದುವು ಮುಸುಳಿಸಿತು ಜೊನ್ನ ಚಕೋರಿಯುಗಲಿದುವು || ೨ ||

ಜಾರಿದುದು ಶೈತ್ಯಂ ಖಗಂಗಳು |
ಪಾರಿದುವು ನಾಲ್ದೆಸೆಗೆ ತನಿರಸ |
ವಾರಿದುವು ಶಶಿಕಾಂತ ನಲಿದುವು ಚಕ್ರವಾಕಗಳು ||
ಮೀರಿದುದು ಬೆಳವೆಳಗು ಕಿರಣವ |
ಕಾರುತುಂ ಪೂರ್ವಾದ್ರಿಶಿಖರವ |
ನೇರಿ ರವಿ ಮೆರೆದಂ ಶಚಿಯ ಸೀಮಂತಮಣಿಯಂತೆ || ೩ ||

ಏಳು ಬೆಳಗಾಯ್ತೆಂದು ವಲ್ಲಭೆ |
ಕೇಳಲಾ ಗೋವಿಂದದೇವಂ |
ಪೇಳಿದಂ ಬಾಲೆಯೊಳು ತನ್ನಯ ಮನಸಿನುಜ್ಜುಗವ ||
ಏ[1]ಳಲೇತಕೆ ಜಡೆಯ ಶಂಕರ |
ನಾಳಹೆನು ನನಗೀತನೇ ಗತಿ |
ಜಾಳುದೈವದ ಹಂಗನೊಲ್ಲೆನು ನನಗಿದೇ ಶಪಥಂ || ೪ ||

ಹಿಂದೆ ಮಾಡಿದ ಸುಕೃತವೇ ಕರೆ |
ತಂದುದಿಲ್ಲಿಗೆ ನನ್ನ ಪುಣ್ಯವೆ |
ಬಂದು ಸಮ್ಮುಖದೊಳಗೆ ಕಾಣಸಿತೆನ್ನ ಜೀವನವೇ ||
ಬಂದುದೀಶ್ವರರೂಪಮಂ ತಳೆ |
ದಂಧಕಗೆ ಮಿಗೆ ದಿವ್ಯಲೋಚನ |
ಬಂದ ಪರಿಯಾಯ್ತೆನುತ ನಿರ್ಝಳಿಯೊದಗಿ ಮನದೊಳಗೆ || ೫ ||

ಕಾಸಿನಾರ್ಜನೆಗೈದುತಂ ಧನ |
ರಾಶಿಯಂ ಕಂಡಂತೆಯಂಬಲಿ |
ಯಾಸೆಯೊಳು ತೊಳಲುತ್ತೆ ಮೃಷ್ಟಾನ್ನವನು ಪಡೆದಂತೆ ||
ಮಾಸಿದೆಣ್ಣೆಯುಮಣಿಯುರಸುತ ಸು |
ಭೂಷಣವ ಗಳಿಸಿದೊಲು ನಾನೆಲೆ[2] |
ದೇಶಚಾರನಿಮಿತ್ಯ ಕಂಡೆನು[3] ಜಡೆಯ ಶಂಕರನ || ೬ ||

ಈತನೇ ನನಗಿಷ್ಟದೈವಂ |
ಈತನೇ ಪ್ರಾಣಾಧಿನಾಥಂ |
ಈತನೇ ಕಾಮ್ಯಾರ್ಥಮೋಕ್ಷಾರ್ಥಕ್ಕೆ ಸಾಧಕನು ||
ಈತನೇ ಚತುರ್ವಿಧ ಪದವ ಕೊಡು |
ವಾತನೀತನ ಪಾದವಲ್ಲದೆ |
ಖಾತೆ ಮಾಡೆನುವುಳಿದ ದೈವವ[4]ನೆಂದನಾ ಶರಣ || ೭ ||

ಈತನೇ ಗತಿಯೀತನೇ ಮತಿ |
ಈತನೇ ಪರವೀತನೇ ವರ |
ವೀತನೇ ಕುಲದೈವವೀತನೆಯೆನಗೆ ಮನೆದೈವಂ ||
ಈತನೇ ಗುರುವೀತನೇ ಘನ |
ವೀತನೇ ಧನವೀತನೇ ಮನ |
ವೀತನೇ ಮದ್ಭ್ರಾತನೀತನೆಯೆನ್ನ ಪಡೆದಾತ || ೮ ||

---

೧ ಹೇ (ಅ, ಎ.) ೨ ಕಂಡಂತೆ ನಾನತಿ (ಇ, ಉ.) ೩ ಗಳಿಸಿದೆ (ಇ, ಉ.) ೪ ನಾನುಳಿದವರ (ಇ, ಉ.)

ಎನ್ನ ದಾತ್ರಂ ಎನ್ನ ನೇತ್ರಂ |
ಎನ್ನ ಗಣ್ಯಂ ಎನ್ನ ಪುಣ್ಯಂ |
ಎನ್ನ ಗಂಡಂ ಎನ್ನ ಭವರುಜೆತಿಮಿರಮಾರ್ತಂಡಂ ||
ಎನ್ನ ರಾಗಂ ಎನ್ನ ಭೋಗಂ |
ಎನ್ನ ಗತ್ವಂ ಎನ್ನ ಸತ್ವಂ |
ಎನ್ನ ಜೀವಂ ಎನ್ನ ಭಾವಂ ಜಡೆಯ ಶಂಕರನು || ೯ ||

ಎನಗಿದೇ ಘನ ವಾರಣಾಸಿಯು |
ಎನಗಿದೇ ಯಮುನಾಪ್ರಯಾಗವು |
ಎನಗಿದೇ ಸರಸತಿ ಜಗುನೆ ಜಾಹ್ನವಿ ಭಗೀರಥಿಯು ||
ಎನಗಿದೇ ಹೈಮವತಿ ಫಲ್ಗುಣೆ |
ಎನಗಿದೇ ನಿಜ ತುಂಗಭದ್ರೆಯು |
ಎನಗಿದೇ ಕಾವೇರಿ ಕಪಿಲೆಯುಮೆಂದನಾ ಶರಣ || ೧೦ ||

ಎನಗಿವನ ಸಾಮಿಪ್ಯವೇ ಗಯೆ |
ಯೆನಗಿವನ ಸನ್ನಿಧಿಯೆ ಕಾಶಿಯು |
ಎನಗಿವನ ಬಳಿ ದಂಡಕಾರಣ್ಯಂ ಗಜಾರಣ್ಯಂ ||
ಎನಗಿವನ ನಿಳಯವೆ ಕುರುಸ್ಥಳ |
ವೆನಗಿವನ ಸದನವೆ ಕಕುದ್ಗಿರಿ |
ಯೆನಗಿವನ ಮನೆ ಹಂಪೆಯಿಾತನ ಪುರವೆ ಶ್ರೀಶೈಲಂ || ೧೧ ||

ಎನಗಿವನ ಕೊಂಡಾಟವೇ ಶ್ರುತಿ |
ಯೆನಗಿವನ ಪಾಡುವುದೆ ಸತ್ಕೃತಿ |
ಯೆನಗಿವನ ಚಾರಿತ್ರಮಂ ಬಣ್ಣಿಪುದೆ ನಿಗಮತತಿ ||
ಎನಗಿವನ ಪೂಜಿಸುವುದೇ ರತಿ |
ಯೆನಗಿವನ ಕಿಂಕರರುಗಳೆ ರತಿ |
ಯೆನಗಿವನ ಶ್ರೀಪಾದವೇ ಗತಿ ಸಹಜವಿದು ಸುದತೀ || ೧೨ ||

ಕಂದಶಿಲೆಗುಂ ನವಿಲೆಗುಂ ಕೇ |
ಳೊಂದು ಯೋಜನ ನಾನು ನಿಚ್ಚಂ |
ಬಂದು ನಿನ್ನಂ ಪೊಗಳುವೆನು ಪೂಜಿಸುವೆ ಪಾಡುವೆನು ||
ಇಂದು ಮೊದಲಾಗೀಸ್ವಭಾವವಿ |
ದೆಂದು ದೇವಗೆ ಬಿನ್ನವಿಸಿ ಗೋ |
ವಿಂದರಸ ನಲವಿಂ ಜಡೆಯ ಶಂಕರನ ಬೀಳ್ಕೊಂಡ || ೧೩ ||

ಅರರೆ ಎಂತುಟೊ ಮೋಹ ಪೋಗುತೆ |
ತಿರುಗಿ ಬಂದು ನಿರೀಕ್ಷಿಸುವ ಪೋ |
ಪರೆ ಪದಂಗಳು ಬಾರದಲ್ಲಿಯೆ ಕುಳ್ಳಿರುವ ಸತಿಯು ||
ಕರವ ಪಿಡಿದೈದುವ ಜಡೆಯ ಶಂ |
ಕರನ ಶಿಖರವ ಕಾಂಬ ಪರಿಯಂ |
ತರ ನಿಲುತೆ ನೋಡುತ್ತೆ ನಡೆದನು ಮರುಗುತಾ ಶರಣ || ೧೪ ||

ನಡೆವುತಂ ಡೆಂಡಣಿಸಿ ಭರದಿಂ |
ದೆಡಹುತಂ ನುಡಿಯುತ್ತ ತೊದಲಿಸಿ |
ನುಡಿವ ದೇಹವ ಮರೆದು ಕಣ್ಮುಚ್ಚುತ್ತೆ ಕಂಪಿಸುವ ||
ಜಡೆಯ ಶಂಕರ ಜಡೆಯ ಶಂಕರ |
ಜಡೆಯ ಶಂಕರ ಎಂದೊರಲುತಂ |
ಮೃಡಶರಣ ನಗರ ಪ್ರವೇಶವ ಮಾಡಿದನು ಮುದದಿ || ೧೫ ||

ಹೋದುಸುರು[1] ಬಂದಂತೆ ನಗರಕೆ |
ಹೋದ ಸಿರಿ ಸಾರ್ದಂತೆ ಗ್ರಾಮದ |
ಹೋದ ಧರ್ಮಂ ತಿರುಗಿ ಬಂದುದು ಕಂದಶಿಲೆಪುರಕೆ ||
ಈತೆರದೊಳಿವರ್ಕೈತಹುದು ಪು |
ಣ್ಯೋದಯದ ಫಲವೆಂದು ಹರುಷಂ |
ಬೋದುದಾ ಪೌರಜನ ಗೋವಿಂದರಸ ಬರಲಾಗಿ || ೧೬ ||

ಸರಿದನಪರಾರ್ಣವದೆಡೆಗೆ ಭಾ |
ಸ್ಕರ ದಿವಾಂಗನೆ ಸಹಿತ ಗೋವಿಂ |
ದರಸ ಪೊಕ್ಕನು ವಿಪ್ರಯೋಗದಿ ತನ್ನ ಮಂದಿರವ ||
ಶರಣಸತಿ ಲಿಂಗಪತಿಯೆಂಬಾ |
ಚರಣೆ ನಿಶ್ಚಯವಾದುದಾಗಂ |
ವಿರಹಶಿಖಿ ಪಲ್ಲವಿಸಿದುದು ಭಕ್ತನ ಮನೋವನದಿ || ೧೭ ||

ಅಳಿಯ ಝೇಂಕೃತ ಕೋಕಿಲ ಸ್ವರ |
ಗಿಳಿಯ ನುಡಿ ಸದ್ಭಕ್ತಗಾ ವಿಷ |
ಗಳನ ದೂಷಣೆಯಾಯ್ತು ಚಂದನ ಗಂಧ ಕರ್ಪೂರಾ ||
ವಳಿ ಪರಾಂಗನೆಯಾದುದಮೃತಂ |
ಫಳ ಪಲ ಪದಾರ್ಥಂಗಳೀಶ್ವರ |
ನುಳಿದುದಲ್ಲದುದಾಯ್ತು ಪೊಗಳನರ್ಪಣಮುದಾಯ್ತು || ೧೮ ||

---

೧ ಹೋದಸುವು (ಉ.)

ಚಂದಳಿರ ಶಂಕರನ ಪದತಳ |
ವೆಂದು ಕಂಗಳಿಗೊತ್ತುತಿಹನರ |
ವಿಂದದಲರಂ ಶಂಕರನ ಕರವೆಂದು ಮುಂಡಾಡಿ ||
ಕಂಧರದೊಳುದರದೊಳಗಿರಿಸುವ |
ಚಂದಿರನ ಶಂಕರನ ಶ್ರೀಮುಖ |
ವೆಂದು ಕೈಗಳ ಮುಗಿದು ಕೊಂಡಾಡುವ ಕುಣಿವ ನಲಿವ || ೧೯ ||

ತೋರಿ ತೊಳಪಿನ ನೋಟ ಚಿಂತೆಯು |
ತೋರಿತತಿ ಬಿಸುಸುಯ್ಲು ತಾಪಂ |
ತೋರಿದುದು ಮೈಬಡವದನ್ನವನೊಲ್ಲದುಬ್ಬಳಿಕೆ ||
ತೋರಿದುದು ವೈಕಳತೆ ಮರಹುಂ |
ತೋರಿದುದು ಮಿಗೆ ಮೂರ್ಛೆಮರಣಂ |
ತೋರಿದಾಕ್ಷಣ ಬಂದು ನಿಂದಂ ಜಡೆಯ ಶಂಕರನು || ೨೦ ||

ಜಡೆಯ ಮಗುಟದ ಪಟ್ಟಗಂಥೆಯ |
ಜಡಿವ ಕಾಮಾಕ್ಷಿಗಳ ಮೆಯ್ಯೊಳು |
ತೊಡೆದ ಭಸ್ಮದ ಭೂಷಣದ ರುದ್ರಾಕ್ಷಮಾಲೆಗಳ ||
ಪಿಡಿದ ತಿಸುಳದ ಯೋಗದಂಡದ |
ಮಡಿದ ಖಟ್ವಾಂಗದ ಸೊಬಗಿನಿಂ |
ಜಡೆಯ ಶಂಕರ ನಿಂದ ಜಂಗಮರೂಪನಳವಡಿಸಿ || ೨೧ ||

ಕಂಡಳಾ ದುಮ್ಮವ್ವೆ ದೇವಗೆ |
ಮಂಡೆಯೆರಗಿ ಪದವ ತೊಳೆದು ಕೈ |
ಕೊಂಡು ಬಿಜಯಂಗೆಯ್ಸಿಯುಚ್ಚಾಸನದಿ ಕುಳ್ಳಿರಿಸಿ ||
ಗಂಡಗರುಪಲು ಕೇಳಿ ಭಕ್ತಿಕ |
ರಂಡ ಚೇತನವಾಗಿ ನಿಟ್ಟೆಸಿ |
ಕಂಡು ಬೇಗದೊಳೆದ್ದು ಮೆಯ್ಯಿಕ್ಕಿದನು ಸಂತಸದಿ || ೨೨ ||

ಮರಳಿ ಮರಳಿ ನಮಸ್ಕರಿಸಿ ನಿಂ |
ದೆರಡು ಕರಗಳ ಮುಗಿದು ಪೊಗಳುತೆ |
ಶರಣನಿರಲಿಂತೆಂದು ನುಡಿದನು ಜಂಗಮೋತ್ತಮನು ||
ಹರ ಹರಾ ನೊಂದೆಯಲ ಲಿಂಗದ |
ವಿರಹದೊಳು ನನ್ನಯ್ಯ ನನ್ನಯ |
ಹರಣವೇ ಎಂದಪ್ಪಿ ಮುಂಡಾಡಿದನು ಕಿಂಕರನ || ೨೩ ||

ಹೀಗೆ ಲಿಂಗದ ವಿರಹದೊಳು ಬೆಂ |
ಡಾಗಿ ಧೃತಿಗೆಟ್ಟವರು ಪೂರ್ವದೊ |
ಳೀಗ ಮುಂದಣ ಕಾಲದೊಳಗಿಲ್ಲಿಲ್ಲ ನಿನ್ನಂತೆ ||
ಈ ಗರುವಗುಣಿ ಲಿಂಗವಿಲ್ಲದ |
ನಾಗಿಹುದು ನಿನಗುಚಿತವೇ ಕೈ |
ಶ್ರೀಗುರುವಿನಿಂ ದೀಕ್ಷೆವಡೆಯೆಂದಂ ಮಹಾಮಹಿಮ || ೨೪ ||

ದೀಕ್ಷೆಯಾದ ಮಹಾಪುರುಷ ಭಾ |
ಳಾಕ್ಷರೂಪವ ತಾಳಿ ತ್ರಿಜಗದ |
ಶಿಕ್ಷೆರಕ್ಷೆಗೆ ಕರ್ತನಹ ನಿರುಪಾಧಿಕತ್ವದೊಳು ||
ದೀಕ್ಷೆಯಿಲ್ಲದ ಮನುಜ ಕಾಲನ |
ಶಿಕ್ಷೆಗೊಳಗಹನವಗೆ ಕಡೆಯೊಳು |
ಮೋಕ್ಷವೆಳ್ಳನಿತಿಲ್ಲ ರೌರವನರಕದೊಳಗಿಹನು || ೨೫ ||

ವಿಪ್ರನಾದರು ದೀಕ್ಷೆಯಿಲ್ಲದೊ |
ಡಪ್ರಯೋಜನ ಶ್ವಪಚನಿಂ ಕಡೆ |
ವಿಪ್ರನಿಂ ಘನ ಶ್ವಪಚನಾದರು ದೀಕ್ಷೆಯುಂಟಾಗೆ ||
ವಿಪ್ರರಿಗೆ ದೀಕ್ಷೆಯೆ ವಿಶೇಷಂ |
ವಿಪ್ರರಿಗೆ ಶಿವಲಿಂಗದೀಕ್ಷೆಯೆ |
ಸುಪ್ರಮಾಣವದೆಂದು ವೇದ ನಿರೂಪಿಸುತ್ತಿಹುದು || ೨೬ ||

ಗರುಡನಂ ಕಂಡಹಿಯವೊಲು ಕೇ |
ಸರಿಯ ಕಂಡಾನೆಯೊಲು ದೀಕ್ಷಾ |
ವರಣನಲ್ಲದ ನರನ ಕಂಡತಿ ಬೆದರಿ ಲಿಂಗಕಳೆ ||
ಇರದೆ ಪೋಪುದು ದೀಕ್ಷೆಯುತ ಭೂ |
ಸುರನ ಕಂಡರೆ ಲಿಂಗಕಳೆಯಂ |
ಕುರಿಸುವುದು ಶಶಿಕಾಂತ ಚಂದ್ರನ ಕಂಡೊಸರುವಂತೆ || ೨೭ ||

ಲಿಂಗವಂತನು ಮೋಹದಿಂ ಶಿವ |
ಲಿಂಗವಿಲ್ಲದ ಸತಿಸುತರನಾ |
ಲಿಂಗಿಸಿದರೊಡಗೂಡಿದರೆ ಮುಂಡಾಡಿದರೆ ಜನ್ಮ ||
ಹಿಂಗದತಿ ರೌರವನರಕದೊಳು |
ಸಂಗವಾಗಿಹ ಕೀಟರೂಪದಿ |
ತಂಗದಿರ ಬಿಸಿಗೆಯ್ಯೆರುಳ್ಳನ್ನಬರ ಕೇಳ್ಮಗನೇ || ೨೮ ||

ದೀಕ್ಷೆಯೇ ತಾಪತ್ರಯಂಗಳ |
ಶಿಕ್ಷೆ ಭವವಿಘ್ನಂಗಳಡಸದ |
ರಕ್ಷೆ ಸುತಸ್ವರ್ಗಾಪವರ್ಗಂಗಳ ಪಡೆವ ಕುಕ್ಷಿ ||
ದೀಕ್ಷೆಯೇ ಚತುರ್ವಿಧಪದಂಗಳ |
ಪೇಕ್ಷೆ ಮಾಯಾರ್ಣವಬಹಿತ್ರಾ |
ಪೇಕ್ಷೆ ಮೋಕ್ಷಕ್ಕಿಹಪರೋಭಯಗಳಿಗಿದೇ ಸಾಕ್ಷಿ || ೨೯ ||

ದೀಕ್ಷೆವಂತಂ ಸ್ತೋತ್ರಪಾತ್ರಂ |
ದೀಕ್ಷೆಯಿಲ್ಲದವನಪವಿತ್ರಂ |
ದೀಕ್ಷೆವಂತಂ ಪುಣ್ಯಭೂಷಂ ಪಾತಕವಿನಾಶಂ ||
ದೀಕ್ಷೆವಂತಂ ಪಾವನಾಂಗಂ |
ದೀಕ್ಷೆಹೀನಂ ಪುಣ್ಯಭಂಗಂ |
ದೀಕ್ಷೆಯಿಲ್ಲದ ಜಡ ನರನು ಕೇಳೆಂದನಾ ಮಹಿಮ || ೩೦ ||

ದೀಕ್ಷೆಯಿಲ್ಲದರೊಡವೆರಸಿದೊಡೆ |
ದೀಕ್ಷೆಹೀನಾಶ್ರಯದೊಳಿರ್ದೊಡೆ |
ದೀಕ್ಷೆಹೀನರ ಕೂಡೆ ನಡೆದೊಡೆ ದೀಕ್ಷೆಯಿಲ್ಲದರ ||
ಪಕ್ಷದಿಂ ನುಡಿಸಿದೊಡದೀಕ್ಷರ |
ನಕ್ಷಿಯಿಂ ನೋಡಿದೊಡೆ ನೆನೆದೊಡೆ |
ಮೋಕ್ಷವಿಲ್ಲದೆ ಘೋರ ಪಾಪಾರ್ಣವದಿ ಮುಳುಗುವರು || ೩೧ ||

ಲಿಂಗ ಜಡೆ ರುದ್ರಾಕ್ಷಿ ಭಸಿತಂ |
ಕಂಗೊಳಿಸುವುಪವೀತವೆಂಬ ಶಿ |
ವಾಂಗವಹ ಶ್ರೀ ಪಂಚಮುದ್ರೆಯ ಗುರುಮುಖದಿ ಮಗನೆ ||
ಅಂಗದೊಳು ಧರಿಸಿದರೆ ಮಾಯಾ |
ಸಂಗ ಬಿಡುವುದು ಜನನ ಮರಣಂ |
ಪಿಂಗಿ ಪೋಪುವು ಕೆಲಬರಿಗೆ ಮೋಕ್ಷಗಳ ತಾ ಕೊಡುವ || ೩೨ ||

ಒಡಲೊಳುದ್ಧೂಳಿಸು ವಿಭೂತಿಯ |
ತೊಡು ಮಹಾರುದ್ರಾಕ್ಷಿಗಳ ಮುಖ |
ದೆಡೆಯ ಪಂಚಾಕ್ಷರಿಯ ಮಂತ್ರವನುಚ್ಚರಿಸು ನಿತ್ಯಂ ||
ಜಡೆಗಳಂ ಪೊರು ನಿನ್ನ ಪ್ರಾಣ |
ಕ್ಕೊಡೆಯ ಶಂಕರನಿಷ್ಟಮುಂ ನೀಂ |
ಪಿಡಿ ಕರಸ್ಥಲದೊಳಗೆ ಸಂದೆಹ ಬೇಡ ನಿನಗೆಂದ || ೩೩ ||

ವರ ನಿರೂಪವ ಕೇಳಿ ಧರಣೀ |
ಸುರತಿಲಕ ಬಿನ್ನೈಸಿದಂ ವಿಗೆ |
ಹರುಷದಿಂ ಕೈಗಳ ಮುಗಿದು ತಜ್ಜಂಗಮೋತ್ತಮಗೆ ||
ಕರುಣನಿಧಿ ಚಿತ್ತೈಸು ಮಹಿಮೋ |
ತ್ಕರ ಮಹಾಲಿಂಗವನು ನಿಚ್ಚಂ |
ಧರಿಸಿಕೊಂಡಿರಬಹುದೆಯಪವಿತ್ರಾನ್ವಿತಾಂಗದೊಳು || ೩೪ ||

ಎಲು ನೆಣಂ ಬೆಮರಡಗು ರಕ್ತ ತೊ |
ವಲು ನವಿರ್ಗಳೆನಿಪೇಳು ಧಾತಿಂ |
ಬಲಿಕೆಯಾಗಿಹ ವಾತ ಪಿತ್ತ ಶ್ಲೇಷ್ಮಯುತವಾಗಿ ||
ಮಲದ ಮೂತ್ರದ ಕ್ರಿಮಿಯ ಕೀವಿನ |
ನೆಲೆಯೆನಿಪುದಪವಿತ್ರ ಘಟದೊಳು |
ನಿಲಿಸಬಹುದೇ ನಿರ್ಮಳಾಂಗೋತ್ತುಂಗ ಲಿಂಗವನು || ೩೫ ||

ಹೇಸಿಕೆಯ ಪುದೆ ಕರುಳ ತೊರಳೆಯ |
ರಾಸಿ ಕಾಳಿಜದೇಳ್ಗೆ ಹೊಲಸಿನ |
ಶೇಷ ನರವಿನ ನೆರಕೆ ವೀರ್ಯದ ಬೀಡು ವ್ಯಾಧಿಗಳ ||
ವಾಸ ಪುಳುಗಳ ಪುತ್ತು ದಿನದಿನ |
ನಾಶಮಪ್ಪ ವಿಕಾರಕಾಯ ನಿ |
ವೇಶಮಹುದೇ ಸಕಲರಹಿತ ನಿರಂಗಲಿಂಗಕ್ಕೆ || ೩೬ ||

ನೇತ್ರ ನಾಸಿಕ ಜಿಹ್ವೆ ದೇಹ |
ಶ್ರೋತ್ರ ಮುಖ ಪಂಚೇಂದ್ರಿಯಂಗಳ |
ಮಾತೃವಹ ಶಬ್ದ ಸ್ಪರುಶನಂ ರೂಪು ರಸ ಗಂಧ ||
ಜ್ಞಾತೃವಿಂ ಮಗ್ನತೆಯನೈದಿಹ |
ಗಾತ್ರದೊಳಗವಧರಿಸಬಹುದೆ ಪ |
ವಿತ್ರ ನಿರವಯ ನಿರ್ವಿಕಲ್ಪೋಪಾಂಗ ಲಿಂಗವನು || ೩೭ ||

ಮದದ ಮನೆ ಕಾಮದ ಗೃಹಂ ಕ್ರೋ |
ಧದ ನಿವಾಸಂ ಮಾತ್ಸರಿಯದ |
ಸದನ ಲೋಭದ ಮಂದಿರಂ ಮೋಹದ ನಿಳಯವಾಗಿ ||
ಹದನನರಿಯದೆ ಹಲುಬುತಿಹ ದೇ |
ಹದೊಳು ವರ್ಗಾತೀತ ನಿರ್ಗುಣ |
ಸದಮಳ ಪ್ರತ್ಯಂಗ ಲಿಂಗವನವಧರಿಸಬಹುದೇ || ೩೮ ||

ಕ್ಷುತ್ತುವಿಂ ಕೊರಗುವ ಪಿಪಾಸೆಯ |
ಗೊತ್ತೆನಿಸುತಿಹ ಶೋಕದಿಂದಾ |
ಸತ್ತು ತಗ್ಗುವ ಬಾರದುದ ಬಯಸುತ್ತ ಚಿಂತಿಸುವ ||
ಸತ್ತು ಹುಟ್ಟುವ ಸಕಲ ವಿಘ್ನದ |
ಕುತ್ತೆನಿಪ ದೇಹದೊಳು ಬಹುತ |
ತ್ವೋತ್ತರೋತ್ತರ ಲಿಂಗಮಂ ಧರಿಸುವುದು ಸನ್ಮತವೇ || ೩೯ ||

ಘಟದ ಸಂಗದಿನಾತ್ಮನಜ್ಞೋ |
ತ್ಕಟವಮುದಾದುದು ಮುಕ್ತಿಮಾರ್ಗಕೆ |
ಸಟೆಯೆನಿಸಿದುದು ಪಾಪಪುಣ್ಯಂಗಳಿಗೆ ಪಕ್ಕಾಯ್ತು ||
ಅಟಮುಟಕ್ಕಾಶ್ರಯವೆನಿಸಿದುದು |
ದಿಟವಳಿದು ಘನಕೃತ್ಯಮಾರ್ಗದಿ |
ನಟಿಸಿದುದು ಶಿವಲಿಂಗ ಸೋಂಕಿದೊಡೇನಹುದೊ ಜೀಯಾ || ೪೦ ||

ಗಾತ್ರಮಂ ಪ್ರಾಕ್ಷಾಳಿಸಿದ ಜಳ |
ಗಾತ್ರದೊಳು ಲೇಪಿಸಿದ ಪರಿಮಳ |
ಗಾತ್ರಮಂ ಪರಿವೇಷ್ಟಿಸಿದ ವರ ಧೌತವಸ್ತ್ರಗಳು ||
ಗಾತ್ರಮಂ ಸೋಂಕಿದ ಪದಾರ್ಥ ಪ |
ವಿತ್ರಮಾದರುಮಾಕ್ಷಣದೊಳಪ |
[illegible]ಮಪ್ಪುವು ಲಿಂಗಮಂ ಧರಿಸುವುದು ಸನ್ಮತವೇ || ೪೧ ||

[illegible]ಸಬೇಕು ಮನ ಹಿಂ |
[illegible]ದಿ[illegible]ರಿಷ್ಟ ವಸ್ತುವ |
[illegible]ನೆನಹು ಘಟಿಸದಿರಧಿಕ ತಪದಿಂದೆ ||
[illegible]ಸಬೇಕು ತಾಪಸ |
[illegible]ದೊಡೆ ಸ್ತುತಿಸಬೇ |
[illegible]ದೊಡಮಲ ಸಿಂಹಾಸನದೊಳೀಶ್ವರನ || ೪೨ ||

[illegible]ಯಾ ಶಿವನ ಹೃದಯದಿ |
[illegible]ಳಿಸಿ ಚಿತ್ತವನು ಶಿವನೊಳು |
[illegible]ಗೊಳಿಸಿ ಮಂತ್ರಂಗಳಂ ಸ್ಮರಿಸುತ್ತ ಶಂಕರನ ||
ಹಲವು ತೆರದಿಂ ಪೂಜಿಪುದೆ ಕೇ |
ವಲ ಮಹಾ ಶೈವಾಗಮೋಕ್ತಂ |
ಮಲಯುತಾಂಗದೊಳಿಷ್ಟಮಂ ಧರಿಸುವುದು ಸನ್ಮತವೇ || ೪೩ ||

---

೧ ದಾಗದಿ (ಉ.)

ಎಂದ ಮಾತಂ ಕೇಳಿ ಗುರುವಿಂ |
ತೆಂದ ಶೈವದೊಳೆರಡು ತೆರ ಶ್ರುತ |
ಮೆಂದುಮಶ್ರುತಮೆಂದು ನೀ ಪೇಳಿದುದೆ ಶ್ರುತಶೈವಂ ||
ಮುಂದೆ ಲಾಲಿಸು ಮಗನೆಯಶ್ರುತ |
ದಂದಮಂ ವಿಸ್ತರಿಪೆ ಜ್ಞಾನದೊ |
ಳೊಂದಿಯಶ್ರುತಶೈವ ಮುಕ್ತರ ಕಾಂಕ್ಷೆಯೆನಿಸುವುದು || ೪೪ ||

ವೇದಮಾರ್ಗದಿ ಶೈವವೇ ಚತು |
ರ್ಭೇದ ಶೈವ ಕಪಾಲ ಪಾಶ್ವ |
ತ್ಯೋದಯಂ ಕಾಲಾಮುಲೆಂದವರೊಳಗೆ ನಾಲ್ಕು ತೆರಂ ||
ಆದಿಶೈವಂ ವಾಮತಂತ್ರಂ |
ಸಾದತೀವ್ರತ ಮಾರ್ಗಶೈವ ಕ |
ಣಾದ ಮತದೊಳು ಭೋಗ ಭೈರವಮೆಂದೆರಡು ಶೈವಂ || ೪೫ ||

ಈ ಸಕಲ ಶೈವಗಳಿಗಿಂದ ವಿ |
ಶೇಷಮಪ್ಪುದು ವೀರಶೈವಂ |
ರಾಶಿ ಶಾಸ್ತ್ರಾಗಮ ಶ್ರುತಿ ಸ್ಮೃತಿಗಳಿಗಗೋಚರವು ||
ಈಶನಂ ಬಿಡದೊಲಿಯಿಸುವರಿಗಿ |
ದೇ ಸಕಲ ಮಣಿ ಮಂತ್ರಮೌಷಧ |
ವೇಷಧಾರಿತ್ವದೊಳಗೆಸೆದಿಹ ಮತಗಳಂತಲ್ಲ || ೪೬ ||

ಅತಿಶಯದ ಸುಜ್ಞಾನವೆಯುಪಾ |
ಸತೆಯು ಕೇಳಾಗಮದೊಳುಂ ಕೆಲ |
ಮತದೊಳಗೆ ಸತ್ಕ್ರಿಯೆಯುಪಾಸತೆಯಾಗಿಹುದು ಕೇಳಾ ||
ವಿತತ ಸುಜ್ಞಾನಕ್ರಿಯಾಸಂ |
ಗತಮುಪಾಸತೆ ವೀರಶೈವದಿ |
ನುತ ಷಡುಜ್ಞಾನಂಗಳುಂಟವ ನಿಸ್ತರಿಪೆನೆಂದ || ೪೭ ||

ವರ ಪಿಪೀಲಿಕ ಮರ್ಕಟ ವಿಹಂ |
ಗ ರಚಿತೋನ್ನತ ಸಹಜ ಸಮ್ಯಕ್ |
ಸ್ಫುರಿಸುತಿಹ ಸಸ್ವಾನುಭಾವಗಳೆನಿಪ ವಿದ್ಯೆಗಳ ||
ಶಿರದೊಳಿಹವಾಚಾರ ಗುರು ಶಿವ |
ಚರ ಪ್ರಸಾದ ಮಹಾಭಿಧಾನವ |
ಧರಿಸಿ ಷಡ್ವಿಧ ಲಿಂಗಮಿಪ್ಪುವು ಭಾಸ್ಫುರಣಮಾಗಿ || ೪೮ ||

ತುಂಗ ಸದ್ಗುರುನಾಥ ತೋರಿದ |
ಲಿಂಗಮಾರ್ಗದ ತೇಜಸದಿ ಸ |
ರ್ವಾಂಗಪೂರಣಮಾಗಿಹುದು ಸ್ಥೂಲಾಂಗದೊಳಗಿಷ್ಟ ||
ಲಿಂಗ ಸೂಕ್ಷ್ಮದಿ ಪ್ರಾಣಲಿಂಗೋ |
ತ್ತುಂಗ ಕಾರಣಕಾಯಮಧ್ಯದಿ |
ಪೊಂಗಿ ಮೆರೆವುದು ತೃಪ್ತಿಲಿಂಗಮಿದಿಂತು ಮೂದೆರನು || ೪೯ ||

ಅಂಗಮಂ ಕೂರ್ತಾದ ಮೂದೆರ |
ಲಿಂಗಮಿಂದ್ರಿಯಗಳ ನಿಮಿತ್ತ ಷ |
ಡಂಗಮಾದುವು ಹೃದಯದಿ ಮಹಾಲಿಂಗ ಕರ್ಣದೊಳು ||
ಪೊಂಗಿಹುದು ಪ್ರಾಸಾದಲಿಂಗಂ |
ಜಂಗಮಂ ತ್ವಕ್ಕಿನೊಳಗಾ ಶಿವ |
ಲಿಂಗ ನೇತ್ರದಿ ಜಿಹ್ವೆಯೊಳು ಗುರುಲಿಂಗ ನಾಸಿಕದಿ || ೫೦ ||

ಎಸೆವುತಿಹುದಾಚಾರಲಿಂಗಂ |
ಪಸರಿಸುವ ಕರ್ಮೇಂದ್ರಿಯಂಗಳ |
ಬೆಸುಗೆಯಾಗಿ ವಿರಾಜಿಪುವು ಷಡ್ವಿಧ ಮಹಾಲಿಂಗಂ ||
ಮಿಸುಪ ಕರ್ಮಜ್ಞಾನಯೋಗದೊ |
ಳೆಸೆದಿಹುದರಿಂ ಕೇಳ್ ಮಗನೆಯವ |
ರೆಸಕದಂಗವ ಮುಖವ ಹಸ್ತವ ವಿಷಯ ಭಕ್ತಿಗಳ || ೫೧ ||

ಕಿವಿಗೆ ವಾಕಿಗೆ ಶಬ್ದವಿಷಯಂ |
ಗವಣೆಯಾಗಸ ಮೂಲಭೂತಂ |
ಶಿವನೆನಿಸುವೀಶಾನನಧಿಪಂ ತ್ವಕ್ಕಿಗಂ ಕರಕಂ ||
ಅವಿರಳ ಸ್ಪರ್ಶನ ವಿಷಯ ವಾ |
ಯುವದು ಭೂತಂ ತತ್ಪುರುಷನೇ |
ಧವನು ನೇತ್ರಕೆ ಪಾದಕಾ ರೂಪೇ ವಿಷಯಮಾಯ್ತು || ೫೨ ||

ಭೂತಮಗ್ನಿಯಘೋರ ಮೂರುತಿ |
ನಾಥ ಜಿಹ್ವೆಗೆ ಗುಹ್ಯಕೆ ರಸ |
ಖ್ಯಾತ ವಿಷಯಂ ಭೂತಮುದುಕಂ ವಾಮದೇವ ಪತಿ ||
ಜಾತಿ ನಾಸಿಕ ಪಾಯುಗುಂ ಸಂ |
ಪ್ರೀತಿ ಗಂಧಮೆ ವಿಷಯ ಧಾರುಣಿ |
ಭೂತ ಸದ್ಯೋಜಾತನಧಿದೈವಂ ಮಗನೆ ಕೇಳಾ || ೫೩ ||

ಜ್ಞಾನಕರ್ಮೇಂದ್ರಿಯಕೆ ಹೃದಯ |
ಸ್ಥಾನವಾದುದು ಸ್ಥೂಲ ಸೂಕ್ಷ್ಮ ನ |
ವೀನ ಕಾರಣ ಘಟದೊಳಿಂದ್ರಿಯ ಪೂರ್ಣವಾಗಿಹುವು ||
ಏನ ಹೇಳುವೆನಿಂದ್ರಿಯದಿ ಲಿಂ |
ಗಾನುಬಂಧಮದಾಗಿಹುದು ಕೇಳ್ |
ಸ್ವಾನುಭವಮಂ ನಾಸಿಕದ ನಾಸಿಕವೆಯಾಚಾರ || ೫೪ ||

ಲಿಂಗ ಜಿಹ್ವೆಯ ಜಿಹ್ವೆಯೇ ಗುರು |
ಲಿಂಗ ನೇತ್ರದ ನೇತ್ರವೇ ಶಿವ |
ಲಿಂಗ ತ್ವಕ್ಕಿನ ತ್ವಕ್ಕೆ ಚರಲಿಂಗಂ ಕಿವಿಯ ಕಿವಿಯೆ ||
ಕಂಗೊಳಿಸುವ ಪ್ರಸಾದಲಿಂಗೋ |
ತ್ತುಂಗ ಹೃದಯದ ಹೃದಯವೇ ಮಹ |
ಲಿಂಗವಿಾ ಲಿಂಗೈಕ್ಯರವರಂ ಪೇಳ್ವೆ ಕೇಳೆಂದ || ೫೫ ||

ಪರಮ ಶ್ರೀಮದ್ಭಕ್ತ ಮಾಹೇ |
ಶ್ವರ ಪ್ರಸಾದಿಯು ಪ್ರಾಣಲಿಂಗಿಯು |
ಶರಣನೈಕ್ಯಾಖ್ಯದೊಳು ರಾಜಪರವರ ವರ್ತಕದ ||
ಇರವುಗಳ ಬೇರ್ಪಡಿಸಿ ನಾ ವಿ |
ಸ್ತರಿಸಿ ಪೇಳುವೆ ಕೇಳ್ ಮಗನೆ ತ್ರೈ |
ಕರಣ ಶುದ್ಧದೊಳೈಕ್ಯ ಮೊದಲಾ ಭಕ್ತ ಕಡೆಯಾಗಿ || ೫೬ ||

ಸ್ಫುರಿಸುವಾತ್ಮಾಂಗದೊಳು ಭಾವದಿ |
ನೆರೆದ ಸರ್ವೇಂದ್ರಿಯದ ಸೊಗಸಂ |
ಪಿರಿದು ಸಮರಸ ಭಕ್ತಿಯಿಂದ ಮಹತ್ವಕರ್ಪಿಸುವ ||
ಗರುವನೈಕ್ಯಂ ವ್ಯೋಮದೇಹಾಂ |
ತರದೊಳಗೆ ಸುಜ್ಞಾನ ಹಸ್ತದಿ |
ಸುರವಗಳನಾನಂದಭಕ್ತಿಯೊಳಧಿಕ ಪ್ರಾಣಂಗೆ || ೫೭ ||

ಪೂರಿಸುವನೇ ಶರಣನೆನಿಪನು |
ಮಾರುತಾಂಗದಿ ಸುಮನ ಹಸ್ತವಿ |
ಚಾರದಿಂದಂ ಸ್ಪರ್ಶನವನನುಭಾವಭಕ್ತಿಯೊಳೆ ||
ಚಾರು ಜಂಗಮಕರ್ಪಿಸುವನೆಯು |
ದಾರ ಪ್ರಾಣಸುಲಿಂಗಿಯಗ್ನಿಶ |
ರೀರದೊಳು ನಿರಹಂಕತದ ಹಸ್ತದೊಳು ವರ್ಣಗಳ || ೫೮ ||

ಪೀನ ಶಿವಲಿಂಗಕ್ಕೆ ಪರಮುವ |
ಧಾನ ಭಕ್ತಿಯೊಳರ್ಪಿಸುವ ವಿವಿ |
ಧಾನುಭವಿಯೆ ಪ್ರಸಾದಿಯೆನಿಸುವನಪ್ಪುದೇಹದೊಳು ||
ಏನನೊರೆವೆ ಸುಬುದ್ಧಿಕರದಿ ನ |
ವೀನರುಚಿಯಂ ನೈಷ್ಠಿಕಾಭ |
ಕ್ತ್ಯಾನುಬಂಧದಿ ಗುರುವಿಗರ್ಪಿಸುವವ ಮಹೇಶ್ವರನು || ೫೯ ||

ಧರಣಿಯಂಗದೊಳತಿ ಸುಚಿತ್ತದ |
ಕರದಿ ಗಂಧವ ಸದುಭಕುತಿಯಿಂ |
ದುರುತರಾಚಾರೈಕಲಿಂಗಕ್ಕರ್ಪಿಸುವ ಭಕ್ತಂ |
ಶರಿರ ನಿರ್ಮಲ ವಸ್ತುವಲ್ಲಿಂ |
ದೊರೆದೆ ಮಗನೇ ದೇಹದಿಂದುರು |
ತರ ಪದಾರ್ಥಗಳುಂಟಿ ಕೇಳಿಂದಂ ಮುನೀಶ್ವರನು || ೬೦ ||

ನತ್ವಮಾಚಾರಾಭಿಧಾನಂ |
ಮತ್ವ ಗುರುಲಿಂಗಾಭಿದಾನಂ |
ಶಿತ್ವ ಶಿವಲಿಂಗಾಖ್ಯ ವಾತ್ವಮೆ ಜಂಗಮಾಂಕಿತವು ||
ಯತ್ವಮೇ ಪ್ರಾಸಾದಲಿಂಗಂ |
ಓಂತ್ವಮೇ ಮಹಲಿಂಗಮಾಗಿ ಮ |
ಹತ್ವದಿಂದೆ ಷಡಕ್ಷರಾತ್ಮಕವಾದುವಾ ಲಿಂಗಂ || ೬೧ ||

ನತ್ವಮಾಧಾರದೊಳಿಹುದು ಕೇಳ್ |
ಮತ್ವ ಸ್ವಾಧಿಷ್ಠಾನದೊಳು ವಲ |
ಶಿತ್ವ ಮಣಿಪೂರಕದೊಳನಹತ ಚಕ್ರದೊಳು ವತ್ವಂ ||
ಯತ್ವಮಿಹುದು ವಿಶುದ್ಧಿಯೊಳಗಾ |
ಓಂತ್ವಮಾಗ್ನೆಯದೊಳಗೆ ಷಡು ಚ |
ಕ್ರತ್ವಮೆಸೆದಿಹವಂಗದೊಳಗಂಗವೆ ಷಡಕ್ಷರವು || ೬೨ ||

ಓಂತ್ವವೇ ಸರ್ವಾಂಗವಾದುದು |
ನತ್ವಮೇ ರೋಹಿತಮೆನಿಸಿದುದು |
ಮತ್ವಮೇ ಮಾಂಸಸ್ವರೂಪಮುದಾದುದೇನೆಂಬೆ ||
ಶಿತ್ವಮೇ ಮೇದಸ್ಸೆನಿಸಿದುದು |
ವತ್ವಮಸ್ಥಿಯದಾಗಿ ನಿಂದುದು |
ಯತ್ವ ಮಜ್ಜಾಕಾರವಾದುದು ದೇಹಬಂಧದೊಳು || ೬೩ ||

ಆರು ಧಾತುಗಳುನ್ನತಂಗಳೆ |
ಯಾರು ತೆರ ಲಿಂಗಂಗಳಾಗಿಹ |
ವಾರು ಲಿಂಗಮೆಯಾರು ದೇಹಗಳಾಗಿಯೊಳಹೊರಗೆ ||
ಮೀರಿ ಮಿಸುಗುತೆ ಪೂರ್ಣಮಾಗಿಹ |
ಆರು ದೇಹಗಳೇಕಮಾಗಿಯೆ |
ತೋರಿಸುತ್ತಿಹುದಂಘ್ರಿ ಕರ ಮುಖ್ಯಾವಯವದಿಂದೆ || ೬೪ ||

ಹೀಗೆ ಮಿಗೆ ವಸ್ತುಸ್ವರೂಪಮು |
ದಾಗಿ ಮಹಿಮಾಪದವೆನಿಪ ಗಾ |
ತ್ರಾಗಮುವ ಜಡವೆಂದು ಬಗೆವುದೆ ಮಗನೆ ಈ ಘಟವೇ ||
ಯೋಗಿಗಳಿಗಾನಂದಮೀವುದು |
ಭೋಗಿಗಳಿಗತಿ ಸೊಬಗನೀವುದು |
ಶ್ರೀಗತದ ಸೌಭಾಗ್ಯದೇಳ್ಗೆಗೆ ಕಾರಣಂ ದೇಹಂ || ೬೫ ||

ಘಟಮೆ ಸುಕ್ಷೇತ್ರದೊಳಿಹುದು ಮನ |
ನಟಿಸುವುದು ಕೇಳನ್ಯವಾಸಕೆ[೧] |
ಘಟ ಸಮಾಧಿಯೊಳಿಹುದು ಮನಮುದ್ಗಾರಿಸುತ್ತಿಹುದು ||
ಘಟ ಸುಮುದ್ರಾಂಕಿತದೊಳಿಹುದಟ |
ಮಟವ ಮಾಳ್ಪುದು ಮನಸು ಮಗನೇ |
ಘಟವಧಮವೆಂದಾಡಬಹುದೇ ಶಿವ ಶಿವಾ ಎಂದ || ೬೬ ||

ಲೋಹವಗ್ನಿಯ ಸಂಗದಿಂದತಿ |
ದಾಹದೊಳು ನೀರ್ಗುಡಿವುದಲ್ಲದೆ |
ಲೋಹಕತಿ ತೃಷೆಯುಂಟೆ ಮುಟ್ಟಲು ಸುಡುವ ಗುಣವುಂಟೇ ||
ದೇಹವಾತ್ಮನ ಯೋಗದಿಂದುರೆ |
ಯಾಹಮಿಸುತೆ ವಿಕಾರಿಯಾಗಿಹು |
ದಾಹರಂಬುವ ಬಯಸುವುದು ಕಾರ್ಪಣ್ಯಬಡುತಿಹುದು || ೬೭ ||

ಬಣ್ಣವಿಲ್ಲದ ಕಾಂಚನಕೆ ಕೆ |
ಮ್ಮಣ್ಣ ಲೇಪಿಸಿ ಕಾಸಿದೊಡೆ ನೆರೆ |
ಬಣ್ಣಮಪ್ಪಂತಾತ್ಮದೇಹವ ತಾಳಿ ಸತ್ಕ್ರಿಯೆಯಿಂ ||
ನುಣ್ಣಿಸಲು ಭ್ರಮೆಯುಳಿದು ವಿದ್ಯೆಯ |
ಹಣ್ಣೆನಿಸಿದುದು ಜೀವದಿಂದಂ |
ತಿಣ್ಣಮಾಗಿಹುದಂಗ ದೇಹಮೆ ಶಿವನ ಸಾಕಾರಂ || ೬೮ ||

---
೧ ವ್ಯಸನಕೆ (ಇ.) ೨ ಮ (ಇ, ಉ.)

ದೇಹದಿಂದಾತ್ಮಪ್ರತಿಷ್ಠೆಯು |
ದೇಹದಿಂದಾನಂದ ಸಂಪದ |
ದೇಹದಿಂದೆ ವಿವೇಕದೂರ್ಜಿತ ವಸ್ತುನಿರ್ದೇಶ ||
ದೇಹದಿಂದೆ ಗುರುತ್ವಭೂಷಣ |
ದೇಹದಿಂದಾಚಾರವರ್ತಕ |
ದೇಹದಿಂ ಸ್ವರ್ಗಾಪವರ್ಗಂ ತೋರಿಸುತ್ತಿಹುದು || ೬೯ ||

ಘಟವನುಳಿದೊಡೆ ಪಾಪಪುಣ್ಯೋ |
ತ್ಕಟ ಮಹಾನಿಜತತ್ವಸಾಧನ |
ಪಟಲವಜ್ಞಾನಾತ್ಮಶುದ್ಧಾಶುದ್ಧ ಸಂಪ್ರತಿಯು ||
ಪಟುಕರಣ ನಿಶ್ಚಯ ವಿಡಂಬನ |
ನಟಣೆ ಸದ್ವ್ರತ ತಾರತಮ್ಯಂ |
ಸಟೆಯೆನಿಸುವುದು ಸರ್ವಶೂನ್ಯಂ ಮಗನೆ ಕೇಳೆಂದ || ೭೦ ||

ಗ್ರಹಗಳಾಕಾಂಕ್ಷೆಯೊಳು ದೇಹಿಯು |
ಗ್ರಹಿಸಿ ಸಕಲೇಂದ್ರಿಯ ವಿಷಯಮಂ |
ಸಹಜದಿಂದರಿವುವು ಘಟವ ಪೊದ್ದದೆಯರಿವುದುಂಟೇ ||
ಮಹಿಮೆಯಿಂದಿಹ ಮುಕ್ತಿಮಾರ್ಗದ |
ವಿಹರಣೆಯ ಸುಖವರಿವುದೇ ವಪು |
ಗ್ರಹಣಮಿಲ್ಲದೊಡಾತ್ಮನಿಶ್ಚಯ ದೇಹಮೇ ಮುಖ್ಯಂ || ೭೧ ||

ಜಡವೆನಿಸಿಯಾತ್ಮಂ ಸುಮುದ್ರೆಯೊ |
ಳೊಡಲಿ[1]ರಲು ವಂದಿಪುದು ಲೋಕಂ |
ಜಡವನುಳಿದ ಮಹಾತ್ಮಘಟವಾಚಾರಮಂ ಬಿಡಲು ||
ಪೊಡವಿ ದೂಷಿಸುವುದು ವಿವೇಕಿಗ |
ಳೊಡಲನೇ ಪ್ರತಿಪಾದಿಸುವುದಾ |
ವೊಡಲ ವಿರಾರಿದ ವಸ್ತುವೊಂದುಂಟೇ ಮಹಾದೇವಾ || ೭೨ ||

ಇಂತಧಿಕವೀ ದೇಹವಿದಾ ದೇ |
ಹಾಂತರದ ಕರ ಕಕ್ಷಮುರವ |
ತ್ಯಂತ ಮುಖ ಸಹಜಾಮಳೈಕ್ಯಂ ಶಿಖಿ ನಿವೇಶನದಿ ||
ಶಾಂತಿಕರ ಲಿಂಗವ ಧರಿಸಲ |
ತ್ಯಂತ ಸುಖಮಯ ಮುಕ್ತಿವನಿತಾ |
ಕುಂತಳದ ಮಣಿಯಾಗಿಹರು ಶಿವನುಳ್ಳಪರಿಯಂತ || ೭೩ ||

---
೧ ವಿ (ಇ, ಉ.)

ಕಿಡಿಯೊಗುವ ಕಾರ್ಬೊನ್ನ ಘಟ್ಟಿಯ |
ಪಿಡಿಯೆ ನಿಜವುಳ್ಳವನ ಕೈಯಂ |
ಸುಡದವೊಲು ನಿಜವಿಲ್ಲದವ ತುಡುಕಲ್ಕವನ ಹಸ್ತ ||
ಸುಡುವವೊಲು ಶಿವಲಿಂಗ ಸತ್ಯದಿ |
ನಡೆವ ಶರಣಂ ಧರಿಸಲಾತನ |
ಕೆಡಿಸದನೃತಜ್ಞಂ ಧರಿಸೆ ಕೆಡಿಸುವುದು ಕೇಳ್ ಮಗನೇ || ೭೪ ||

ದುರುಳ ಮಾರ್ಗದೊಳಿಷ್ಟಲಿಂಗವ |
ಧರಿಸೆ ತಲ್ಲಿಂಗವೆುಯುವಂದಿರ |
ಶರಿರಮಂ ಮಿಗೆ ನಾಮನಷ್ಟವ ಮಾಡಿ ಕೆಡಿಸುವುದು ||
ಉರುತರ ಕ್ರೀಯೋಕ್ತಿಯಿಂದದ |
ಧರಿಸೆ ಯೋಗ್ಯರ ಮಾಡುವುದು ವಿ |
ಸ್ತರದಿ ಕೇಳು ಷಡುಸ್ಥಲದಿ ಲಿಂಗವ ಧರಿಸುವುದನು || ೭೫ ||

ಹೀನ ಚಾರಿತ್ರದೊಳೆ ನಿಷ್ಠಾ |
ಧೀನದಿಂದೆ ವಿರಕ್ತಿ ಮುಕ್ತಿ |
ಧ್ಯಾನದಿಂ ಕಾರ್ಪಣ್ಯಬಡುತಂ ಸರ್ವರಿಗೆ ಕೆಯ್ಯ ||
ನಾನದಾವಾಗಲು ವಿದಿತಮುವ |
ಧಾನಲಿಂಗದೊಳಿಹ ಮಹಾತ್ಮಕ |
ನೇನ ಪೇಳ್ವೆ ಕರಸ್ಥಲದೊಳಿಷ್ಟವ ಧರಿಸಬಹುದು || ೭೬ ||

ಸಕಲ ಪರಿಯಾಯಿಂದ್ರಿಯಗಳೊಳ್ |
ಪ್ರಕಟಿಸುತ್ತಿಹ ವಿವಿಧ ವಿಷಯಾ |
ಧಿಕ ಮಹಾಭೋಗಾನುಚಿತ್ತ ಸುಖಂಗಳಂ ಲಿಂಗ ||
ಮುಖದೊಳಂಗೀಕರಿಸುವ ಮಹಾ |
ತ್ಮಕಗೆ ಕಕ್ಷದಿ ಧರಿಸುವುದು ಸ್ವಾ |
ತ್ಮಕವೆನಿಪುದಿಂತಲ್ಲದಜ್ಞಾನಿಗಳಿಗಳವಹುದೇ || ೭೭ ||

ತರುಣಿಯರನಾಲಿಂಗಿಸದ ಸಂ |
ಚರಣ ಹೃದಯಮುದಾಗದಂತಃ |
ಕರಣಶುದ್ಧದಿ ಕೋಪ ತಾಪವನೆಡೆಯೊಳಿಂಬಿಡದ ||
ಕರುಣಭಾವಂ ಪಿಂಗದ ಮಹಾ |
ಪುರಷನೊಲವಿಂದಿಷ್ಟಲಿಂಗಮು |
ನುರದೊಳವಧರಿಸಲ್ಕೆ ಮೋಕ್ಷಾಂಗನೆಯ ಕಾಂತನಹ || ೭೮ ||

ಪುಸಿಯುನಾಡದ ವಾಕ್ಯಮಾಲಾ |
ಪ್ರಸರವಿಲ್ಲದ ನಿಷ್ಠುರಂಗಳ |
ನುಸುರದನುಚಿತ ಮಾತನಾಡದ ಪರರ ದೂಷಣೆಯ ||
ಪಸರಿಸದಹಂಕಾರ ವಾಕ್ಯದ |
ಬೆಸುಗೆಯುಳಿದ ರಸಜ್ಞಲಂಪಟ |
ದೆಸಕವಿಲ್ಲದವಂ ಮುಖದಿ ಲಿಂಗವ ಧರಿಸಬಹುದು || ೭೯ ||

ತೂಳುತಿಹ ದಶ ವಾಯು ಬಂಧದಿ |
ಮೇಳವಿಸಿ ಪೂರವಡಿಸುತಿಹ ನವ |
ನಾಳವಂ ಪಿರಿದಾತ್ಮಕವನೂರ್ಧ್ವಾಭಿಯೋಗದೊಳು ||
ತಾಳಿ ಬಾಹ್ಯಾಚರಣೆಯಿಂದೆ ಚ |
ಢಾಳಿಸಿದ ಸನ್ಮಾರ್ಗಿ ಲಿಂಗವ |
ಭಾಳದೊಳಗಮಳೈಕ್ಯಮಂ ಮಾಡುವುದು ನಿಯತ ಗುಣಂ || ೮೦ ||

ಭವಿಯ ಸಂಗವನುಳಿದ ಪ್ರಕೃತಿಯ |
ಭವಣಿ ಹಿಂಗಿದ ಚಾರಹೀನರಿ |
ಗವನತಂಗೆಯ್ಯದ ಜಡಾನ್ವಿತ ಪಂಚ ಭೌತಿಕವ ||
ತವೆ ಕಳೆದ ಸದ್ವೀರಶೈವಾಂ |
ಗವೆನಿಸಿದ ಸನ್ಮಾರ್ಗಿ ಶಿಖಿಯೊಳ |
ಗವಧರಿಸುವುದು ನಿಯುತವೆಂದೊರೆದಂ ಮುನೀಶ್ವರನು || ೮೧ ||

ಈತೆರದೊಳಂಗದೊಳು ಲಿಂಗವ |
ನಾತುರಿಯುದಿಂ ಧರಿಸಿದವರಿಗೆ |
ಪಾತಕಂ ಪಿಂಗುವುದು ಭವಬಂಧಂ ಪರಿವುದವರ ||
ರೀತಿ ಶಿವನಂತಿಹುದು ಲೋಕ |
ಪ್ರೀತರಪ್ಪರೆನಲ್ಕೆ ಶ್ರೀಗುರು |
ನಾಥನೊಡನಿಂತೆಂದನಾ ಗೋವಿಂದ ದೇವಗಳು || ೮೨ ||

ದೇವ ಲಾಲಿಪುದಯ್ಯ ಪೂರ್ವದ |
ದೇವ ಮನು ಮುನಿ ಯಕ್ಷ ರಾಕ್ಷಸ |
ರಾವರಾದರು ಧರಿಸಿಹರೆಯುಂಗದೊಳು ಲಿಂಗವನು ||
ದೇವ ಎನಗರುಪೆನಲು ನಸು ನಗೆ |
ಯಾವರಿಪ ಮುಖದಿಂದೆ ಗುರು ವೇ |
ದಾವಳಿಯೊಳುಂಟುಂಟು ಪೇಳುವೆ ಕೇಳು ನೀನೆಂದ || ೮೩ ||

ಇಂದ್ರನಿಗೆ ಮಾಣಿಕದ ಲಿಂಗಮು ।
ಪೇಂದ್ರನಿಗೆ ಹರಿನೀಲದಿಷ್ಟ ಫ ।
ಣೀಂದ್ರನಿಗೆ ವಿದ್ರುಮದ ಲಿಂಗ ಸರಸ್ವತೀಪತಿಗೆ ॥
ಸಾಂದ್ರ ಪಾಷಾಣೇಷ್ಟಲಿಂಗಂ ।
ಚಂದ್ರನಿಗೆ ಮೌಕ್ತಿಕದ ಲಿಂಗ ಧ ।
ನೇಂದ್ರಗಷ್ಟಾಪದದ ಲಿಂಗಂ ಪ್ರಾಣವಾಗಿಹುದು ॥ ೮೪ ॥

ಅಸುರರಿಗೆ ಕಾರ್ಬೊನ್ನ ಲಿಂಗಂ ।
ವಸುಗಳಿಗೆ ನೆರೆ ಕಾಂಸ್ಯ ಲಿಂಗಂ ।
ದೆಶೆಗೊಡೆಯ ವರುಣಂಗೆ ರತ್ನದ ಲಿಂಗ ದಿನವುಣಿಗೆ ॥
ಮಿಸುಪ ವಜ್ರದ ಲಿಂಗ ಮದನಗೆ ।
ಕುಸುಮ ಲಿಂಗಂ ಕೃಷ್ಣವರ್ತ್ಮಗ೧ಂ ।
ಗೆಸೆದಿಹುದು ನೆಲೆಯಾಗಿ ಜ್ಯೋತಿರ್ಲಿಂಗವಂಗದೊಳು ॥ ೮೫ ॥

ಜ್ಞಾನಮಯ ಯೋಗಿಗಳಿಗಾತ್ಮನೆ ।
ಪ್ರಾಣಲಿಂಗಂ ಪರಮ ಪದಮಿಾ ।
ಶಾನಗಮಳದ ಚಂದ್ರಕಾಂತದ ಲಿಂಗ ರುದ್ರನಿಗೆ ॥
ಭಾನುಕಾಂತದ ಲಿಂಗ ವಾಯುವಿ ।
ಗಾ ನವೀನ ಸುಗಂಧಲಿಂಗಂ ।
ಸ್ಥಾನಗಳ ವಿಸ್ತರಿಸಿ ಕೇಳಿವರೊಲಿದು ಧರಿಸಿಪ್ಪ ॥ ೮೬ ॥

ಶರಣಮಣಿ ದೇವೇ೧ಶ ಲಿಂಗವ ।
ಶಿರದೊಳವಧರಿಸಿದನು ದಾನವ ।
ರುರದೊಳಗೆ ಕಾರ್ಬೊನ್ನ ಪಾತ್ರೆಯೊಳಿರಿಸಿಕೊಂಡಿಹರು ॥
ಪರಮರಹ ಕಂಸಾದ್ಯ ಮನುಮುನಿ ।
ವರರು ಕಂಠದೊಳಾಂತರಳಿಕೋ ।
ತ್ತರದಿ ಸೂಡಿಹರಕ್ಷಪಾದ ಪ್ರಮುಖ ಮುನಿವರರು ॥ ೮೭ ॥

ಸರಸಿಜೋದ್ಭವ ಹೃದಯದೊಳು ಮುರ ।
ಹರ ಕರಸ್ಥಳದೊಳಗೆ ವಿಧುಭಾ ।
ಸ್ಕರರು ಗಳದೊಳು ರುದ್ರರಮುಕ್ಯೈಕ್ಯದೊಳು ಲಿಂಗವನು ॥
ಧರಿಸಿಹರು ನಿಮಿಷೋನ್ಮಿಮಿಷ ಜಾ ।
ಗರದಿ ಸ್ವಪ್ನ ಸುಷುಪ್ತಿಯೊಳು ಸಂ ।
ಚರಿಸುವಲ್ಲಿರ್ದಲ್ಲಿ ಶುಚಿಯೊಳಗಶುಚಿಯಾಗದಲಿ ॥ ೮೮ ॥

೧ ನಂದೀ (ಇ, ಉ.)

ಇದು ಸಕಲವೇದಂಗಳೊಳು ಶಾ |
ಸ್ತ್ರದೊಳು ಶ್ರುತಿಯೊಳು ಸ್ಮೃತಿಗಳೊಳು ನಿಗ |
ಮದೊಳು ಪೌರಾಣಾದಿ ಸದ್ವಾಕ್ಯದೊಳಗಾಗಮದಿ ||
ಅಧಿಕ ಗೌತುಮ ವ್ಯಾಸ ಭೃಗು ನಾ |
ರದ ವಸಿಷ್ಠ ಕಣಾದ ಮತದೊಳು |
ವಿದಿತವಾಗಿಹುದೆಂದು ಗುರುರಾಯಂ ನಿರೂಪಿಸಿದ || ೮೯ ||

ನೆನೆದ ಕಾರ್ಯಂ ಸಿದ್ಧಿಸಲಿ ಯೌ |
ವನಮದಾಗಲಿ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿ ಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನ ಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೯೦ ||

**ಅಂತು ಸಂಧಿ ೩ಕ್ಕಂ ಪದ ೨೧೭ಕ್ಕಂ ಮಂಗಳಂ**



೪ನೆಯ ಸಂಧಿ

## ಗೋವಿಂದಭಟ್ಟನಿಗೆ ದೀಕ್ಷೆಯಾಗಿ ಶಂಕರದಾಸಿಮಯ್ಯನೆಂಬ ಹೆಸರು ಬಂದದ್ದು

**ಸೂಚನೆ**

ಪರಮ ಶ್ರೀಗುರು ಜಡೆಯ ಶಂಕರ |
ನಿರುತದಿಂ ಗೋವಿಂದರಸರಿಗೆ |
ಪರಮ ದೀಕ್ಷೆಯ ಮಾಡಿ ಬೋಧೆಯನೊರೆದನತಿ ಮುದದಿ ||

ಕಾಲಕರ್ಮಾತೀತ ಗಿರಿಜಾ |
ಲೋಲ ಭವರುಜದೂರ ಪಾಪತ |
ಮಾಲಭಾಸ್ಕರ ನಿಃಕಲಂಕ ನಿರಾಳನಪ್ರಮೆಯ ||
ಭಾಳನೇತ್ರ ಸರೋಜಗರ್ಭಕ |
ಪಾಲಪಾಣಿ ಮಹಾತ್ಮ ತ್ರಿಜಗತ್ |
ಪಾಲ ಪಂಚಾನನ ಪರಮಶಿವಗೊಲಿದು ಮನ್ನಿಸುವೆ || ೧ ||

ಇಂತೊರೆದ ಸದ್ಬೋಧೆ ಮನದೊಳು |
ಗೊಂತುಗೊಂಡುದು ಚಿತ್ತ ನಿರ್ಕುಳಿ |
ಯಂ ತಳೆದುದವಯವದೊಳಗೆ ಗುಡಿಗಟ್ಟಿದುವು ರೋಮ ||
ಸಂತಸದೊಳೋಲಾಡಿ ಲಿಂಗದ |
ಭ್ರಾಂತಿನಿಂ ಹರುಷಾಶ್ರು ನೇತ್ರದಿ |
ಪಂತಿಯಾದುದು ಶಿವ ಶಿವಾ ಗೋವಿಂದಭಟ್ಟರಿಗೆ || ೨ ||

ಶ್ರೀಗುರುಪಿನಂಘ್ರಿಗೆ ನಮಿಸಿಯನು |
ರಾಗದಿಂ ಕೈಮುಗಿದು ದೀಕ್ಷೆಯ |
ನೀಗವೇಯೆನಗೀಯಬೇಕೆಂದೊಲಿದು ಬಿನ್ನೈಸೆ ||
ಆಗ ಜಂಗಮರಾಯನಮೃತಪ್ರ |
ಯೋಗ ಕಾಲದೊಳೊಲವಿನಿಂ ಶೈ |
ವಾಗಮೋಕ್ತದೊಳೆಸಗಿದನು ಗೌರವ ಗಡಾವಣೆಯ || ೩ ||

ಕರೆದು ಶಿಷ್ಯನ ಮಂತ್ರಮುಖದಿಂ |
ಶರಿರ ಜೀವಾತ್ಮತ್ರಯುವ ವಿ |
ಸ್ತರದಿ ಶುದ್ಧವ ಮಾಡಿ ಕರ್ಮೇಂದ್ರಿಯದ ಲಿಖಿತವನು ||
ಹರಲಿಖಿತವಂ ಮಾಡಿಯಂತಃ |
ಕರಣವರ್ತನೆ ಸುಸರವಾಗಲೊ |
ಡರಿ ವಿವೇಕದಿ ಪಂಚಗವ್ಯವ ಕೊಟ್ಟನಾ ಮಹಿಮ || ೪ ||

ವಿರಹದಿಂದುಪವಾಸಿಯಾಗಿಹ |
ಶರಣನಾತ್ಮಗೆ ಪಂಚಭೂತೇ |
ಶ್ವರರ ಕಾಣಿಸಿ ಭೂತಶುದ್ಧನ ಮಾಡಿ ಸಂತಸದಿ ||
ಚರಣಕೆರಗಿಸಿಕೊಂಡು ಮಂತ್ರದಿ |
ಕರವ ಪಿಡಿದೊಲಿದೆತ್ತಿಯಾಕ್ಷಣ |
ಧರಣಿ ಚೌಕಾಸನವ ಸುದ್ದವ ಮಾಡಿ ಕುಳ್ಳಿರಿಸಿ || ೫ ||

ಪಟುತರದೊಳಿಹ ಪಂಚಲೋಹದ |
ಘಟಗಳೊಳು ಮಿಗೆ ವಿವಿಧ ಗಂಗೋ |
ತ್ಕಟದುದಕಮಂ ತೀವಿ ತೆತ್ತಿಸಿ ಪಂಚ ಪಲ್ಲವದ ||
ದಿಟವೆನಿಸಿ ರಾಜಿಸಿದ ನಾಲ್ಕರ |
ಮಟದ ದಿಕ್ಕುಗಳರಿದಿರಿಸಿ ತತ್ |
ಕಟದಿ ತಂಡುಲವಿಟ್ಟು ಮಧ್ಯದಿ ಗುರುಕಲಶವಿಟ್ಟು || ೬ ||

ಸೂತ್ರ ಪಂಚಕಗಳ ಬಿಗಿದು ಫಳ |
ಪತ್ರಪುಷ್ಪವನಿರಿಸಿ ಜಲವ ಪ |
ವಿತ್ರ ಸಲಿಲವ ಮಾಡಿ ಮಂತ್ರದಿ ಜಲದೊಳಿಂಬಿಟ್ಟು ||
ಗಾತ್ರವೆನಿಪ ಕುಮಾರ ಠಾವಂ |
ಪುತ್ರನ ಕರಸ್ಥಲವ ಶೋಧಿಸಿ |
ಚಿತ್ರಿಸಿದನಾ ಶಿಷ್ಯನಂಗದಿ ಭಸಿತರಚನೆಯನು || ೭ ||

ಮೋಕ್ಷವೇ ಮಣಿಯಾದ ವರ ರು |
ದ್ರಾಕ್ಷೆದೊಡಗಳ ತೊಡಿಸಿ ನುತ ವಿಮ |
ಲಾಕ್ಷಯದೊಳಿರಿಸಿರ್ದ ಮೂರ್ತಿಯ ತೆಗೆದು ಪಾಷಾಣ ||
ಪಕ್ಷವಂ ಪರಿಹರಿಸಿ ಪ್ರಾಣವ |
ಲಕ್ಷಿಸಿದ ಲಿಂಗಕ್ಕೆ ಮಿಗೆ ಪಂ |
ಚಾಕ್ಷರದಿ ಮಜ್ಜನಕೆರೆದು ವಸ್ತ್ರವ ಸಮರ್ಪಿಸಿದ || ೮ ||

ಚಂದನಾಕ್ಷತೆ ಪುಷ್ಪ ಧೂಪದ |
ಗಂಧಮಂ ದೀಪಂ ವಿಶೇಷಂ |
ನಂದವಹ ಕರ್ಪೂರವೀಳ್ಯೆಯ ಮಂತ್ರಪುಷ್ಪಗಳ ||
ವಂದನೆಯನುಷ್ಠಾನ ಕೃತ್ಯದೊ |
ಳೊಂದುಳಿಯದೊಲು ಮಾಡಿ ಸತ್ಕೃಪೆ |
ಯಿಂದೆ ಶಿಷ್ಯನುರಸ್ಥಳದೊಳವ¹ಧರಿಸಿದಂ ನಿಜವ || ೯ ||

ವೇದಮಾರ್ಗದೊಳೆಸೆವ ವರ ಮಂ ।
ತ್ರಾದರಣೆ ತಪ್ಪದೆ ಮರುತ್ಪ್ರಾ |
ಣೋದಯುವ ಪರಿಹರಿಸಿ ಲಿಂಗಪ್ರಾಣಿಯನು ಮಾಡಿ ..
²ಆದರಿಸಿ ಮಗನಂಗದೊಳಗ |
ಗ್ರೋದಕವ ತಳಿದುರು ಭಸಿತವಿ |
ಟ್ಟಾಧಿಕಾರವ ಭಾಳದೊಳು ವಿಸ್ತರಿಸಿದಂ ಮಹಿಮ² || ೧೦ ||

ಪಕ್ಷದಿಂ ಪರಿವಿಡಿಯೊಳಿರ್ದ ದು |
ರಕ್ಷರವ ತೊಡೆದಮಲ ಶಿವಲಿಖಿ |
ತಾಕ್ಷರವ ಬರೆದಾಗ ಮಸ್ತಕದೊಳಗೆ ಕರವಿಟ್ಟು ||
ಮೋಕ್ಷಮಾರ್ಗಾಚರಣೆಯಹ ಪಂ |
ಚಾಕ್ಷರವ ಕರ್ಣದಿ ನಿರೂಪಿಸಿ |
ದ ಕ್ಷಮಾದಮೆಯಾಂತ ಸದ್ಗುರು ಜಂಗಮೋತ್ತಮನು || ೧೧ ||

ಕಂಗೊಳಿಸುವೊಲು ಜಡೆಯ ಶಂಕರ |
ಜಂಗಮತ್ವವ ತಾಳಿ ಭಕ್ತನ |
ಸಂಗವಾದ ಜಡತ್ವವನು ಬಿಡಿಸಿದನು ಗುರುವಾಗಿ ||
ಪೊಂಗಿಯಿಷ್ಟವನಿತ್ತನಂಗದಿ |
ಲಿಂಗವಾಗಿಯೆ ರಮಿಸಿದಂ ಗುರು |
ಲಿಂಗ ಜಂಗಮವೇಕವೆಂಬಾ ಶ್ರುತಿಯರಿಯಲಾಯ್ತು || ೧೨ ||

ನೀನೆ ನಿಜ ಗುರುವಾಗಿ ದೀಕ್ಷೆಯ |
ಮಾನಿನಿಗೆ ಕೊಡು ಮಗನೆ ಎನೆ ಕೇ |
ಳ್ದಾನು ದೀಕ್ಷೆಯ ಮಾಡಬಹುದೇ ವಧುವಿಗೆಂದೆನಲು ||
ಆ ನುತಾಮ್ನಾಯೋಕ್ತವಹ ಸ್ಮೃ |
ತ್ಯಾನುಭವದೊಳಗೊಳವು ಮನದೊಳು |
ನೀನು ಸಂಕಲ್ಪಿಸದೆ ಮಾಡೈ ದೀಕ್ಷೆಯನು ಸತಿಗೆ || ೧೩ ||

೧ ಳಂ (ಉ.) ೨-೨ ಮೋದ ಮಾಯಾ ಭ್ರಮೆಯ ವರ್ಜಿಸಿ । ಸಾದರದಿ ಲಿಂಗತ್ರಯಂಗಳ । ಭೇದ ಭೇದಗಳೆಲ್ಲವನು ತಿಳುಪಿದನು ಗುರುರಾಯ (ಇ.)

ಚಾರು ಧನವಂ ಜಂಗಮಕ್ಕೆ ಶ |
ರೀರಮಂ ಗುರುವಿಂಗೆ ಮನಮಂ |
ಸೇರಿ ಲಿಂಗಕ್ಕೀವುದೇ ಶರಣರ್ಗುಚಿತ ಮಗನೇ ||
ವೀರಶೈವದೊಳರಸಗಂಗವ |
ನಾರಿಯೊಪ್ಪಿಸುವುದೆ ನಿರುತಮದು |
ಕಾರಣಂ ದೀಕ್ಷೆಯನು ವಧುವಿಗೆ ಮಾಡಬಹುದೆಂದ || ೧೪ ||

ಗುರುವಿನಾಜ್ಞೆಯೊಳಬಳೆಗಾ ಶಿವ |
ಶರಣರತ್ನಂ ತನಗೆ ಮಾಡಿದ |
ಪರಿವಿಡಿಯೊಳಾ ಕ್ರಿಯೆಯನೆಸಗಿ ವಿವೇಕದಿಂದಿತ್ತಂ ||
ಪರಮ ಲಿಂಗವನಾಗಳಾ ಸದ್ |
ಗುರುವಿಗಾನತರಾಗಿ ನಿಂದರು |
ಹರುಷದಿಂ ದಂಪತಿಯರೀಶ್ವರ ಪಾರ್ವತಿಗಳಂತೆ || ೧೫ ||

ಗುರುವೆ ಲಾಲಿಸು ನಿಮ್ಮ ನಿರ್ಮಳ |
ಕರಜನಿತದಿಂ ರೂಪಳಿದುದು |
ತ್ಕರದಿ ನೀವಿತ್ತಮಲ ಮಂತ್ರದಿ ಕ್ರಿಯೆಯುಳಿದುದಯ್ಯಾ ||
ಅರರೆ ನಾ ಗೋವಿಂದನಾಮವ |
ಧರಿಸಿ ಜೀವಿಸಲಾರೆನಿದನೀ |
ನೊರಸಿ ಮತ್ತೊಂದೊಳ್ಪೆಸರನಿಡಬೇಕು ತನಗೆಂದ || ೧೬ ||

ಪ್ರೇಮದಿಂ ನಸು ನಗೆಯೊಳಾ ಗುರು |
ಸ್ವಾಮಿ ಶಂಕರದಾಸನೆಂದತಿ |
ನಾಮಮಂ ಸದ್ಭಕ್ತನಿಗೆ ಶಿವದಾಸಿಯೆಂದೊಲಿದು ||
ನಾಮಮಂ ಸುದತಿಗೆ ಧರಿಸಿ ಸು |
ಕ್ಷೇಮದೊಳು ಗುರುವಿರಲು ಶರಣಲ |
ಲಾಮ ತನಗೊಂದಧಿಕ ಕಾಯಕವಾಗಬೇಕೆಂದ || ೧೭ ||

ಎಂದು ನುಡಿಯಲು ಪೂರ್ವದೊಳು ಗಿರಿ |
ನಂದನೆಯ ಘನಶಾಪವಾತಗೆ |
ಬಂದುದನು ಮನಸಿನೊಳು ನಿಶ್ಚಯಿಸುತ್ತ ಗುರುರಾಯ ||
ಎಂದನೆಳೆ ನಗೆ ಮಿರುಗುತಂ ಪೆಂ |
ಪಿಂದ ಶಂಕರದಾಸಿಯೊಡನೆಲೆ |
ಕಂದ ಕೇಳ್ಳೈ ನಿನಗೆ ಹಿತವಹ ಕಾಯಕವನೆಂದ || ೧೮ ||

ಸಾಯುಸಮವಿಲ್ಲದ ಪರರ ನಲ |
ದಾಯತವ ಕೆಡಿಸದ ಮಹೋಗ್ರದಿ |
ಕಾಯಮಂ ದಂಡಿಸದ ಕೃತ್ಯಕ್ಕರಿದೆನಿಸದಿರ್ಪ ||
ಕಾಯಕವು ಕೇಳ್ ಮಗನೆ ಸೂಜಿಯು |
ಕಾಯಕವ ಮಾಡಿನಲು ಚಿಪ್ಪಿಗ |
ಕಾಯಕಮೆ ಯೋಗ್ಯವು ನಿರೂಪಿಸಬೇಕು ತನಗೆಂದ || ೧೯ ||

ಮಗನೆ ಲಾಲಿಸು ಶಿವನ ಮುಖದೊಳ |
ಗೊಗೆದರೀ ಬಾಹ್ಮಣರು ಶಿವಭುಜ |
ದೊಳಗೊಗೆದ ಕ್ಷತ್ರಿಯು ಶಿವನ ತೊಡೆಯೊಳು ಜನಿತ ವೈಶ್ಯಂ ||
ಒಗೆದ ಶೂದ್ರನು ಶಿವನ ಪಾದದೊ |
ಳೊಗೆದವೀ ನಾಲ್ಕಧಿಕ ಜಾತಿಯೊ |
ಳಗೆ ಸಕಲ ವರ್ಣಂಗಳವರಧಿದೈವಮಂ ಪೇಳ್ಕೆಂ || ೨೦ ||

ಭೂಸುರರ್ಗೆ ಮುನಿಗಳು ಸ್ವರ್ಗನಿ |
ವಾಸಿಗಳು ಕ್ಷತ್ರಿಯರಿಗೆ ಕ್ಷ್ಮಾಕ |
ಧೀಶ ವೈಶ್ಯರಿಗಶ್ವರರು ಶೂದ್ರರಿಗೆ ಕಿನ್ನರರು ||
ಈಶರಾ ವಾಣಿಜ್ಯರಿಗೆ ನೈ |
ಶೇಷ ಕಿಂಪುರುಷರು ಕುಲಾಲರಿ |
ಗೈಸೆ ಗಂಧರ್ವರು ಧ್ವಜಕರಿಗೆ ಮಗನೆ ಕೇಳೆಂದ || ೨೧ ||

ಗರುಡರಾದ್ಯರು ಮಧು ಸುಕೃತ್ಯರಿ |
ಗುರಗರಧಿಕರು ವೇಣಿಕರ್ಮರಿ |
ಗುರು ವಸುಗಳಧಿದೈವಮಪ್ಪರು ವಸ್ತ್ರಭಿನ್ನರಿಗೆ ||
ಸುರದುಘಂ ನಂದಕರಿಗಶ್ವಿನಿ |
ಯರು ವಸನಕಾರಕರಿಗಾ ಸಾ |
ಗರಮಧಿಕ ರಜಕರಿಗೆ ದಿಗ್ಗಜವಧಿಕ ಸೂತರಿಗೆ || ೨೨ ||

ಧರಣಿಯೊಳು ಕ್ಷೌರಿಕರು ರಾಕ್ಷಸ |
ಹೊರಳಿಯೊಳು ಮ್ಲೇಂಛರು ಮಹಾಭೂ |
ಧರದೊಳಗೆ ಚರ್ಮಕರು ಚಾಂಡಾಲರುಗಳಗ್ನಿಯೊಳು ||
ಸ್ಫುರಿಸಿದರು ಕೇಳಿಂತು ಪದಿನೆಂ |
ಟುರುವ ರಚನೆಯ ಜಾತಿಗಳ ವಿ |
ಸ್ತರಿಸಿ ಪೇಳುವುದಾದಿಯೊಳು ಬ್ರಹ್ಮಾಂಡ ಕಾಂಡದೊಳು || ೨೩ ||

ಕೇಳು ಶಂಕರದಾಸಿಮಯ್ಯನೆ |
ಪೇಳುವೆನು ಚಿಪ್ಪಿಗರ ಪೂರ್ವವ |
ಜಾಳು ಮಾತುಗಳೆನ್ನದಿರು ಬ್ರಹ್ಮಾಂಡ ಪೌರಣ ||
ಪೇಳಿದಂದದಿ ಸರ್ವ ಶೂನ್ಯವ |
ತಾಳಿ ಘೋಷಾಘೋಷಪೂರಣ |
ದೇಳಿಗೆಯೊಳಿಹುದುರೆ ಘನಾಘನಖಂಡನವನುಳಿದು || ೨೪ ||

ಸಕಲ ನಿಃಕಲವೆಂಬ ತತ್ವ |
ಪ್ರಕಟವಾಗದ ಮೊದಲೆ ಲೋಕ |
ಪ್ರಕರ ಜನಿಸದ ಮೊದಲೆ ಚಂದ್ರಾದಿತ್ಯರಿಂ ಮೊದಲೆ ||
ಅಖಿಳ ಭೂತಾದಿಗಳ ಜನನಾ |
ದಿಕದಿ ಕಾಲತ್ರಯ ವಿಚಾರದ |
ಮುಖವ ಕಾಣದ ಮೊದಲೆ ಜನಿಸಿತು ಶುದ್ಧ ಶಿವತತ್ವ || ೨೫ ||

ಆ ಶಿವ ಪರಾಶಕ್ತಿಗೊಗೆದ ಮ |
ಹಾ ಸದಾಶಿವನಾದಿಶಕ್ತಿ ಸ |
ದಾಶಿವನಿಗೊಗೆದಂ ಮಹೇಶ್ವರನಾ ಮಹೇಶ್ವರನು ||
ಶೇಷದಿಚ್ಛಾಶಕ್ತಿಗೊಗೆದಂ |
ಈಶನೊಲವಿಂ ಜ್ಞಾನಶಕ್ತಿಗು |
ಈಶಗವತರಿಸಿದನು ರುದ್ರಂ ಪಂಚಮುಖಸಹಿತ || ೨೬ ||

ಆ ಮಹಾರುದ್ರಗು ಕ್ರಿಯಾಶ |
ಕ್ತೀವುತದಿ ಜನಿಸಿದ ಮುರಾಂತಕ |
ನಾ ಮುರಾಂತಕ ಲಕ್ಷ್ಮಿಗುರೆ ಜನಿಸಿದ ಪಿತಾಮಹನು ||
ಹೇಮಗರ್ಭಗೆ ಶಾರದೆಗೆಯ |
ತ್ರೀ ಮರೀಚಿ ಪುಲಸ್ತ್ಯ ಪುಲಹಕ್ರ |
ತೂ ಮಹಾ ಭೃಗು ದಕ್ಷ ಕಶ್ಯಪನಾಂಗಿರಸರೆಂಬ || ೨೭ ||

ಶ್ರೀಮುದಾ ನವ ಬ್ರಹ್ಮರೊಗೆದರ್ |
ಭೂಮಿ ಮೊದಲಾದಖಿಳ ಲೋಕಕೋ |
ದ್ದಾಮಮಂ ಸೃಜಯಿಸಿದರುಂ ನಳಿನಜನನುಜ್ಞೆಯಲಿ ||
ಸೋಮ ಸೂರ್ಯಪ್ರಮುಖ ನಕ್ಷ |
ತ್ರಾಮರರ ಸ್ವರ್ಗದೊಳುರಗರಂ |
ಭೂಮಿಯಿಂ ಕೆಳಗಡೆಯ ಪಡೆದಿಂಬಿಟ್ಟರೊಲವಿಂದೆ || ೨೮ ||

ಧರಣಿಯೊಳು ದ್ವೀಪಾದ್ರಿ ಗಂಗಾ |
ಶರಧಿ ಪಕ್ಷಿ ಮೃಗ ತ್ರಸಂಗಳ |
ವಿರಚಿಸಿದರೊಲವಿಂದಲಾ ಜೀವನಕಧಿಕರಾದ ||
ನರರ ಪಡೆದರು ನರರೊಳಗೆ ವಿ |
ಸ್ತರಿಸಿದರು ಪದಿನೆಂಟು ಜಾತಿಯು |
ನೆರಡೆರಡ ವರ್ಣಕ್ಕೆಯೋರೊರ್ವಜರಧಿಕರಾಗಿ || ೨೯ ||

ಅತ್ರಿಯೆಂಬಾ ಬ್ರಹ್ಮ ಚಿಪ್ಪಿಗ |
ಗೋತ್ರನಾಯಕನಾತನ ಸುಚಾ |
ರಿತ್ರಮಂ ಬಣ್ಣಿಸುವೆ ಶಂಕರದಾಸಿ ಕೇಳಯ್ಯ ||
ಗಾತ್ರವಹ ಜೀವಾತ್ಮ ಸೂಚಿಕೆ |
ಸೂತ್ರ ಮಾಯಾಪಾಶಗಳು ಕಾ |
ಲತ್ರಯದ ಕತ್ತರಿವಿಡಿದು ಭವಬಂಧವಸ್ತ್ರಗಳ || ೩೦ ||

ಕತ್ತರಿಸುವಂ ಮೋಹಸರಿಯಂ |
ಪತ್ತಿಸುವನಜ್ಞಾನ ಮಾರ್ಗದ |
ಪತ್ತಿಯಂ ಪೂರ್ಣಿಸುವನಾ ವಿವಿಧಾಂತರಂಗದೊಳು ||
ಉತ್ತಮಾಂಗಕಿರೀಟರೂಪಕ |
ದೊತ್ತರಿದು ಚಿಪ್ಪುಗಳ ಟೆಂಕಿಸಿ |
ಕತ್ತಲೆಯ ವಾಂಛಾ ಕಸೆಗಳಂ ಪೊಲಿದನಗ್ರದೊಳು || ೩೧ ||

ಚಾರುತರವಹ ಸಪ್ತಧಾತಿಂ |
ಭೋರಯಿಪ ಪಟ್ಟೆಯನು ಸಕಲ ಶ |
ರೀರದಂಗಿಯು ಪೊಲಿದುವಾಯುಃಕರ್ಮದೆಳೆಗಳನು |
ಸೇರಿಸಿಯೆ ದಳೆದಂಬರವ ವಿ |
೧ಸ್ತಾರದಾಕಾಶವನು ಮಿಗೆ೧ ಗೂ |
ಡಾರಮಂ ಪೊಲಿದೆತ್ತಿದಂ ಕನಕಾದ್ರಿ ಕಂಬದೊಳು || ೩೨ ||

ಚಿತ್ರಪತ್ರವನೀ ತೆರದಿ ಪೊಲಿ |
ವತ್ರಿಬ್ರಹ್ಮನ ವಂಶಜಾತರು |
ವಸ್ತ್ರಭಿನ್ನಕರೆನಿಪ ಸೂಜಿಯ ಕಾಯಕಾನ್ವಿತರು ||
ಧಾತ್ರಿಯೊಳು ಬಲ್ಲಹರು ಪರಮ ಪ |
ವಿತ್ರರೂಪರು ಚಾರುಸುಗುಣ ಚ |
ರಿತ್ರರೆಂದಾ ಗುರು ನಿರೂಪಿಸಿದಂ ಶರಣನೊಡನೆ || ೩೩ ||

---

೧-೧ ಸ್ತರಿಸಿ ಹೊಲಿದಾಕಾಶವನು (ಇ.)

ಹೀನ ಸದ್ವರ್ತಕರು ವಿವಿಧಭಿ |
ಮಾನಿಗಳು ಸಜ್ಜನರು ಕುಶಲರು |
ಹೀನವೆಳ್ಳನಿತಿಲ್ಲದಾಚಾರದೊಳು ವರ್ತಿಪರು ||
ಏನ ಬಣ್ಣಿಪೆ ಬಿನ್ನಣದ ವಿ |
ದ್ಯಾನುಭವಿಗಳು ಕೋವಿದರು ಮಹಿ |
ಮಾನುಬಂಧರು ಮಗನೆ ಸೂಜಿಯ ಕಾಯಕಾನ್ವಿತರು || ೩೪ ||

ನುಡಿಯರನೃತವನಧಮ ಮಾರ್ಗದಿ |
ನಡೆಯರಲ್ಲದ ವರ್ತನಂಗಳ |
ಹಿಡಿಯರಜ್ಞಾನಾಚರಣೆಗತಿ ದೂರವಾಗಿಹರು ||
ಕೊಡುವರೊಲವಿಂ ತೋರಹಸ್ತದಿ |
ಕಡುಗಲಿಗಳೆನಿಸುವರು ವಾದಿಸಿ |
ದೆಡೆಗೆ ಸೂಜಿಯು ಕಾಯಕದವರು ಮಗನೆ ಕೇಳೆಂದ || ೩೫ ||

ಎಂದ ಮಾತನು ಕೇಳಿ ಪರಮಾ |
ನಂದದೊಳು ತೇಂಕಾಡಿ ಸಂತಸ |
ದಿಂದ ಶಂಕರದಾಸಿಮಯ್ಯಂ ಗುರುಪದಂಗಳಿಗೆ ||
ವಂದಿಸಿಯೆ ಕೈಗಳ ಮುಗಿಯುತಿಂ |
ತೆಂದು ಬಿನ್ನವಿಸಿದನು ಗುರುವಿನ |
ಮುಂದೆ ನಿಂದಾ ಭಕ್ತಿಭಾವದೊಳೇನ ಬಣ್ಣಿಸುವೆ || ೩೬ ||

ಜೀಯ ಪಾಲಿಪುದಯ್ಯ ಸೂಜಿಯ |
ಕಾಯಕವನೆಂದಡ್ಡ ಬಿದ್ದು ಸ |
ದಾಯತದಿ ಕೈಕೊಂಡ ಶಂಕರದಾಸಿಮಯ್ಯಗಳು ||
ಕಾಯಜಾಂತಕರೂಪ ಮೋಕ್ಷವಿ |
ಡಾಯ ಸದ್ಗುರು ಮೂರ್ತಿ ಜಂಗಮ |
ರಾಯ ಸನ್ಮಾರ್ಗಂ ನಿರೂಪಿಸಿದಂ ಶರಣಮಣಿಗೆ || ೩೭ ||

ಕಂಗೊಳಿಪ ಸದ್ಗುರು ಮಹಾಶಿವ |
ಲಿಂಗ ಸನ್ಮತ ಮಾರ್ಗರೆನಿಸುವ |
ಜಂಗಮಾತ್ಮಕನಾಗು ಪಾದೋದಕ ಪ್ರಸಾದದೊಳು ||
ಪೊಂಗಿ ತನು ಮನ ಧನಗಳನು ತ್ರೈ |
ಲಿಂಗಗಳೊಳರ್ಪಿಸು ಭವಿಗಳೊಳು |
ಸಂಗವಂ ಮಾಡದಿರು ಜೀವನ ಗುಣವ ಪರಿಹರಿಸು || ೩೮ ||

ಆಮಲವಾದ ಪದಾರ್ಥಗಳ ಲಿಂ |
ಗ ಮುಖದಿಂ ಭೋಗಿಸುತ[1] ವೀರಾ |
ಗಮದ ಪದ್ಧತಿಯೆಂತು ಪೇಳಿಹುದಂತೆ ಮಾರ್ಗದೊಳು ||
ಕ್ರಮಿಸು ನಾಹಂಕೋಹಮೆಂಬ |
ಭ್ರಮೆಯ ಬಿಡು ದಾಸೋಹಿ ನೀನೊಂ |
ದೆ ಮನದಿಂ ನಿಶ್ಚಯಿಸು ನಿಷ್ಠೆಯನಿಕ್ಕು ಲಿಂಗದೊಳು || ೩೯ ||

ಲಿಂಗದೇಹಿಗಳೆಲ್ಲರುಂ ಶಿವ |
ಲಿಂಗವೆಂದೇ ನಿಶ್ಚಯಿಸು ಲಿಂ |
ಗಾಂಗಿಗಳೊಳವಗುಣವನರಸದಿರವರ ನಿಂದಿಪರ ||
ಕಂಗಳೊಳು ನೋಡದಿರು ನುಡಿಸದಿ |
ರಂಗದಿಚ್ಛೆಯ ಬಯಸದಿರು ಶ್ವೇ |
ತಾಂಗನಲ್ಲದೆ ಬಿನುಗು ದೈವವ ನೆನೆಯದಿರು ಮಗನೆ || ೪೦ ||

ಈಶಭಕ್ತರು ಮನೆಗೆ ಬಂದರೆ |
ಯಾಸನವ ಕೊಟ್ಟೆದ್ದು ಕುಳ್ಳಿರು |
ಸಾಸ ಮೋಕ್ಷದೊಳಿರಲಿ ಬಾಹ್ಯದ ಕ್ರಿಯೆಗಳೊಳು ಜ್ಞಾನ ||
ವಾಸನೆಯೊಳಿರು ಶರಣರಲೆದೊಡೆ |
ಬೇಸರಿಸದಾ[2]ಚಾರಭಗ್ನರ |
ವಾಸವನು ಹೊಗದಿರು ವಿಚಾರಿಸು ಕಾರ್ಯಕಾರಣವ || ೪೧ ||

ಭೀತನಾಗಿರು ಶರಣರಲಿ ವಿ |
ಭೂತಿಯನು ಕೊಡೆ ಕೈಕೊಳಲ್ಲಿಗೆ |
ಮಾತು ಹಿಂದಾಗದಿರು ನಿಜಲಿಂಗೈಕ್ಯದೊಳಗೆಯ್ದು ||
ಸೂತಕವನಾ ಕಲ್ಪಿ[3]ಸದೆ ನಿ |
ರ್ಭೀತನಾಗಿರು ಪರಸಮಯದೊಳು |
ಖ್ಯಾತಿಗತಿ ಬೆರೆಯದಿರು ವ್ಯಾಧಿಗಳಡಸೆ ನಡುಗಿದರು || ೪೨ ||

ಮೊದಲು ತೆಗೆದವನಳಿದೊಡಿತ್ತವ |
ನುದರದೊಳು ಸಂಭವಿಸಿ ತಿದ್ದುವ |
ಮೊದಲು ಕೊಟ್ಟವನಳಿಯೆ ತೆಗೆದನ ಬಸುರೊಳವತರಿಸಿ ||
ಸದನಮಂ ತಕ್ಕೊಂಬ ಕೇಳಿದು |
ವಿದಿತ ಸಾಲವ ಕೊಡಿ ಶಿವೈಕ್ಯಗೆ |
ಸದು ಭಕುತರೊಳು ತೆಗೆ ಭವಿಗೆ ಕೊಡಬೇಡ ತೆಗೆಯದಿರು || ೪೩ ||

---
೧ ಭೋಗಿಸು ಸು (ಉ.) ೨ ಬೇಸರದಿರಾ (ಇ, ಉ.) ೩ ನಾರೋಪಿ (ಇ, ಉ.)

ನಡೆಯುತಿಡಹುವ ಕಾಲದೊಳು ಬಿ |
ಕ್ಕಳಿಕೆಯಿಕ್ಕಿದ ವೇಳೆಯೊಳು ಕೆ |
ಮ್ಮಡಿಸಿದಾಕ್ಷಣ ಸೀನು ಬಂದಾಗಾಗುಳಿಸುವಾಗ ||
ಕೆಡಹು ಕಾಲದೊಳೀಳುವಾಗುಂ |
ಬಿಡೆಯೊಳಾತ್ಮಗೆ ದೇಹಕುಂ ಬಿಡು |
ಗಡೆಯಹುದು ತತ್ಕಾಲದೊಳು ನೆನೆ ಮಗನೆ ಪರಶಿವನ || ೪೪ ||

ಭಸಿತವಂ ಭಾಳದೊಳಗುದ್ಧೂ |
ಳಿಸು ಮಗನೆ ರಾತ್ರಿಯೊಳು ಜಲವ ಬೆ |
ರಸದೆ ತಮದೊಳಗುದಕಯುತ ಭಸ್ಮವ ಧರಿಸೆ ಪಾಪಂ ||
ನಿಶಿಯೊಳಗೆ ಶಿವಲಿಂಗದೇವನ |
ಕುಸುಮ ಸಹಿತವಧರಿಸದಿರು ಕೇಳ್ |
ನಿಶಿಯೊಳೇರಿಸಿದರಳು ಮಂದರಮೇರುವಿಂ ಭಾರಂ || ೪೫ ||

ಪರಮ ಲಿಂಗದ ಗೋಮುಖವ ಹೆ |
ಬ್ಬೆರಲೊಳಗೆ ಪಿಡಿ ಲಿಂಗಪೀಠವ |
ಕಿರಿವೆರಲೊಳೊಲವಿಂ ಗ್ರಹಿಸಿಯಭಿಷೇಕಮಂ ಮಾಡು ||
ಕರತಳದ ಮಧ್ಯದೊಳು ಲಿಂಗವ |
ಧರಿಸಿ ಭ್ರೂಮಧ್ಯದ ಸಮದೆ ತತ್ |
ಕರವನಿರಿಸಿ ನಿರೀಕ್ಷಿಸೈ ಮನದಣಿವ ಪರಿಯಂತ || ೪೬ ||

ಎರಡನೆಯ ಮೂರನೆಯ ಬೆರಲೊಳ |
ಗರಲ ತೆಗೆದೇರಿಸು ಶಿವಗೆ ಪೆರ್ |
ವೆರಲು ತರ್ಜನ್ಯದೊಳು ಶಿವನಿರ್ಮಾಲ್ಯಮಂ ಬಿಸುಡು ||
ವರಪವಿತ್ರಾಂಗುಲಿಯೊಳಗೆ ಶಂ |
ಕರಗೆ ಗಂಧವನರ್ಪಿಸೈ ಪೆರ್ |
ಬೆರಲನಾಮಿಕದಿಂದಲಕ್ಷತೆಯಂ ಮೃಡಗೆ ಸಲಿಸು || ೪೭ ||

ಲಿಂಗದೇವರನೊಂದು ವಸ್ತ್ರದೊ |
ಳಂಗದೊಳು ಧರಿಸುತ್ತಮಳ ದೇ |
ವಾಂಗಮುಖವಸ್ತ್ರಗಳ ಮೂರರೊಳವಧರಿಸು ಮೇಣು ||
ರಂಗುವೆತ್ತಿಹ ಪಂಚವಸ್ತ್ರದಿ |
ಲಿಂಗವನು ಯಜ್ಞೋಪವೀತದ |
ಸಂಗದೊಳು ಧರಿಸೊಲಿದು ವಿವಿಧನುಭಾವದೊಳು ಮಗನೆ || ೪೮ ||

ವ್ಯಾಪಿಸಿದುದಾ ತತ್ಸಮಂತೆ |
ಜ್ಞೋಪವೀತಮಿವಾಯೆನಿಪ ಶ್ರುತಿ |
ಯಾ ಪರಿಯ ತಿಳಿದವಧರಿಸಿದರು ಸುರನರೋರಗರು ||
ಆ ಪರಮಲಿಂಗವನು ನೀನೆ |
ಜ್ಞೋಪವೀತದೊಳವಧರಿಸಿದೊಡೆ |
ಶ್ರೀಪದಕ್ಕಧಿಕಾರಿಯಹೆ ಕೇಳೆಂದ ಗುರುನಾಥ || ೪೯ ||

ಆವನಾತ್ಮದಿ ಲಿಂಗಚೇತನ |
ಶೀವಿತಾಕ್ಷಣ ಪುಣ್ಯಮಂತ್ಯಜ |
ಗೇವಿಶಂತಿಯೆನಿಪ್ಪ ಶ್ರುತಿ ಪುಸಿಯಾದುದಾತಂಗೆ ||
ಆ ವಿಮಳ ಲಿಂಗೈಕ್ಯನೇ ಮಾ |
ದೇವ ಮಾಯಾಸಬಳನಹ ಬ್ರ |
ಹ್ಮಾವರಣಮವಗಿಲ್ಲಮವ ಪರಬೊಮ್ಮನೆನಿಸುವನು || ೫೦ ||

ಪರಮ ಜ್ಯೋತಿಷ್ಟೋಮಯಾಗವ |
ವಿರಚಿಸಿದ ಫಲದಿಂದಲಪ್ಪುದು |
ಸುರಪದವಿ ಮತ್ತೇನ ಮಾಡಿದೊಡಾಗದೆಂಬ ಶ್ರುತಿ ||
ಅರರೆ ಪುಸಿಯದು ಲಿಂಗದೇವರ |
ಧರಿಸಿದಾತಗೆ ಮೋಕ್ಷಲಕ್ಷ್ಮೀ |
ವರನಿವಾಸನವಾಗಿ ನಿತ್ಯಾನಂದದೊಳಗಿಪ್ಪ || ೫೧ ||

ಮೃಡನ ಭಕ್ತರು ನಿನ್ನ ಸದನಕೆ |
ನಡೆದು ಬರೆ ಶಿವಪೂಜೆ ಜಪಗಳ |
ನೊಡರುತಿದ್ದರು ತಜ್ಜಪವ ತದ್ದೇವ ಪೂಜೆಯನು ||
ಬಿಡು ಸ[1]ರಾಗದೊಳಿದ್ದಿದಿರ್ಗೊಂ |
ಡೊಡನೆ ಭಸಿತವನಿತ್ತು ಭಕ್ತಿಯೊ |
ಳಡಿಗೆರಗಿ ಬೆಸಗೊಳಲು ಜಪದಿಂ ಪೂಜೆಯಿಂದಧಿಕಂ || ೫೨ ||

ಪಿಡಿಯದಿರು ಪರಧನವನನೃತವ |
ನುಡಿಯದಿರು ಕೈಕೊಂಡ ನೇಮವ |
ನಡೆಸು ಘಟವುಳ್ಳನ್ನಬರ ಸದ್ಭಕ್ತಸಂಗವನು ||
ಬಿಡದಿರ್ದೈ ನೀ ಬಿಟ್ಟ ದ್ರವ್ಯವ |
ಕೊಡದಿರೀಶಾರ್ಚಕರಿಗೀಪರಿ |
ನಡೆದೊಡಿಹ ಪರ ಸಾಧನಂ ಕೇಳೆಂದನಾ ಮಹಿಮ || ೫೩ ||

---
೧ ಸು (ಉ.)

ಈಪರಿಯೊಳರ್ಚಿಸುತೆ ಸರ್ವ |
ವ್ಯಾಪಕವನುಳಿದಿಷ್ಟಲಿಂಗ |
ವ್ಯಾಪಕದೊಳಿರ್ದೊಡೆ ನಿನಗೆ ಕಾಮ್ಯಾರ್ಥ ಮೋಕ್ಷಾರ್ಥ ||
ವ್ಯಾಪಿಸುವುದಾತ್ಮನೊಳು ಲಿಂಗ |
ಸ್ಥಾಪನವ ಮಾಡೆನುತ ದೇವ ನಿ |
ರೂಪಮಂ ಮಾಡಿದನು ಲಿಂಗದ ನಿಜಮಹತ್ವವನು || ೫೪ ||

ಲಿಂಗಮೇ ಮೋಕ್ಷಾನುಬಂಧಂ |
ಲಿಂಗಮೇ ಸರ್ವಪ್ರವೇ[1]ಶಂ |
ಲಿಂಗಮೇ ಚಿನ್ಮಯವಿಶೇಷಣಗುಣ ಪರಬ್ರಹ್ಮಂ ||
ಲಿಂಗಮೇ ಜ್ಞಾನಸ್ವರೂಪಂ |
ಲಿಂಗಮೇ ತತ್ವಾದಿ ಮೂಲಂ |
ಲಿಂಗವಿಸ್ತಾರವನು ಪೇಳುವೆ ಮಗನೆ ಕೇಳೆಂದ || ೫೫ ||

ಲಿತ್ವಮೇ ನಿಃಕಲದ ಭಾವಂ |
ಗತ್ವಮೇ ಸಕಲಸ್ವರೂಪಂ |
ಲಿತ್ವಗತ್ವದ ಮಧ್ಯಬಿಂದುವೆ ಸಕಲನಿಃಕಲವು ||
ಲಿತ್ವ ಬಿಂದು ಗಕಾರ ಕೂಡಿ ಮ |
ಹತ್ವ ಸಂಗತ ಲಿಂಗವೆನಿಸುತ |
ಸತ್ವ ರಾಜಸ ತಾಮಸವ ಕಳೆದಿರ್ಪುದಧಿಕತೆಯಿಂ || ೫೬ ||

ಮುಖ ಮುಖಾವಯವಂಗಳಕ್ಷಿಗೆ |
ಪ್ರಕಟಿಸದೆ ನಿಃಕಲಮೆನಿಸಿ ಗೋ |
ಳಕದವೊಲು ನೋಡಿದರೆ ನಯನಕೆ ಕಾಣಿಪುದರಿಂದ ||
ಸಕಲವಾಗಿ ಸುಮನದೊಳಗೆ ತೋ |
ರಿಕೆಯನುಳ್ಳುದುದಾಗಿ ಬಹುವಾ |
ಕ್ಯಕತಿ ಬಾರದುದಾಗಿ ನಿಃಕಲಸಕಲವೆನಿಸುವುದು || ೫೭ ||

ಪಾರ ಲಿಂಗಕ್ಷೇತ್ರ ಗೂಢ ಶ |
ರೀರವೆನಿಸುವ ಪಂಚಸಂಜ್ಞೆಯ |
ಪೂರಯಿಸಿ ಲಿಂಗದೊಳು ನೆಲೆಗೊಂಡಿಹುದು ಕೇಳ್ ಮಗನೆ ||
ಕಾರಣಂ ಕಾರ್ಯಾದಿಗಳಿಗಾ |
ಧಾರ ದ್ಯಾವಾಪೃಥ್ವಿಮಯ ವಿ |
ಸ್ತಾರವೇ[2] ನಿಜಲಿಂಗವೆಂದೇ ತಿಳಿ ಮನದೊಳೆಂದ || ೫೮ ||

೧ ದೇ (ಉ.)  ೨ ವೀ (ಉ.)

ಪರಮಹಂಸಂ ಲಿಂಗ ಪದಿನಾರ್ |
ಸ್ವರಗಳೇ ಗೋಮುಖವದರ ಕೆಳ |
ಗಿರುತಿಹವು ಕತ್ವಾದಿ ಠತ್ವಾಂತಕ್ಷರದ ಕೆಳಗೆ ||
ತರವಿಡಿದು ಡತ್ವಾದಿ ಫತ್ವಾಂ |
ತ ರಚನೆಯೊಳಿಹವವರಡಿಯು ವಿ |
ಸ್ತರದೊಳಿಪ್ಪವು ಬತ್ವಮೊದಲಾ ಲತ್ವ ಕಡೆಯಾಗಿ || ೫೯ ||

ನಡುವೆ ಕೇಳ್ ವತ್ವಾದಿ ಸತ್ವಂ |
ಕಡೆಯೆನಿಪ ನಾಲ್ಕಕ್ಷರಗಳಿಹ |
ವಡಿಯೊಳೀ ತೆರದುದ್ಧರಣಿಯಾಕಾರದಿಂ ಲಿಂಗಂ ||
ನುಡಿಯಲಳವೆ ಷಡಕ್ಷರಂಗಳಿ |
ಗೊಡಲೆನಿಸಿ ಸರ್ವಾಕ್ಷರಾತ್ಮಕ |
ದೆಡೆಯೆನಿಸಿದುದು ನಿಶ್ಚಯಿಸು ಮನದೊಳಗೆ ಕರಜಾತ || ೬೦ ||

ಉರುತರೋರ್ಧ್ವಂದಲೆಯು ಲಿಂಗಾ |
ವರಣ ಸೂತ್ರಕದರ್ಧ ಮಧ್ಯಾ |
ವರಣ ಸೂತ್ರಾಖ್ಯದೊಳು ಮಿರುಗುವ ಪಂಚಸೂತ್ರಗಳೆ ||
ಕರಣವಾದತ್ಯಂತ ಜ್ಯೋತಿ |
ಸ್ಫುರಣಪಾಂಗೋತ್ತುಂಗ ತ್ರಿಜಗ |
ದ್ಭರಿತವಿಾ ನಿಜಲಿಂಗವಿದರೊಳು ಬೆರಸು ಕಾಯವನು || ೬೧ ||

ಶಕ್ಯವಲ್ಲದ ನಾದಮೇ ಸಾ |
ದಾಖ್ಯ ಪಂಚಕ ವದನಯುತ ಲಿಂ |
ಗಾಖ್ಯ ಪರಶಕ್ತಿಯೆ ಜಗಂಗಳ ಜನಿತ ಕುಂಡಲಿನಿ ||
ಆಖ್ಯ ಲಯ ಭೋಗಾಧಿಕಾರದಿ |
ಸಖ್ಯವಾಗಿಹ ಬಿಂದುವೇ ಪೀ |
ಠಾಖ್ಯಮಿಂತೀ ವಸ್ತುವಿದು ನಿಶ್ಚಯಿಸು ನೀನೆಂದ || ೬೨ ||

ತಾರಕ ಬಹ್ಮೋಕ್ತ ದಂಡಕ |
ಪೂರಕುಂಡಲಿಯರ್ಧ ಚಂದ್ರಾ |
ಧಾರಶೂನ್ಯಂ ಬ್ರಹ್ಮವೇ ನಿಜವಾದ ಲಿಂಗವಿದು ||
ಗೌರವ ಪ್ರಣವ ಪ್ರಸಾದಾ |
ಚಾರ ನಿರ್ಮಳನಿಷ್ಟಮಂ ಶಾ |
ರೀರದೊಳಗೆ ಶರೀರದೊಳಗತಿ ಬೆರಸು ನೀನೆಂದ || ೬೩ ||

ಲಿಂಗಮೇ ತತ್ಪದವು ತ್ವಂಪದ |
ವಂಗ ಲಿಂಗಾಂಗೋಭಯದ ಸತ್ |
ಸಂಗಮೇ ಅಸಿ ಪದಮಿತಿ ಕ್ರಮ ತತ್ವಮಸಿ ಪದದ ||
ಸಾಂಗಲಿಂಗವಿದೆಂದರಿದು ನಿನ |
ಗಂಗವಾದೊಡೆ ವೇದಶಾಸ್ತ್ರದ |
ಹಂಗ ಬೇಡೆನಿಸುವುದು ಕೇಳೆಂದೊರೆದನಾ ಮಹಿಮ || ೬೪ ||

ಕಾಣಬಾರದ ವದನ ಕೈಪಿಡಿ |
ದಾಣವಂ ಕಂದೆರೆದು ನೋಡಲು |
ಕಾಣಬಪ್ಪಂತಧಿಕ ಮಾಯಾವರಣ ಚಿದ್ದ್ಯುಗುವಿಂ ||
ಕಾಣಿಸದ ವಿಮಲಾತ್ಮರೂಪಂ |
ಪ್ರಾಣಲಿಂಗವ ಮಿಗೆ ನಿರೀಕ್ಷಿಸಿ |
ಕಾಣಬಹುದೊಲವಿಂದೆ ಲಿಂಗವ ನಂಬು ನಿಶ್ಚಯದಿ || ೬೫ ||

ಮುಖದೊಳಾವರಿಸಿರ್ದ ಮಲಿನವ |
ಮುಕುರದೊಳು ಕಂಡೊರಸುವಂತಾ |
ತ್ಮಕದೊಳಿರ್ದಜ್ಞಾನ ಮಲಿನವ ಲಿಂಗದೊಳು ಕಂಡು ||
ಅಕುಲ ನಿರಹಂಕಾರ ಕರದಿಂ |
ಪ್ರಕಟಿಸಲ್ ಬಹುದೆಲೆ ಮಗನೆ ಕಾಂ |
ತಿಕಲಿತೋಜ್ವಳ ಲಿಂಗಮಂ ಚೆನ್ನಾಗಿ ನಂಬೆಂದ || ೬೬ ||

ಹಿಂದೆ ತೋರುವ ತೋರಿಕೆಗಳಂ |
ಮುಂದೆಸೆವ ಮುಖದಿರವ ದರ್ಪಣ |
ಮಂ ದರುಶನಂಗೈದು ಕಾಂಬೊಲು ಲಿಂಗದರುಶನದಿ ||
ಹಿಂದೆ ಪೊದ್ದ ಸಮಸ್ತ ಜನ್ಮವ |
ಮುಂದೆ ಬಪ್ಪ ಸಮಸ್ತ ಕಾರ್ಯವ |
ಕಂದ ಕೇಳ್ಳೆ ಕಾಣಬಹುದಿದು ಸತ್ಯ ನಿಶ್ಚಯಿಸು || ೬೭ ||

ಅಂಗದಾಕಾರವೆ ಮುಕುರದೊಳು |
ಪೊಂಗಿ ಪೊರೆಯಿಲ್ಲದೆ ಸ್ವಭಾವದಿ |
ಕಂಗೊಳಿಸುವಂದದೊಳಗಮಲಾತ್ಮ ಸ್ವರೂಪಕವು ||
ಲಿಂಗದೊಳು ನಿರ್ಭಿನ್ನ ಭಾವದಿ |
ಸಂಗವಪ್ಪುದು ನಿಷ್ಠೆಯಿಂದಾ |
ಲಿಂಗಿಸೊಲಿದಿಷ್ಟವ ವಿವೇಕ ಸ್ವಾನುಭಾವದೊಳು || ೬೮ ||

ಎರಡು ದೀಪಂಗಳ ರುಚಿಗಳೊಡ |
ವೆರಸಿಯೊಂದಾಗಿರ್ಪ ತೆರದಿಂ |
ಪರಮ ಲಿಂಗಮಹಾತ್ಮಮುಂ ವಿವಿಧಾತ್ಮಚೇತನಮುಂ ||
ಬೆರೆದು ಭಿನ್ನವನಳಿದೊಡಕ್ಷಯ |
ಸಿರಿಯಹುದು ಕೇಳ್ ಮಗನೆಯಂತಃ |
ಕರಣಶುದ್ಧದಿ ಲಿಂಗಮಂ ನಂಬೆಂದು ಪೇಳಿದನು || ೬೯ ||

ಪಾಣಿಯೊಳು ದೃಶ್ಯಾಂಜನವನಿಡೆ |
ಕಾಣಿಸದ ಸರ್ವಾವಯದವೊಲು |
ಪ್ರಾಣದೊಳು ಲಿಂಗವ ಧರಿಸಿದೊಡೆ ಕಾಲಕರ್ಮಗಳು ||
ಕಾಣಿಸವು ದೇಹಂಗಳಾತ್ಮ |
ತ್ರಾಣಮಾದ ವಿಭಕ್ತಿಲಿಂಗ |
ಪ್ರಾಣಿಯಾಗೆಲೆ ಮಗನೆ ಪಲ ವ್ಯವಹಾರಗಳ ಮರೆದು || ೨೦ ||

ಇಂತು ಲಿಂಗಾಂಗದೊಳು ನಿತ್ಯಂ |
ಸಂತಸದೊಳಿರೆನುತ್ತೆ ಗಿರಿಜಾ |
ಕಾಂತ ಸದ್ಗುರು ಜಡೆಯ ಶಂಕರ ತನ್ನ ಕಿಂಕರನ ||
ಸಂತಸದಿ ಬೀಳ್ಕೊಂಡು ತೆರಳಿದ |
ಶಾಂತಿಮಯ ಶಿಖಿಪುರಕೆ ಹರುಷ[1]ದಿ |
ಗೊಂತುಗೊಂಡನು ಭಕ್ತನಿರವಂ ಮನದೊಳಗೆ ನಿಲಿಸಿ || ೨೧ ||

ನೆನೆದ ಕಾರ್ಯಂ ಸಿದ್ಧಿಸಲಿ ಯೌ |
ವನಮುದಾಗಲಿ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿ ಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನ ಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೨೨ ||

**ಅಂತು ಸಂಧಿ ೪ಕ್ಕಂ ಪದ ೨೮೯ಕ್ಕಂ ಮಂಗಳಂ**



---
೧ ಸದನ (ಇ, ಉ.)

೫ನೆಯ ಸಂಧಿ

# ಶಂಕರದಾಸಿಮಯ್ಯನು ಹಣೆಗಣ್ಣನ್ನು ಪಡೆದದ್ದು

**ಸೂಚನೆ**

ಜಡೆಯ ಶಂಕರದೇವನಂಘ್ರಿಗ |
ಳೆಡೆಗೆ ಪೋದುರೆ ಭಾಳನೇತ್ರವ |
ಪಡೆದನಾ ಸದ್ಭಕ್ತ ಶಂಕರದಾಸಿಮಯ್ಯಗಳು ||

ಧರಣಿ ರೇಣುಮದಾಗೆ ಸುಮನಸ |
ಗಿರಿ ಮಳಲಪರಿಯಾಗೆ ಬಹು ಸಾ |
ಗರಗಳೇ ತುಂತುರ್ವನಿಗಳಾಗಲು ಮಹಾಪ್ರಳಯ ||
ಬರುಹಿ ಕಿರಿಗಿಡಿಯಾಗಲಚ್ಯುತ |
ಸರಸಿಜೋದ್ಭವರಣುವೆನಿಸಿ ಭಾ |
ಸ್ಫುರಣ ಜ್ಯೋತಿರ್ಲಿಂಗಮಾದೀಶಂಗೆ ವಂದಿಸುವೆ || ೧ ||

ಭಾಳನಯನಂ ಪೋದನಿತ ಮುಂ |
ಗೋಳಿ ಕೂಗಿದವವರ ಧ್ವನಿಯಂ |
ಕೇಳುತವೆ ಪೊರವಂಟ ಶಂಕರದಾಸಿಮಯ್ಯಗಳು ||
ಹೇಳಲಳವೇ ಪರಮ ಭಕ್ತನ |
ತೂಳವನು ಶಿವ ಶಿವ ಹರುಷದೊಳ |
ಗಾಳುತಂ ನಡೆತಂದು ಕಂಡನು ಜಡೆಯ ಶಂಕರನ || ೨ ||

ಕಂಡು ಕಾಣಿಕೆಗೊಟ್ಟು ಧರಣೀ |
ಮಂಡಲದಿ ಮೆಯ್ಯಿಕ್ಕಿ ಪುನರಪಿ |
ಮಂಡೆಯೆರಗುತೆ ಕಾತರದೊಳೋಲಾಡಿ ಕುಣಿದಾಡಿ ||
ಬೆಂಡಡಸಿ ಬೆರಗಾಗಿ ಪುಟಮಿಗೆ |
ಡೆಂಡಣಿಸಿ ತೊದಲಿಸುತೆ ಭಕ್ತಿಕ |
ರಂಡ ಪೊಗಳಿದ ಪಾಡಿದಂ ಶ್ರೀ ಜಡೆಯ ಶಂಕರನ || ೩ ||

ಮೈಮರೆದು ಕಣ್ಮುಚ್ಚದೀಕ್ಷಿಸಿ |
ಪ್ರೇಮ ಮುಪ್ಪುರಿಯಾಗಿ ದೇಹದ |
ರೋಮತತಿ ಗುಡಿಗಟ್ಟಿಯಾನಂದಾಶ್ರು ಬಟ್ಟಾಡೆ ||
ಸೋಮಧರನಂ ಸಕಲದೇವಲ |
ಲಾಮನಂ ತ್ರಿಜಗಾಧಿಪನ ಜಿತ |
ಕಾಮನಂ ಬಿಗಿಯಪ್ಪಿ ಮಿಗೆ ಮುಂಡಾಡಿ ಮುದ್ದಿಸಿದ || ೪ ||

ಪಳುಕದಿಂ ಕೈಗೈದು ಮಿರುಗುವ |
ಕಳಶದೊಳು ದೀವಿಗೆಯನಿಟ್ಟುರೆ |
ಬೆಳಗುವಂದದಿ ಶರಣ ಶಂಕರದಾಸಿಮಯ್ಯಗಳು ||
ಒಳಹೊರಗೆ ತೇಂಕಾಡುತಂ ಪ |
ಜ್ಜಳಿಸಿದುದು ಶಿವಮೂರ್ತಿಯರ್ಚನೆ |
ಗಳನೊಲಿದು ಮಾಡಿದನು ಸದ್ಭಾವಾನುಬಂಧದೊಳು || ೫ ||

ಸಂತಸದಿ ಸತ್ಕೃತ್ಯಗಳನೋ |
ರಂತೆ ಮಾಡಿ ವಿಲಾಸ ಮಿಗೆ ಕಾ |
ಲಾಂತಕನ ಬೀಳ್ಕೊಂಡು ಬಂದನು ಸ್ಕಂದಶಿಲೆಪುರಕೆ ||
ಇಂತು ನಿತ್ಯಂ ಪೋಗುತಂ ಗುಣ |
ವಂತ ಶಂಕರದಾಸಿ ಗುರು ಪೇ |
ಳ್ದಂತೆ ವಿಮಲಾಚಾರ ಕೋವಿದನಾಗಿ ನೆಗಳಿರ್ದ || ೬ ||

ಜಂಗಮಾರ್ಚನೆ ಶಿವನ ಶರಣರ |
ಸಂಗ ದಿವ್ಯಾನುಭವಗೋಷ್ಠಿ ಸು |
ಲಿಂಗನಿಷ್ಠೆ ಮಹಾಪ್ರಸಾದ ಪದೋದಕದ ನನ್ನಿ ||
ಭಂಗಮಿಲ್ಲದ ನಿಯಮ ಜ್ಞಾನೋ |
ತ್ತುಂಗತತ್ವವಿಚಾರ ಭಕ್ತನಿ |
ಗಂಗವಾದತ್ತವನ ನೆಳಲೆನಿಸಿದಳು ಶಿವದಾಸಿ || ೭ ||

ತಂದೆಯೊಪ್ಪಿದ ಪುರುಷನೇ ಪತಿ |
ಯೆಂದು ಕೂರ್ತಿಹ ಚಾರು ಕನ್ನಿಕೆ |
ಯಂದದೊಳು ಶಿವಶರಣ ಶಂಕರದಾಸಿ ಗುರು ಕರುಣ ||
ದಿಂದ ಪಾಲಿಸಿದಿಷ್ಟವೇ ಗತಿ |
ಯೆಂದು ನಿಶ್ಚಯಮುಣ್ಮೆ ಪರಮಾ |
ನಂದಮಯಮಾಗಿರ್ದ ಘನ ಲಿಂಗಾಂಗ ಪಾಂಗಿನೊಳು || ೮ ||

ಕಾಯವೇ ಆಚಾರ ಹರಣ |
ಚ್ಛಾಯೆಯೇ ಗುರುಲಿಂಗಜಂಗಮ |
ಮಾಯೆಯೇ ಸದ್ಭಕ್ತಿ ಮುಕ್ತಿಯೆ ತಮಗೆ ತತ್ಸಂಗ ||
ಆಯುವೇ ಸುಜ್ಞಾನ ವಿವಿಧೋ |
ಪಾಯವೇ ಸದ್ಭಾವ ಸೂಜಿಯ |
ಕಾಯಕವೆ ಅಸಿಮಸಿಕೃಷಿಯು ವಾಣಿಜ್ಯವೆಂದರಿದು[೧] || ೯ ||

ಹಿತವ ಮಾಡುವ ಶರಣರಿಗೆಯುಪ |
ಹತಿಯ ಮಾಡುವ ಕುಜನರಿಗೆ ಶಾ |
ಶ್ವತವ ಮಾಡುವ ದಿವ್ಯಶಿವಶಾಸ್ತ್ರಾಗಮಾದಿಗಳ ||
ಜಿತವ ಮಾಡುವ ಪರಮತವನೂ |
ರ್ಜಿತವ ಮಾಡುವ ಸ್ವಸಮಯಮಂ |
ವ್ರತವ ಕೈಕೊಂಡಿರ್ದ ಶಂಕರದಾಸಿಮಯ್ಯಗಳು || ೧೦ ||

ಹೀಗಿರುತಲೊಂದಿನವು ನವಿಲೆಗೆ |
ಪೋಗುತಿಹ ಸಮಯದೊಳು ಕೃಷ್ಣ ಘ |
ನಾಘನಗಳೊಡ್ಡಿದುವು ದೆಸೆವರಿದುದು ತಟಿಲ್ಲತೆಯು ||
ಮೇಘನಿನದಂ ಮೊಳಗಿದುದು ಮಿಗೆ |
ಕೂಗಿದುವು ಭೇಕಗಳು ಭೀಕರ |
ವಾಗಿ ಸುರಿದುದು ಗಾಳಿವೆರಸಿದ ಮಳೆ ನೆಲನನಲೆದು[೨] || ೧೧ ||

ಮೀರಿದುದು ಕಾವಳದ ಮುತ್ತಿಗೆ |
ತೋರಿದುದು ಭಯದೇಳ್ಗೆ ತರಗೆಲೆ |
ಪಾರಿ ಮಿಗೆಯೊಲೆದಾಡಿದುವು ವೃಕ್ಷಗಳು ಪೆರ್ದಾರಿ ||
ಜಾರಿಕೆಯನಾಂತುದು ಮಹಾಹಿಮ |
ವೇ[೩]ರಿದುದು ನವಿಲಾಡಿದುವು ಘನ |
ಕಾರಿದುವು ಮೇಣಿಂದ್ರಗೋಪ ಜಲೋಪಲಂಗಳನು || ೧೨ ||

ಸಿಡಿಲೆರಗಿ ಸೀವರಿಸಿ ಮಿಂಚಿನ |
ಕುಡಿವರಿಯೆ ಕಣ್ಮುಚ್ಚ ಬಲುಮಳೆ |
ಹೊಡೆಯಲೌವಳಿಸಂ ಮಹಾನಿಲ ಬೀಸಲೋಸರಿಸ ||
ಎಡಹಿದೊಡೆ ತಲ್ಲಣಿಸಿ ಬಿದ್ದೊಡೆ |
ನಡುಗ ಶಂಕರದಾಸಿಮಯ್ಯಂ |
ಜಡೆಯ ಶಂಕರ ಗತಿಯೆನುತೆ ಭರದಿಂದೆ ಬರುತಿರ್ದ || ೧೩ ||

---

೧ ದಿಹರು (ಉ.) ೨ ನೆನೆದು (ಇ.) ೩ ಮೀ (ಇ, ಉ.)

ಮುಂದೆ ಕಂಡನು ಎರಡು ದಡ ಕೊರೆ |
ವಂದದೊಳು ಮಿಗೆ ತುಂಬಿ ನೆರೆ ಭೋ |
ರೆಂದು ಮೊರೆಯುತೆ ಪರಿಯುತಿಹ ಪೆರ್ದೊರೆಯನಾ ಶರಣ ||
ಒಂದಿ ಬಹ ತೆರೆ ನೊರೆ ಕಣಾವಳಿ |
ಯಿಂದೆಸೆವ ಬುದ್ಬುದ ತುಷಾರದ |
ಗೊಂದಣಿಯ ಸುಳಿ ಶೋಭೆಯಿಂ ಭಯವಾಗಿ ಕಾಣಿಸಿತು || ೧೪ ||

ಉಕ್ಕಿ ಬಹ ಪೆರ್ಮೊರಗಳೊಳು ನೆರೆ |
ಸಿಕ್ಕಿ ಬಹ ಹರುಗೋಲುಗಳು ಮಿಗೆ |
ಪಕ್ಕಿಗಳು ಲತೆ ಗಿಡು ಕುರುಜೆ ಪುಳು ಪಾವು ಪಲ್ಲಿಗಳು ||
ಲೆಕ್ಕವಿಲ್ಲದೆ ಕಣ್ಗೆ ಪಸರಿಸು |
ತಿಕ್ಕೆಲದ ದಡವಿಡಿದು ಭರದಿಂ |
ದುಕ್ಕಿ ಪರಿವ ಜಲಪ್ರವಾಹದೊಳಾ ಮಹಾಶರಣ || ೧೫ ||

ಹರಹರಾ ಪೆರ್ಬೊಳೆಯ ಲಕ್ಷ್ಮೀ |
ಕರಿಸಿದನೆ ಭಾವಿಸಿದನೇ ಸೀ |
ವರಿಸಿದನೆ ಮನದೊಳಗೆ ಶಂಕರದಾಸಿಮಯ್ಯಗಳು ||
ಪರಿವ ಪೊಸ ಜಲಮಂ ಜಡೆಯ ಶಂ |
ಕರನ ನೆನೆಯುತೆ ಪೊಗಲು ಮೊದಲು |
ಬ್ಬರವಡಗಿ ಬಯಲಾದುದುದಕಂ ತಡಿಯ ಸೇ[1]ರಿದನು || ೧೬ ||

ಪೋದ ನವಿಲೆಗೆ ಶಂಕರನ ಶ್ರೀ |
ಪಾದದರ್ಶನವಾಗಿ ಬೀಳ್ಕೊಂ |
ಡಾದರದಿ ತಿರುಗಿದನು ಬಂದನು ಸ್ಕಂದಶಿಲೆಪುರಕೆ ||
ಆ ದಿನದ ರಾತ್ರಿಯೊಳು ಶಿವಪೂ |
ಜಾದಿ ಕೃತ್ಯವ ಮಾಡಿ ಪರಮ ಪ್ರ |
ಸಾದವಮಂ ಸ್ವೀಕರಿಸಿ ದೇವನ ಯೋಗನಿದ್ರೆಯೊಳು || ೧೭ ||

ಶರಣ ಶಂಕರದಾಸಿಯಿರೆ ಫಣಿ |
ಭರಣನಾತನ ಸ್ವಪ್ನದೊಳು ಗೋ |
ಚರಿಸಿದಂ ಕುಂದೇಂದುಶುದ್ಧಸ್ಫಟಿಕಸಂಕಾಶ ||
ಕರ ಬೆಳಗುವಾಕಾರದಿಂ ವಿ |
ಸ್ತರದ ದಶಭುಜ ಪಂಚವಕ್ತ್ರದ |
ಶಿರದ ಗಂಗೆ ಜಟಾಮುಕುಟ ಭಾಳಾಕ್ಷಿಸಹವಾಗಿ || ೧೮ ||

---
೧ ಸಾ (ಇ. ಉ.)

ಶಿವನ ಕಂಡಿದಿರೆದ್ದು ಹರುಷದೊ |
ಳವನಿಯೊಳು ಮೆಯ್ಯಿಕ್ಕಿ ಯುಗಳ ಕ |
ರವ ಮುಗಿದು ನಿಂದೀಶ ಪಶುಪತಿ ಪರಶಿವಂ ಶಾಂತಂ ||
ಭುವನನಾಯಕ ಸರ್ವಗತ ಮಾ |
ಧವನಯನಪೂಜಿತಪದಾಂಬುಜ |
ರವಿಶಶಾಂಕಕಿರೀಟ ಜಯ ಜಯತೆಂದು ಪೊಗಳಿದನು || ೧೯ ||

ಪೊಗಳೆ ಸಂತೋಷದೊಳು ಶಿವ ನಸು |
ನಗುತ ಶರಣನನಪ್ಪಿ ಮೊಗದೊಳು |
ಮೊಗವನೊಲವಿಂದಿಟ್ಟು ಮನ್ನಿಸಿ[೧] ಮೆಲ್ಲನಿಂತೆಂದ ||
ಮಗನೆ ನಿನ್ನಯ ಸದುಭಕುತಿಗೋ |
ರಗೆಯ ಕಾಣೆ ಧರಾತಳದಿ ನೀ |
ನಗಣಿತ ಮಹಾ ರುದ್ರ [೨]ರೊಳಗಲ್ಲದೆ ಮನುಜನಲ್ಲ[೨] || ೨೦ ||

ಇಂದು ನಿನಗಾದೆಡರುಗಳನೇ |
ನೆಂದು ಪೇಳುವೆ ಬಡವನಾದೊಡೆ |
ಕೊಂದು ಕೂಗದೆ ಮಾಣ್ಬುದೇ ಬಯಲಿಗೆ ಬಳಲಬೇಡಾ ||
ಸ್ಕಂದಶಿಲೆಯಂ ಬಿಟ್ಟು ನವಿಲೆಗೆ |
ಬಂದು ಸುಖದೊಳಗಿರು ನಿನಗೆ ನಾ |
ನೊಂದು ವರವಂ ಪಾಲಿಸುವೆನೆಂದಂ ಸದಾಶಿವನು || ೨೧ ||

ಕಂದೆರೆದು ಶಿವನೈದಿದುದು[೩] ದಿಟ |
ವೆಂದು ಮನೆಯೊಳಗರಸಿ ಸ್ವಪ್ನವಿ |
ದೆಂದು ನಿಶ್ಚಯಿಸಿದನು ತನ್ನಯ ಸತಿಯನೇಳಿಸಿದ ||
ಇಂದುಧರ ಕನಸಿನೊಳು ಬಂದೊರೆ |
ದಂದವಂ ಪೇಳಿದನು ಪರಮಾ |
ನಂದದೊಳಗಿಹ ಸಮಯದೊಳು ಬೆಳಗಾದುದೇನೆಂಬೆ || ೨೨ ||

ಉದಯದೊಳು ಶಿವಪೂಜೆಯನು ಮಾ |
ಡಿದ ಸಕಲ ಮಾಹೇಶ್ವರರ ಕರೆ |
ಸಿದ ಕನಸಿನೊಳು ಜಡೆಯ ಶಂಕರನೊರೆದುದಂ ಪೇಳ್ದ ||
ಅಧಿಕ ವಿನಯದಿ ಸಕಲ ಭಕ್ತರ |
ಪದಕೆರಗಿ ಬಿಳ್ಕೊಂಡು ತನ್ನಯ |
ವಧುಸಹಿತ ಪೊರವಂಟು ನಡೆದ ಮಯೂರಪುರದತ್ತ || ೨೩ ||

---

೧ ಮುದ್ದಿಸಿ (ಇ, ಉ.) ೨-೨ ನಲ್ಲದೆ ಮನುಜನೇ ಸೀನು (ಇ.) ೩ ನೆಂದುದದು (ಇ.)

ಭಾಳನೇತ್ರದ ಭಕ್ತ ಬಹುದಂ |
ಕೇಳಿ ನವಿಲೆಯ ಶರಣಜನನಿ |
ಸ್ಸಾಳ ದುಂದುಭಿ ಧವಳ ಶಂಖ ಪಿನಾಕ ಕಹಳೆಗಳ ||
ಡೊಳ್ಳು ಮೌರಿಯು ವಾದ್ಯಕರು ಗುಡಿ |
ಗುಳ್ಳೆ ಗೋಲು ಪತಾಕೆಗಳ ಸ |
ಮ್ಮೇಳ ಸಹವಾಗಿದಿರುಗೊಂಬರೆ ಬಂದರರ್ತಿಯಲಿ || ೨೪ ||

ಜಡಿದ ಕಬ್ಬಿನ ಜಲ್ಲಿಗಳ ಕ |
ನ್ನಡಿ ಕಳಸ ಪೊಂಬಾಳೆ ಪಲ್ಲವ |
ವಿಡಿದು ಸಿಂಗರವಾಗಿ ಬಹ ಕಿರಿವೆಣ್ಣ ಪಂಕ್ತಿಗಳ ||
ನಡೆಮುಡಿಯ ಬಹು ಛತ್ರ ಚಾಮರ |
ಕುಡಿವರಿವ ನವ ಧೂಪಧೂಮದ |
ಗಡಣದೊಳಗಿದಿರ್ಗೊಂಡರಾ ಶಂಕರನ ಕಿಂಕರನ || ೨೫ ||

ತಾಳ ದಂಡಿಗೆ ಮದ್ದಳೆಯ ಶ್ರುತಿ |
ಗಾಳಿಗಳ ಗತಿಯರಿದ ಲಿಂಗದ |
ಮೇಳದಿಂ ನರ್ತಿಸುವ ಘನ ಕಲಕೇತ ಮಾರ್ಗಗಳ ||
ಮೇಳದವ ಶಿವಸಾಂಪ್ರದಾಯವ |
ಹೇಳುತುಘೆ ಉಘೆ ಎನುತ ದೇವನ |
ಸೂಳೆಯರು ದವಳಾರ ಶೋಭನಗಳನು ಪಾಡುತಲಿ || ೨೬ ||

ಇದಿರುಗೊಂಡರು ದಾಸಿಮಯ್ಯನ |
ಪದಕೆರಗಿದರು ವಿವಿಧ ಸಂತೋ |
ಷದಲಿ ಬಿಜಯಂಗೈಸಿ ತಂದರು ಶಿಖಿಪುರಕ್ಕೊಲಿದು ||
ಸದುಭಕುತರಹ ಶೀಲವಂತರ |
ಸದನಗಳು ನೆರೆಯಾದ ಮನೆಯೊಳು |
ಮುದದೊಳಿಂಬಿಟ್ಟರ್ತಿವಡೆದರು ಸಕಲ ಶರಣ ಜನ || ೨೭ ||

ಸಚ್ಚಿದಾನಂದೈಕ ಭಕ್ತರು |
ನಿಚ್ಚಳದಿ ಹರಶರಣರೈತಂ |
ದುಚ್ಚವದಿ ಗಣಪರ್ವಗಳ ಮಾಡಿದರು ತಮತಮಗೆ ||
ಅಚ್ಚರಿಯವಹ ಸಂಭ್ರಮಂಗಳ |
ಸಚ್ಚರಿತ ದಿಗಿಲಿಸುತೆ ಲಿಂಗದಿ |
ಬೆಚ್ಚುತಾನಂದಾರ್ಣವದೊಳೋಲಾಡುತೊಪ್ಪಿದರು || ೨೮ ||

ಲಕ್ಷ ಯೋಜನದಿಂದಬುಜ ಲೋ |
ಕಾಕ್ಷನೆಡೆಗೈತಂದವೊಲು ದ್ವಯ |
ಲಕ್ಷಯೋಜನದಿಂದ ಕುಮುದಂ ಪೂರ್ಣಚಂದ್ರಮನ ||
ಪಕ್ಷಕೈತಂದಂತೆ ಮುಳಿದ ಸು |
ದಕ್ಷಿಣಾತ್ಮಕನಿರ್ದೆಡೆಗೆ ಕವು |
ಲಾಕ್ಷ ಬಂದೊಲು ದಾಸಿಮಯ್ಯಂ ಸಾರ್ದ ಶಂಕರನ || ೨೯ ||

ಸ್ಕಂದಶಿಲೆಯಿಂ ದ್ವಿಗುಣ ಪರಮಾ |
ನಂದಸುಖದಿ ಮಯೂರಪುರದೊಳು |
ನಂದಿವಾಹನಭಕ್ತ ಶಂಕರದಾಸನಿರುತಿರ್ದ ||
ಒಂದು ದಿನ ಶ್ರೀಜಡೆಯ ಶಂಕರ |
ಮಂದಿರಕೆ ಬಂದಧಿಕ ಪೂಜೆಯ |
ನೆಂದಿನಂದದಿ ಮಾಡಲಾಕ್ಷಣಮಾದುದೊಂದೊರವು || ೩೦ ||

ಕಂದ ಕೇಳೈ ನಿನಗೆ ಹಿತವಹ |
ದೊಂದು ವರವಂ ನಾಳೆ ಕೊಟ್ಟಪೆ |
ನೆಂದು ಶಂಕರದಾಸಿಮಯ್ಯನ ಕರೆದು ಬುಲ್ಲವಿಸಿ ||
ಎಂದಿನಂತೈದೀಗ ಹರುಷದಿ |
ಮಿಂದು ಮಡಿವಸ್ತ್ರವ ಧರಿಸಿ ನೀ |
ಬಂದು ನಿಲು ನಿಶ್ಚಯದೊಳೆಂದನು ಜಡೆಯ ಶಂಕರನು || ೩೧ ||

ಕೇಳಿ ಶಂಕರದಾಸಿ ವಿಭವದೊ |
ಳಾಳಿ ನಿರ್ಕುಳಿಗೊಂಡು ರೋಮಗ |
ಳೇಳೆ ಸ್ವೇದೋದಕದಿ ನೈನೆನೆದೆಂದನಿಂತೆಂದು ||
ಕೇಳು ದೇವಾ ಪರಸಮಯುಗಳ |
ಧೂಳಿಪಟವುಂ ಮಾಡಿ ಸುಡುತಿಹ |
ಭಾಳನೇತ್ರವ ಪಾಲಿಸೆಂದಬ್ಬರಿಸಿ ಬೇಡಿದನು || ೩೨ ||

ಮಾರಿ ಯಕ್ಷಿಣಿಯುಡಚಿ ಸುರಗಾಂ |
ಧಾರಿ ಭೈರವಿ ಮಸಣಿ ಘನ ಪೆಂ |
ಡಾರಿ ಚೌಡಿ ಮತಂಗಿಯೆಲ್ಲಮ ಜಕ್ಕಿಯೆರಕಾಟಿ ||
ಬೀರ ರಕ್ಕಸಿ ಕಾಳ ರಾತ್ರಿಯು |
ಭೈರವಂ ಕಟಿ ಮಲ್ಲ ಜಿನ ವೈ |
ಲಾರ ಹರಿಯಜರಂ ಸುಡುವ ಪಣೆಗಣ್ಣನೀಯೆಂದ || ೩೩ ||

ಇಂದುಧರಗೆ ನಮಸ್ಕರಿಸಿ ನಲ |
ವಿಂದ ಶಂಕರದಾಸಿ ಮಠಕ್ಕೈ |
ತಂದು ಶಿವದಾಸಿಯೊಳು ನವಿಲೆಯ ಭಕ್ತರೊಡೆಯರೊಳು ||
ಕಂದುಗಳನಿಂತೆಂದು ಪೇಳಿದ |
ನೆಂದು ಬಿನ್ನಹ ಮಾಡಿ ಶರಣರ |
ಗೊಂದಣಿಯೊಳೊಪ್ಪಿರ್ದನಾ ವಾಸರದೊಳೇನೆಂಬೆ || ೩೪ ||

ನೆರೆದರತಿ ಸಂಭ್ರಮದೊಳಗೆಯಿ |
ನ್ನೆರೆಯ ಗ್ರಾಮದ ಭಕ್ತರೊಡೆಯರು |
ಶರಣ ಭಾಳಾಂಬಕವ ಪಡೆದಪನೆಂಬ ವಾರ್ತೆಯೊಳು ||
ಅರರೆ ಪೋದಿತ್ತಾದಿವಸ ಭಾ |
ಸ್ಕರನುದಯಕಾಲದೊಳು ಭಕ್ತೋ |
ದ್ಧರಣ ಶಂಕರದಾಸಿಮಯ್ಯಂ ಭೋಂಕನನುವಾದ || ೩೫ ||

ಮಿಂದು ಮಡಿವರ್ಗವ ಧರಿಸಿ ನಲ |
ವಿಂದ ಶಂಕರದಾಸಿಮಯ್ಯಂ |
ಬಂದು ದೇವಾರ್ಚನೆಯ ಮನೆಯೊಳು ಮೂಡಮುಖವಾಗಿ ||
ಕಂದು ಕಚ್ಚದ ಛಿದ್ರವಿಲ್ಲದ |
ದೊಂದು ಸಿತವಸ್ತ್ರಾಸನದೊಳಾ |
ನಂದಮಯ ಕುಳ್ಳಿರ್ದ ಪದ್ಮಾಸನದ ಪಾಂಗಿನೊಳು || ೩೬ ||

ಶರಣರತ್ನಂ ಬೆಲ್ಲವಂತದ |
ಭರಣಿಯೊಳಗೆಸೆದಿರ್ದ ಭೂತಿಗೆ |
ಶರಣೆನುತ ಮಂತ್ರೋಕ್ತದಿಂದೊಗದೊಲು ಗ್ರಹಿಸಿ ವಾಮ ||
ಕರತಳದೊಳಿಂಬಿಟ್ಟು ಜಲಮಂ |
ಬೆರೆಸಿ ಪ್ರಾದಕ್ಷಿಣದಿ ಭಸ್ಮವ |
ಬೆರೆಸಿ[೧] ಮೂರಂಗುಲಿಗಳೊಳು ಶಿವಮಂತ್ರ ಮುಖನಾಗಿ || ೩೭ ||

ವರ ಪವಿತ್ರಾಂಗುಲಿಯ ನಡುವಣ |
ಬೆರಲ ಜೇಷ್ಠಾಂಗುಲಿಯ ಭಸಿತದೊ |
ಳೊರಸಿ ಭಾಳದ ಮಧ್ಯರೇಖೆಯ ಹೆಬ್ಬೆರಲೊಳಿಟ್ಟು ||
ಎರಡನೆಯ ಮೂರನೆಯ ಬೆರಲಿಂ |
ದೆರಡು ರೇಖೆಯ ಕೆಳಗೆ ಮೇಲಿ |
ಟ್ಟು ರಚಿಸಿದ ಕೂಡದೊಲುಭಯನೇತ್ರಾಂತ ಸಮನಾಗಿ || ೩೮ ||

---

೧ ನೊರಸಿ (ಉ.)

ಉರದೆಡೆಯ ಭುಜವೆರಡರೊಳು ತೋ |
ಳೆರಡರೊಳು ಮುಂಗೈಯೆರಡು ಪೆಗ |
ಲೆರಡರೊಳು ಶೋಭಿಸುವ ಕಂಠಗಳಿಕ್ಕೆಲದೊಳಾಗ ||
ಪರಮ ಮಂತ್ರೋಕ್ತದಿ ತ್ರಿಪುಂಡ್ರವ |
ಧರಿಸಿ ಶಿರದೊಳು ಕರ್ಣಯುಗಳದಿ |
ಪರಮ ನೇತ್ರದ್ವಯದಿ ಪೃಷ್ಠದಿ ನಾಭಿಮಂಡಲದಿ || ೩೯ ||

ಭಸಿತವಂ ಮುಟ್ಟಿಸಿದನಲ್ಲ |
ಲ್ಲೆಸೆವ ರುದ್ರಾಕ್ಷ್ವಯುದ ಮಂತ್ರ |
ಪ್ರಸರದುಚ್ಚಾರಣೆಯೊಳಗೆ ಶಿವಭಕ್ತಶಿರರತ್ನ ||
ಎಸೆವ ಚಂಡೇಶ್ವರನೊ ಭೃಂಗಿಯೊ |
ಬಸವನೋ ವೀರೇಶನೋ ಭಾ |
ವಿಸುವೊಡರಿದೆಂಬಂತೆ ಸವಿಕಲ್ಪಕ ಸಮಾಧಿಯೊಳು || ೪೦ ||

ಪಟ್ಟ ಸೂತ್ರಂಗಳೊಳು ಪೃಷ್ಠಾ |
ಪೃಷ್ಠಿ ಮುಖಮುಖವರಿದು ಪೋಣಿಸಿ |
ಪೆಟ್ಟಗೆ[೧]ಯೊಳಿಹ ದಿವ್ಯ ರುದ್ರಾಕ್ಷಿಯ ವಿಭೂಷಣವ ||
ನಿಟ್ಟಸುತ[೨] ತೆಗೆದಕ್ಷಿ ನೊಸಲೊಳ |
ಗಿಟ್ಟು ಕರದೊಳಗಾಂತು ಭಕ್ತಿಯೊ |
ಳಷ್ಟವಿಧದರ್ಚನೆಯ ಮಾಡಿದನಾ ಮಹಾಮಣಿಗೆ || ೪೧ ||

ಸಕಲದೇವರ ಕೇಸರದಿ ನಾ |
ಲ್ಮುಖನ ಮೌಲ್ಯದಿ ಹರಿಯು ನಾಳದಿ |
ಮುಖಗಳೊಳಗೆ ಸದಾಶಿವನ ಧರಿಸಿದ ಮುಮುಕ್ಷತೆಯ ||
ಲಿಖಿತಮಾದಪವರ್ಗ ಸ್ವರ್ಗ |
ಪ್ರಕರದಾಯಕಮಾದ ಮೋಕ್ಷಾ |
ಧಿಕವೆನಿಪ ರುದ್ರಾಕ್ಷಿಗಳ ಮಂತ್ರೋಕ್ತದಿಂ ಶರಣ || ೪೨ ||

ಶಿಖಿಯೊಳೊಂದೇಕಮುಖಮಂ ನಾ |
ಲ್ಮುಖವವೈವತ್ತನುರದೊಳಗೈ |
ಮುಖ ದಶಾನನ ಸಪ್ತಮುಖ ಮೂರ್ ಮೂರು ಕರ್ಣದೊಳು ||
ಮುಖದ್ವಯ ತ್ರಯವದನ ದ್ವಾದಶ |
ಮುಖದ ಮಣಿ ಮೂರುಂ ಕಪಾಲದಿ |
ಮುಖಗಳೇಕಾದಶದ ಮೂವತ್ತಾರು ಭಾಳದೊಳು || ೪೩ ||

---

೧ ಯೊಟ್ಟಜೆ (ಇ, ಉ.) ೨ ಪೆಟ್ಟಗೆಯ (ಇ, ಉ.)

ಶ್ರೀ ಷಡಾನನವಷ್ಟಮುಖ ಬ |
ತ್ತೀಸವಂ ಕಂಠದಿ ತ್ರಯೋದಶ |
ಭಾಷಮುಖ ಷೋಡಶವು ತೋಳೊಳು ನವಮುಖದ ಮಣಿಯ ||
ಭೂಷಣವ ಪನ್ನೆರಡು ಮುಂಗೈ |
ವಾಸದೊಳು ಪದಿನಾಲ್ಕೊಗವನಭಿ |
ಲಾಷೆಯಿಂ ನೂರೆಂಟು ಧರಿಸಿದ ಯಜ್ಞಸೂತ್ರದೊಳು || ೪೪ ||

ಮೃಡಶರಣನತಿ ಲಿಂಗಪೂಜೆಯ |
ನೊಡರಿ ಸಂತೋಷದೊಳು ಭಕ್ತರ |
ಗಡಣದಿಂದೈತಂದು ಬಹುವಾದ್ಯಪ್ರಘೋಷಣದಿ ||
ಜಡೆಯ ಶಂಕರದೇವನಿಳಯಕೆ |
ಸಡಗರದಿ ಬಲವಂದು ಲಿಂಗಕೆ |
ಪೊಡವಿಯೊಳು ಮೆಯ್ಯಿಕ್ಕಿ ನಿಂದಂ ಭಕ್ತಿಭಾವದೊಳು || ೪೫ ||

ಸ್ಮರಮಥನ ಜಯ ಪುರಮಥನ ಜಯ |
ಕರಿಮಥನ ಜಯ ಹರಿಮಥನ ಜಯ |
ಶರಣಪತಿ ಜಯ ಪರಮಯತಿ ಜಯ ವಿಶ್ವರೂಪ ಜಯ ||
ಉರಗಧರ[1] ಜಯ ಶಿರಸಜಟಿ ಜಯ |
ದುರಿತರಿಪು ಜಯ ಸ್ಫುರಿತವಪು ಜಯ |
ಕರಣಹರ ಜಯ ಹರಿಣಧರ ಜಯ ಜಯತು ಜಯತೆಂದ || ೪೬ ||

ಸ್ವಾಮಿ ಜಯ ನಿಃಕಾಮಿ ಜಯ |
ಉದ್ದಾಮಿ ಜಯ ಸುಪ್ರೇಮಿ ಜಯ ವೈ |
ಲೋಮಿ ಜಯ ಅನುಲೋಮಿ ಜಯ ಸಿರ್ನಾಮಿ[2] ಜಯ ಜಯತು ||
ರಾಮ ಜಯ ನಿಸ್ಸೀಮ ಜಯ ಅಭಿ |
ರಾಮ ಜಯ ನಿರ್ಭೀಮ ಜಯ ಶ್ರೀ |
ಸೋಮ ಜಯತು ಲಲಾಮ ಜಯ ಜಯತೆಂದನಾ ಶರಣ || ೪೭ ||

ಅಕ್ಷರಾತ್ಮಕ ಜಯ ಜಯತು ನಿಟಿ |
ಲಾಕ್ಷ ಪಾವಕ ಜಯ ಜಯತು ಕಮ |
ಲಾಕ್ಷನಯನಾರ್ಚಿತ ಜಯತು ಪಾಪಾರಿ ಜಯ ಜಯತು ||
ದಕ್ಷಮುಖಹರ ಜಯ ಜಯತು ಜ |
ನ್ಮಕ್ಷಯಂ ಜಯ ಜಯತು ತ್ರಿಜಗ |
ದ್ರಕ್ಷ ಮೂರುತಿ ಜಯ ಜಯತು ಕಾಪಾಲಿ ಜಯ ಜಯತು || ೪೮ ||

---

೧ ದೊಡ (ಇ, ಉ.) ೨ ಮನ್ಸಾಥ (ಉ.)

ಹೀಗೆ ಪೊಗಳ್ದು ಮಹೇಶ್ವರನನನು |
ರಾಗರಸಮುದ್ಗಾರಿಸುತೆ ಶ್ರೈ |
ವಾಗಮೋಕ್ತದಿ ಲಿಂಗಪೂಜೆಯ ಮಾಳ್ಪೊಡನುವಾದ ||
ಆಗಲೆಳೆನೀರ್ ಜೇನು ಪಾಲ್ ಸಂ |
ಯೋಗ ಫಳರಸಮಿಕ್ಷುರಸ ಸಂ |
ಯೋಗವಹ ಪಂಚಾಮೃತದೊಳಭಿಷೇಕವಂ ಮಾಳ್ಪ || ೪೯ ||

ಶ್ರೀಕರಗೆ ಮಂತ್ರೋದಕದೊಳಭಿ |
ಷೇಕಮಂ ಮಾಡಿದನು ಸೌರಭ |
ದಾಕೆಯಹ ಕರ್ಪೂರ ಕುಂಕುಮ ಬೆರೆದ ಗಂಧವನು ||
ಲೋಕನಾಥಂಗರ್ಪಿಸಿದ ಮು |
ಕ್ತಾಕದಂಬಾಕ್ಷತೆಯನಧಿಕ ವಿ |
ವೇಕ ಶಂಕರದಾಸಿಮಯ್ಯಂ ರಚಿಸಿದಂ ಮುದದಿ || ೫೦ ||

ಮಧುಪಗಳು ಬಂಡುಣದ ಪೂರಜ |
ಮುದುರದತಿ ಮುಗುಳಲ್ಲದತಿಯರ |
ಳದ ಗಿಡುವಿನಿಂ ಬೀಳದೆಸಳಳಿಯುದಲಿ ಕೀಟಕವು ||
ಕದುಕಿ ಕಡಿಯದ ತೊಟ್ಟುಗಳು ಪ |
ತ್ತಿದ ಸುಪುಷ್ಪವ ಸೋದಿಸು[1]ತೆ ತೊಳೆ |
ದುದಕದಿಂ ಶಿವಲಿಂಗಕರ್ಪಿಸಿದಂ ಮಹಾ[1]ಶರಣ || ೫೧ ||

ದಾರು ಬೆರೆಯದ ಬಂಡು ಗುಣ ನೆರೆ |
ಸಾರವಲ್ಲದ ಧೂಪದೊಳು ಕ |
ಸ್ತೂರಿ ಕರ್ಪುರ ಚಂದನದ ಪುಡಿಯಂ ಬೆರಸಿ ಹಸ್ತ ||
ಮಾರುತದಿ ಪಟುಮಾಡಿ ಶಿಖಿಯಂ |
ಪೂರಯಿಸಿ ಮಿಗೆ ಶುಭ್ರಧೂಮ್ರೋ |
ದ್ಗಾರ ಸೌರಭದೇಳಿಗೆಯನರ್ಪಿಸಿದನಾ ಶರಣ || ೫೨ ||

ಪಟ್ಟ ಸೂತ್ರದಿ ಪೊಸೆದು ಬತ್ತಿಯ |
ನಿಟ್ಟು ಪೊಂಬಣಿತಿಯೊಳು ನಾರದ |
ಘಟ್ಟಿಯಲ್ಲದ ಗೋಸುಧಾನ್ವಿತ ನೂತನದ ಘೃತವ ||
ನಟ್ಟಣಿಸಿ ಮುದದಿಂದ ದೀಪ್ತಿಯ |
ಮುಟ್ಟಿಸಿ ಮನೋಜಾರಿ ಕಾಲಘು |
ರಟ್ಟನಿಕ್ಕೆಲದೊಳಗೆ ರಚಿಸಿದ ದಾಸಿಮಯ್ಯಗಳು || ೫೩ ||

---

೧-೧ ತ್ತೆ ತೊ । ಳೆದು ಶಿವಂಗರ್ಪಿಸಿದ ಮಂತ್ರೋಕ್ತದೊಳಗಾ (ಇ.)

ಚಾರು ರಜತಸುವರ್ಣರತ್ನದ |
ಕೀರಣೆಯ ವಿದ್ರುಮಲತಾಮಯ |
ದಾರತಿಯೊಳೇಕ ತ್ರಿ ಪಂಚಕ ಸಪ್ತ ಬತ್ತಿಗಳ ||
ಪೂರಯಿಸಿ ಬೆಳಗಿಟ್ಟು ಮಿಗೆ ಘನ |
ಸಾರ ಗುಗ್ಗುಳ ದೀಪಿಕೆಗಳಂ |
ಮಾರಹರಗೆ ನಿವಾಳಿಸಿದನೊಲವಿಂದನಾ ಶರಣ || ೫೪ ||

ಮಾಸ ಗೋಧೂಮಪ್ರಮುಖ ಶಾ |
ಲ್ಯಾಶನವ ಸದ್ಯೋಘೃತಾಮೃತ |
ಬಾಸಣಿಪ ದಧಿ ಶರ್ಕರಾನ್ವಿತ ಬಹು ಪದಾರ್ಥಗಳ ||
ವಾಸವಾರ್ಚಿತ ಶ್ರೀಪದಗೆ ಫಣಿ |
ಭೂಷಣಗೆ ಮೃತ್ಯುಂಜಯಗೆ ಸ |
ರ್ವೇಶ ಶಂಕರಗರ್ಪಿತವ ಮಾಡಿದ ಮಹಾಮಹಿಮ || ೫೫ ||

ಕಣ್ಣ ಕಳೆದಡಕೆಗಳ ಮುರಿಯದ |
ಹಣ್ಣೆಲೆಯನುರೆ ಶೋಧಿಸಿದ ಕೆನೆ |
ಸುಣ್ಣವೊಳ್ಳಿಹ ಪಚ್ಚ ಕಪ್ಪುರವೆರಸಿ ವೀಳ್ಯೆಯವ ||
ಕಣ್ಣು ಮೂರುಳ್ಳೀಶಗರ್ಪಿಸಿ |
ತಿಣ್ಣಗುಣದಿಂ ಮಂತ್ರಪುಷ್ಪವ |
ನುಣ್ಣಿಸುತೆ ಮೆಯ್ಯಿಕ್ಕಿದಂ ಪಂಚಾವನತನೊಲಿದು[೧] || ೫೬ ||

ಪ್ರಣವ ಪಂಚಾಕ್ಷರಿಯ ಜಪಿಸುತ |
ತ್ರಿಣಯನಿದಿರೊಳು ಕುಳಿತು ತೆರೆದೀ |
ಕ್ಷಣದಿ ನೋಡುತ ಜಾನಿಸುತಲೊಪ್ಪಿರ್ದನಾ ಪ್ರಮಥ ||
ಗಣಲಲಾಮಂ ಸರ್ವಭಕ್ತಾ |
ಗ್ರಣಿ ಸುನಿಷ್ಠಾಪದಶಿರೋಮಣಿ |
ಕಣಿಯೆಸೆದನು ಸಮಾಧಿಯಲ್ಲಿ ದ್ವಿತೀಯ ಶಂಭುವೊಲು || ೫೭ ||

ಆ ಸಮಯದೊಳು ಕೋಟಿಸೂರ್ಯ ಪ್ರ |
ಕಾಶದೊಬ್ಬುಳಿಯಾಗಿ ಮೊಳೆದೊಲು |
ಭಾಸ ದೆಸೆದೆಸೆವರಿದು ಬೆಳತುದು ಲಿಂಗಮಧ್ಯದೊಳು ||
ಈಶ ತಲೆದೋರಿದನು ಮೋಕ್ಷನಿ |
ವಾಸ ತಲೆದೋರಿದನು ವಿದ್ಯದ |
ರಾಶಿ ತಲೆದೋರಿದನು ಶಂಕರದಾಸಿಮಯ್ಯನಿಗೆ || ೫೮ ||

---
೧ ನರಿದು (ಇ, ಉ.)

ಶಿರದ ಗಂಗೆಯ ನಿಡುಜಡೆಯ ಚಂ |
ದಿರಗೆರೆಯ ಬಾಲಾರ್ಕಮುಕುಟದ |
ಬರುಹಿನೇತ್ರಾನ್ವಿತಲಲಾಟದ ಕಂಬಳಾಶ್ವತರ ||
ಸ್ಫರಮೆಸೆವ ಕರ್ಣಗಳ ನೀಲೋ |
ತ್ಕರಗಳದ ದಶಭುಜದ ಪನ್ನಗ |
ಭರಣ ಮಸ್ತಕರುಂಡಮಾಲೆಯ ಸಿಂಗರದೊಳೆಸೆದ || ೫೯ ||

ಪಿಡಿದು ಶೂಲಾಭಯ ಕುಲಿಶ ಫಣಿ |
ಕೊಡಲಿಯಂಕುಶ ಪಾಶ ಪಾವಕ |
ಖಡುಗ ಗಂಟೆಗಳಿಂದೆ ಪಳುಕಾಂಗದ ಅಜಾಂಡಗಳ ||
ಇಡಿಕಿರಿದ ಕುರುದೋಳು ಚೆಲುವಿಂ |
ದುಡಿಯೊಳೆಸೆದಿಹ ಕರಟಪುಲಿದೊವ |
ಲುಡಿಗೆಯಿಂ ಕೃಷ್ಣಾಕ್ಷಿಯಂಕಿತ ಪಾದದಿಂದೆಸೆದ || ೬೦ ||

ಅಖಿಳ ವೇದ ಶ್ರುತಿ ಸ್ಮೃತಿ ಸ್ವಾ |
ತ್ಮಕವೆನಿಸಿಯೋಂಕಾರ ಬೀಜೋ |
ನ್ಮುಖದೊಳಂಕುರವಾದ ಶಾಖೆಗಳೆನಿಸುತಿಹ ಪಂಚ ||
ಮುಖದ ಚೆಲ್ವಿಂ ಪಾರ್ವತೀವಾ |
ರಕದೊಡಲ ಭಸ್ಮಾಂಗದಿಂದಂ |
ಸಕಲ ಪ್ರಮಥರ ಗಡಣದಿಂ ಪ್ರತ್ಯಕ್ಷನಾದ ಶಿವ || ೬೧ ||

ಕನಸಿನ ಫಲಂ ಸಿದ್ಧಿಯಾದ |
ತ್ತನುಭವದಿ ಶಿವಭಕ್ತಗಾ ದಿನ |
ಕನಸಿನೊಳು ಶಿವ ನಿಜವ ತೋರಿಸಿದಂತೆ ಜಾಗ್ರದೊಳು ||
ಮನಮೊಲಿದು ಪ್ರತ್ಯಕ್ಷನಾದಂ |
ಘನಮಹಿಮ ಪ್ರತ್ಯಕ್ಷನಾದಂ |
ತ್ರಿಣಯನತಿ ಕಾಣಿಸಿದ ಶಂಕರದಾಸಿಮಯ್ಯಂಗೆ || ೬೨ ||

ಕಪ್ಪುಗೊರಳಂ ಕರುಣದಿಂ ಬಿಗಿ |
ಯಪ್ಪಿದಂ ಸದ್ಭಕ್ತತಿಲಕನ |
ಮುಪ್ಪುರಿಯ ಮೋಹದೊಳು ಕೊಂಡಾಡಿದನು ಮುದ್ದಿಸಿದ ||
ಅಪ್ರತಿಮ ನೀನೆನುತ ತ್ರೈಜಗ |
ದಪ್ಪ ನೊಸಲೊಳು ನೊಸಲನೊರಸ |
ಲ್ಕೊಪ್ಪುವಡೆದುದು ನೇತ್ರವಾತನ ಭಾಳಮಧ್ಯದೊಳು || ೬೩ ||

ಅಂಬಕವೆಯುಚ್ಛ್ರಿತ್ತಿದಂತಾ |
ಯ್ತೆಂಬವೊಲು ಮುಖದರ್ಪಣದೊಳುರೆ |
ಬಿಂಬಿಸಿದೊಲೊಪ್ಪಿದುದು ನವಕುಂಕುಮ ತಿಲಕದಂತೆ ||
ಅಂಬಕಂ ನಿಟಿಲದೊಳು ದಳ್ಳುರಿ |
ಲಂಬಿಸುತೆ ಛಿಟಛಿಟಲೆನುತೆ ಚ |
ರ್ಮಾಂಬರನ ಭಾಳಾಕ್ಷಿಯಿಂದಿಮ್ಮಡಿ ಚತುರ್ಮಡಿಯಿಂ || ೬೪ ||

ಭ್ರಮರಕ ಧ್ಯಾನದೊಳೆ ಕೀಟಂ |
ಭ್ರಮರರೂಪಾದಂತೆ ಗಿರಿಜಾ |
ರಮಣ ನಿಟಿಲಾಂಬಕನ ಧ್ಯಾನದಿ ನಿಟಿಲನಯನಾದ ||
ಸುಮನ ಶಂಕರದಾಸಿ ಶರಣೋ |
ತ್ತಮ ಮಹಾಶಿವಲಿಂಗ ನಿಷ್ಠಾ |
ಭ್ರಮಣಚಿತ್ತಂ ಮೆರೆದ ಕಲಿಯುಗ ವೀರಭದ್ರನೊಲು || ೬೫ ||

ಅಗ್ನಿಗಣ್ಣಂ ಭವವಿಪಿನದಾ |
ವಾಗ್ನಿಗಣ್ಣಂ ಹರಿಶರಧಿವಡ |
ಬಾಗ್ನಿಗಣ್ಣಂ ಘೋರಪಾತಕನಕ್ತಶಿಖಿಗಣ್ಣಂ ||
ವಿಘ್ನಮಂ ಸಂಹರಿಸುತಿಹ ಕಾ |
ಲಾಗ್ನಿಗಣ್ಣಂ ನಿರ್ಮಳಜ್ಞಾ |
ನಾಗ್ನಿಗಣ್ಣಂ ಪಡೆದ ಶಂಕರದಾಸಿಮಯ್ಯಗಳು || ೬೬ ||

ಭಸಿತಮಯ ವಪುವಿಂದೆ ಕೆಂಜೆಡೆ |
ವಿಸರದಿಂ ರುದ್ರಾಕ್ಷಿಭೂಷಣ |
ದೆಸಕದಿಂ ಸುಲಿಪಲ್ಲ ಥಾಳದಿ ಕರ್ಣಕುಂಡಲದಿ ||
ನೊಸಲಕಣ್ಣಿಂ ನಿಮಿರ್ದ ಗಡ್ಡ |
ಪ್ರಸರದಿಂ ಸಾಕ್ಷಾತ ರುದ್ರನೊ |
ಲೆಸೆದ ಶಂಕರದಾಸಿಮಯ್ಯಂ ದೇವನಿದಿರಿನೊಳು || ೬೭ ||

ನೆನೆದ ಕಾರ್ಯಂ ಸಿದ್ಧಿಸಲಿ ಯೌ |
ವನಮುದಾಗಲಿ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿ ಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನ ಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೬೮ ||

**ಅಂತು ಸಂಧಿ ೫ಕ್ಕಂ ಪದ ೩೫೭ಕ್ಕಂ ಮಂಗಳಂ**

೬ನೆಯ ಸಂಧಿ

# ಶಂಕರದಾಸಿಮಯ್ಯನು ದೇವರದಾಸಿಮಯ್ಯನ ತವನಿಧಿಯನ್ನು ಬಯಲ ಮಾಡಿದ್ದು

**ಸೂಚನೆ**

ಈಶಭಕ್ತಲಲಾಮ ಶಂಕರ |
ದಾಸಿಯಾ ಮುದನೂರ ದೇವರ |
ದಾಸಿಮಯ್ಯನ ತವನಿಧಿಯನುರೆ ಬಯಲ ಮಾಡಿದನು ||

ಗಣಪತೀ ಪಿತ ಜಯತು ನಿರ್ಜರ |
ಗಣಪತೀಶ್ವರ ಜಯತು ಕಿನ್ನರ |
ಗಣಪತೀಸಖ ಜಯತು ಮೃತ್ಯುನಿಶಾಟ ಜಯ ಪ್ರಮಥ ||
ಗಣಪತೀಪತಿ ಜಯತು ಭೇಷಜ |
ಗಣಪಶೇಖರ ಜಯತು ಪನ್ನಗ |
ಗಣಪತೀಭೂಷಣ ಜಯತು ಸರ್ವೇಶ ಜಯ ಜಯತು || ೧ ||

ಖಂಡಪರಶುವಿನಂಗರುಚಿಯೊಳು |
ಕಂಡ ತನ್ನಯ ನೊಸಲಕಣ್ಣಿಂ |
ದಿಂಡುಗೆಡೆದನು ಜಡೆಯ ಶಂಕರದೇವನಂಘ್ರಿಯೊಳು ||
ಮಂಡಲದೊಳಿರ್ದನ್ಯದೈವದ |
ತಂಡವಂ ದಹಿಸುವೆನೆನುತಲು |
ದ್ದಂಡ ವೀರಾಟೋಪದಿಂ ಪೊರವಂಟನಾಲಯುವ || ೨ ||

ಬೀಡಿನೊಳಗಿರ್ದನ್ಯ ದೈವವ |
ನೋಡಿದಂ ಕೋಪದೊಳು ದಳ್ಳುರಿ |
ತೀಡಿ ದೆಸೆದೆಸೆವರಿದು ಸುಟ್ಟುದು ಛಿಟಛಿಟಿಲ್ ಧ್ವನಿಯಿಂ ||
ನಾಡು ಬೆದರಿತು ನೆಲ ನಡುಗಿತ |
ಲ್ಲಾಡಿದುವು ಬೆಟ್ಟಗಳನಿತರೊಳ |
ಗೋಡಿ ಬಂದಂ ಶರಣನೊತ್ತಿಗೆ ಜಡೆಯ ಶಂಕರನು || ೩ ||

ಕೋಪವೇತಕೆ ಮಗನೆ ನೇತ್ರೋ |
ತ್ಪಾತ ಲೋಕವನುರುಪುತಿದೆಯಿದು |
ಪಾಪವಲ್ಲವೆ ವಾದಿಸಿದರೊಳುಗುಷ್ಣಮಂ ತೋರು ||
ಶ್ರೀಪದಕ್ಕೆರಗಿದರ ರಕ್ಷಿಸು |
ಈಪರಿಯ ಮಾಡದಿರೆನುತ ಗಿರಿ |
ಜಾಪ ಶಂಕರದಾಸಿಮಯ್ಯನನಪ್ಪಿ ಮುದ್ದಿಸಿದ || ೪ ||

ಹೊಗರೊಗುವ ಬಚ್ಚಳಿಯ ನಂದಿಯ |
ಮೊಗದ ಮಾಳ್ಕೆಯೊಳಿಹ ಮುಖಾಡವ |
ನಗುತ ಶಂಕರದಾಸಿಮಯ್ಯನ ಮುಖಕೆ ಸೇರಿಸಿದ ||
ಮಗನೆ ಕೇಳ್ ನಿನ್ನೊಡನೆ ಪರವಾ |
ದಿಗಳು ವಾದಿಸಲೀ ಮುಖಾಡವ |
ತೆಗೆದವರ ದೈವಗಳ ಸುಡು ಮರೆಯೊಗಲು ಸುಮ್ಮನಿರು || ೫ ||

ಎಂದು ಶರಣಗೆ ಬುದ್ಧಿವೇಳುತೆ |
ಬಂದನಾತನ ಕೈವಿಡಿದುಕೊಂ |
ಡಿಂದುಶೇಖರ ಜಡೆಯ ಶಂಕರ ಪೆಂಪಿನಿಂ ತನ್ನ ||
ಮಂದಿರಕೆ ಮತ್ತೇನು ವರ ಬೇ |
ಡೆ[೧]ಂದು ಕೇಳೆ ಮಹಾ ಶರಣನಿಂ |
ತೆಂದು ಬಿನ್ನವಿಸಿದನು ಕೈಗಳ ಮುಗಿದು ಭಕ್ತಿಯೊಳು || ೬ ||

ದೇವನೀಪರಿ ನಿನ್ನ ಕರುಣದ |
ಗೋವು ನಾಂ ಭವಪಾಪಪೆರ್ಬುಲಿ |
ಯಾವರಿಸದೊಲು ನಿನ್ನ ಮುದ್ರೆಯ ಗಣವರನ ನನಗೆ ||
ಕಾವಲಿಡು ಸದ್ಭಕ್ತಿಸ್ತಂಭ |
ಸ್ಥಾವರದಿ ವಿಮ್ಯೋದ್ಗುಣದಿ ಕಂ |
ತಾವರಣಮಂ ಮಾಡಿಸೆಂದೆರಗಿದನೊಲಿದು ಮಗುಳೆ || ೭ ||

ಆದರಿಸಿ ಕೇಳಿದನೊಲವಿನಿಂ |
ವೇದಗೋಚರನಾ ನುಡಿಯನಿವ |
ಸಾಧಕನಲಾ ಎಂದು ಮನದೊಳು ಮೆಚ್ಚುತಂ ವಕ್ತ್ರ ||
ಪಾದನೆಂಬಾಂಕಿತದೊಳೆಸೆವ ಗ |
ಣಾಧಿಪನ ಕರೆದೊಲಿದು ಕರುಣಾಂ |
ಬೋಧಿ ಶಂಕರದಾಸಿಮಯ್ಯಂಗಿತ್ತನೇನೆಂಬೆ || ೮ ||

---

೧ ಕೆ (ಇ, ಉ.)

ಭಾಳನಯನಂ ವಕ್ತ್ರಪಾದಗೆ |
ಹೇಳಿದಂ ಮೇಣೀ ಶರಣನಿ |
ತ್ತೂಳಿಗವ ಮಾಡೆಮ್ಮ ಕಾಬೊಲು ಕಾಣೆನುತ್ತೊಲಿದು ||
ಕೇಳು ದೇವಾ ನಿನ್ನ ಕಿಂಕರ |
ನಾಳಿನಾಳಹುದೆನ್ನ ಭಾಗ್ಯದ |
ಮೇಳ ನಾ ಬದುಕಿದೆನೆನುತ ವಂದಿಸಿ ಮಗುಳೆ ನುಡಿದ || ೯ ||

ಖಂಡಪರಶುವ ಭಜಿಪ ಶರಣರ |
ಕಂಡೆರಗದರನವರ ಶುಶ್ರೂಷೆ |
ಗಂಡಿಸುತಲವರಿತ್ತನುಗ್ಗೆಯ ಮಿರುವರನವರು ||
ಉಂಡು ಮಿಕ್ಕುದಕೋಕರಿಸುವರ |
ದಂಡಧರ ಪಿಡಿತಂದು ಪುಳುವಿನ |
ಕೊಂಡದೊಳಗದ್ದುವ ಸಹಜವೆಂದೆಂಬ ಶ್ರುತಿಯುಂಟು || ೧೦ ||

ಕರೆಗೊರಳನರ್ಚಕರ ಕಂಡರೆ |
ಗರುವಿಸುತ್ತವರೊಡನೆ ದೊಡ್ಡಿತ |
ಮೆರೆಯುತಂ ಶಿವಭಕ್ತರೊಳಗತಿ ಜಾತಿ ಸಂಕರವ ||
ನರಸುತವರೂಳಿಗದೆಡೆಗೆ ಮೈ |
ಯುರಿಸುತಿಹ ಪಾತಕರನಂತಕ |
ಮುರಿದು ಮೋದುವನೆಂದು ವೇದಂ ಘೂರ್ಮಿಸುತ್ತಿಹುದು || ೧೧ ||

ಶರಣರಂ ಬೈದವರ ಬೈದರೆ |
ಶರಣರಂ ಪೊಯ್ದವರ ಪೊಯ್ದರೆ |
ಶರಣರಾ ಪ್ರಾಣಕ್ಕೆ ಮುನಿದರೆ ಪ್ರಾಣವಂ ತೆಗೆಯೆ ||
ಶರಣದೂಷ್ಯರ ದೂಷಿಸಿದರಾ |
ಶರಣರೆಡರ್ಗೆಡರಾದರಾತಗೆ |
ಪರಮಪದವಹುದೆಂದು ಪೇಳುತ್ತಿರ್ಪುದಾಮ್ನಾಯ || ೧೨ ||

ಶಿವಶರಣರಂ ನೆನೆದವಗೆ ವಾ |
ಸವಪದಂ ಕಂಡವಗೆ ವಾಣೀ |
ಧವಪದಂ ಸಾರ್ದವಗೆ ವಿಷ್ಣುಪದಂ ನುಡಿಸಿದವಗೆ ||
ಭವರಹಿತ ರುದ್ರಪದ ವಂದಿಸಿ |
ದವನಿಗೀಶ್ವರಪದವಿ ಸೇವೆಯ |
ವಿವರದಿಂ ಮಾಡಿದಗೆ ಶಿವಪದವೆಂಬ ಶ್ರುತಿಯುಂಟು || ೧೩ ||

ನಿನ್ನ ಸನ್ನಿಧಿಯಿಂ ವಿಶೇಷಂ |
ನಿನ್ನ ಭಕ್ತರ ಭಕ್ತಭಕ್ತರ |
ಸನ್ನಿಧಿಯೊಳಿಪ್ಪುದು ಶಿವೈಕ್ಯರ ದಾಸಿಯಾಗಿಹುದು[೧] ||
ನಿನ್ನೊಳಿಪ್ಪುದರಿಂದಧಿಕ ಸಂ |
ಪನ್ನ ಶಂಕರದಾಸಿಯಯೊಳಿಗ |
ವೆನ್ನಪೂರ್ವಾರ್ಜಿತ ಫಲೋದಯವೆಂದ ಗಣನಾಥ || ೧೪ ||

ನೇಮವಿತ್ತಾ ತಂತ್ರಿ ಭುವನ |
ಸ್ವಾಮಿ ನೀಂ ಸದ್ಭಕ್ತನಿಕರಲ |
ಲಾಮ ಶಂಕರದಾಸಿ ಸೇವಾಕರ್ತೃ ಸೇವಕನು ||
ನಾ ಮಗುಳೆ ಮಾತೇನು ಶಿವ ನಿ |
ಮ್ಮಾಮಳಾಂಘ್ರಿಯ ಪೂಜಿಸಿದ ಫಲ |
ದಾ ಮಹತ್ವಮಿದೆಂದು ನಿರ್ಕುಳಿಯಾದ ಗಣನಾಥ || ೧೫ ||

ಈಶನೊಲವಿಂ ಪೇಳ್ದ ಶಂಕರ |
ದಾಸಿಮಯ್ಯಗೆ ವಕ್ತ್ರಪಾದ ಗ |
ಣೇಶನಂ ನಾನೆಂದು ಭಾವಿಸೆನುತ್ತೆ ಬೀಳ್ಕೊಂಡು ||
ಆ ಸಮಯದೊಳು ಲಿಂಗಪೀಠನಿ |
ವಾಸದೊಳಗಡಗಿದನು ಶರಣ ವಿ |
ಲಾಸದಿಂ ಪೊರವಂಟ ಶಿವಭಕ್ತರ ಗಡಣಸಹಿತ || ೧೬ ||

ಉಘೆ ಉಘೇ ಚಾಂಗು ಭಲ ಎನುತತಿ |
ಪೊಗಳಿದರು ಶಿವಭಕ್ತರೊಡೆಯರು |
ಸುಗುಣಮಣಿ ಗಣನಾಥ ಸಹಿತಂದೈದಿದನು ಮನೆಯ ||
ಅಗಣಿತಾನಂದದೊಳು ಸದ್ಭ |
ಕ್ತಗಣ ತಿಂತಿಣಿಯೊಳಗೆ ನಿತ್ಯಂ |
ಜಗ ಪೊಗಳೆಯಿರುತಿರ್ದ ಶಂಕರದಾಸಿಮಯ್ಯಗಳು || ೧೭ ||

ಹತ್ತಿರದೊಳಿರ್ದನ್ಯ ದೈವದ |
ಮೊತ್ತವಂಜುತ ಬಂದು ವಂದಿಸಿ |
ತೊತ್ತುಗೆಲಸವ ಮಾಡುತಿರ್ದುವು ಶರಣನಾಜ್ಞೆಯೊಳು ||
ಸುತ್ತಕಡೆಯೊಳಗಾಗಿ[೨] ಬೆಳಗನೆ |
ಯೊತ್ತರಿಸಿದದು ಕೀರ್ತಿಯಿಂದೆಸೆ |
ಯುತ್ತ ಶಂಕರದಾಸಿಮಯ್ಯಂ ಸಂತಸದೊಳಿರ್ದ || ೧೮ ||

---

೧ ಸೆವೆಯೇ ಎನಗೆ (ಇ.)  ೨ ಕಡಲೊ (ಇ.)

ಏನ ಹೇಳುವೆ ವಕ್ತ್ರಪದ ಸೈ |
ದಾನಮಂ ಶರಣರ ಮನೆಯಲ್ಲೈ |
ಮಾನದಿಂ ಮಿಗಿಲಾಗದಂದದಿ ನಿಚ್ಚ ತರುತಿಹನು ||
ಆ ನವ ದ್ರವ್ಯದಿ ಗಣೇಶ್ವರ |
ಮಾನನಿಧಿ ಶಿವದಾಸಿ ಜಂಗಮ |
ತಾನು ಬರುತಿಹ ಭಕ್ತರೊಡೆಯರು ತೃಪ್ತಿಬಡುತಿಹರು || ೧೯ ||

ಆಯತದಿ ಮಾಡುತಿಹ ಸೂಜಿಯ |
ಕಾಯಕದಿ ಬಂದಡ್ಡದರೆಯನು |
ಬೀಯದರ್ಥದ ಮೇಲುವೆಚ್ಚಕೆ ವಸ್ತ್ರಕಪ್ಪಡಕೆ ||
ಸಾಯುಸವ ಕಳೆದುಳಿದು ಮಾಡುತೆ |
ಕಾಯಜಾರಿಯನೋಲಗಿಸುತೆ ವಿ |
ಡಾಯದೊಳಗಿರುತಿಹನು ಶಂಕರದಾಸಿಮಯ್ಯಗಳು || ೨೦ ||

ಯೋಗಿಗಳು ಬೆದರುವರು ಕಾಣುತೆ |
ಬೀಗುತಿರ್ಪರು ಪಾಶುಪತಿಗಳು |
ಸಾಗುವರು ಕಾಳಾಮುಖಿಗಳೋಡುವರು ಭೀತಿಯೊಳು ||
ಜೋಗಿಗಳು ಬಾಯ್ದೆರೆಯುತಳ್ಕಿದೆ |
ಯೋಗುವರು ಸನ್ಯಾಸಿಗಳು ವೀ |
ರಾಗಮಿಕ ಮಹಶರಣನಿದಿರಿನೊಳಲ್ಲಿ ನಿಲಲಂಜಿ || ೨೧ ||

ಶಾಕ್ತೆಯವು ತಗ್ಗಿದುವು ವೈಷ್ಣವ |
ಶಕ್ತಿಗೆಟ್ಟುದು ಶೈವ ಸಾವಾ |
ನ್ಯೋಕ್ತಮಾದುದು ಸೌರವಡಗಿದುದರರೆ ಗಣಪತ್ಯ ||
ಮುಕ್ತಮಾಯ್ತು ಕಪಾಲಮಾರ್ಗದ |
ಶ[1]ಕ್ತಿ ಬಿಟ್ಟುದು ವೀರಶೈವಾ |
ಸಕ್ತ ಶಂಕರದಾಸಿಮಯ್ಯಗಳುಗ್ರ ಲೋಚನದಿ || ೨೨ ||

ಹತ್ತಿರದ ಬೌದ್ಧಾಲಯಗಳೊಳು |
ಕತ್ತೆಯಾಶ್ರಯಿಸಿದುವು ಬಲುಪಿಂ |
ತೆತ್ತಿಸಿದ ಕಲ್ಲುದುರಿ ಕೆಡೆದುವು ವಿಷ್ಣುಸದನಗಳು ||
ಮತ್ತುಳಿದ ದೈವಗಳ ಹವಣೇ |
ನುತ್ತಮ ಶ್ರೀವೀರಶೈವ ಶು |
ಭೋತ್ತರದಿ ನೆಗಳಿದುದು ಶಂಕರದಾಸಿಮಯ್ಯಗಳಿಂ || ೨೩ ||

---
೧ ದು । ರು (ಇ.)

ಇಂತಿರುತ ಶಿವಭಕ್ತಮಣಿಯೋ |
ರಂತೆಯೊಂದಾನೊಂದು ದಿವಸಂ |
ಕಂತುಮರ್ದನ ಜಡೆಯ ಶಂಕರನಾಲಯಕೆ ಬಂದು ||
ಸಂತಸದಿ ಮುಳುಗಾಡಿ ಲಿಂಗದ |
ಭ್ರಾಂತಿಯಿಂದಿಹ ಸಮಯದೊಳು ವೇ |
ದಾಂತವೇದ್ಯ ನಿರೂಪ ಮಾಡಿದ ಶಿವಶರಣನೊಡನೆ || ೨೪ ||

ಮಗನೆ ಕೇಳ್ ಮುದನೂರೊಳಗೆ ಭ |
ಕ್ತಗಣತಿಲಕಂ ವೀರಶೈವಂ |
ಸುಗುಣಮಣಿಯೆಂದೆಸೆವ ದೇವರದಾಸಿಮಯ್ಯಗಳು ||
ಜಗದೊಳಗೆ ನಾ ಕಾಣೆನವರೊ |
ರಗೆಯ ಭಕ್ತರ ತನ್ನ ತಾನೇ |
ಪೊಗಳಿಕೊಂಬುವ ಗುಣಮದೊಂದಿಹುದಾ ಶರಣನೊಳಗೆ[೧] || ೨೫ ||

ಪೊಡವಿಯೊಳು ತನ್ನಂತೆ ಶ್ರೀಮಹ |
ಮೃಡನ ಮೆಚ್ಚಿಸಿ ತವನಿಧಿಯನುರೆ |
ಪಡೆದರುಂಟೇ ಎಂದು ತನ್ನ ನಿವಾಸಕ್ಕೈತಂದ ||
ಒಡೆಯರೊಳು ಭಕ್ತರೊಳಗಾಡುವ |
ಕೊಡುವ ಗುಣ ತನಗಿಲ್ಲದಲ್ಲೆಂ |
ದಿಡಿದ ಹಮ್ಮಿಂದೊದರುತಿಹನದ ಬಿಡಿಸು ಹೋಗೆಂದು || ೨೬ ||

ಎಂದ ವಾಕ್ಯಂ ಕೇಳಿ ದೇವಗೆ |
ವಂದಿಸಿಯೆ ಬೀಳ್ಕೊಂಡು ಪರಮಾ |
ನಂದಪೂರಣಹೃದಯ ಶಂಕರದಾಸಿಮಯ್ಯಗಳು ||
ಮಂದಿರಕೆ ಬಂದರಸಿಯೊಳು ಗುಣ |
ವೃಂದಶೇಖರ ವಕ್ತ್ರಪ್ರಸಾದನೊ |
ಳಿಂದುಮೌಳಿ ನಿರೂಪಿಸಿದುದಂ ಪೇಳಿ ಸಂತಸದಿ || ೨೭ ||

ನವಿಲೆಯೊಳಗಿಹ ಭಕ್ತರೊಡೆಯರ |
ಭವನಗಳಿಗೈತಂದು ನಿಜ ಕಾ |
ರ್ಯವನವಂದಿರಿಗರುಪಿ ವಂದಿಸಿ ಪರಕೆಯಂ ಕೊಳುತೆ ||
ಅವರ ಬೀಳ್ಕೊಂಡಕ್ಕರಿಂದಂ |
ಶಿವಶರಣ ಪೊರವಂಟ ಪುರಮಂ |
ಭವರಹಿತ ಶ್ರೀಜಡೆಯ ಶಂಕರನಂ ನೆನೆವುತಾಗ || ೨೮ ||

---
೧ ಡನೆ (ಉ.)

ಬೆಂಬಳಿಯಲ್ಯೆದಿದರು ಭಕ್ತ ಕ |
ದಂಬ ಶಂಕರದಾಸಿಮಯ್ಯನ |
ಹಂಬಲಿಸುತಂ ತಾಯನಗಲಿದ ಮಕ್ಕಳುಗಳಂತೆ[೧] ||
ಅಂಬುಜವರತರ್ಸೈದೆ ದುಃಖಿಪ |
ತುಂಬಿಗಳದೆಂತಂತೆ ಹಿಮಕರ |
ಬಿಂಬ ಜಗುಳುತ್ತಿರೆ ಮರುಗುವ ಚಕೋರಿಯೆಂತಂತೆ || ೨೯ ||

ವಿವಿಧ ವಿನಯದಿ ಸಂತಯಿಸಿ ಗಣ |
ನಿವಹಮಂ ನಿಜಪುರಕೆ ಕಳುಹಿದ |
ಶಿವಶರಣ ನಿಜ ವಕ್ತ್ರಪಾದಗಣೇಶ ತನ್ನ ನಿಜ ||
ಯುವತಿ ಸಮಯಾಚಾರದೊಡೆಯರು |
ತವೆ ಕೆಲರು ಮಾಹೇಶ ಸಹಿತಂ |
ಭುವನ ದಿಗಿಲಿಸುವಂತೆ ನಡೆದಂ ಭೂತಗಣಸಹಿತ || ೩೦ ||

ಬಹುತಮಣಿಯೊಡನ್ಯೆದಿದರು ಮಾ |
ತೃಕೆಯರಗಣಿತ ಮಂತ್ರದೇವೀ |
ಪ್ರಕಾರಮಾ ಚೌಸಷ್ಟಿ ಯೋಗಿಣಿ ಗ್ರಾಮದೇವಿಯರು ||
ಮುಖಿಗಳಷ್ಟದಶಾದಿಶಕ್ತಿಯ |
ರಖಿಳ ಜಲವನದೇವಿಯರು ಗೋ |
ಮುಖದ ಶರಣಲಲಾಮನೆಡಬಲದೊಳಗೆ ನಡೆತರುತೆ || ೩೧ ||

ಚಂಡಿ ಬಿಜ್ಜಣವಿಕ್ಕುವಳು ಚಾ |
ಮುಂಡಿ ಚಾಮರದಾದಿಯಾದಳು |
ಗಿಂಡಿವಿಡಿದಳು ಕಾಳಿ ಡವಕೆಯನಾಂತಳೆರಕಾಟಿ ||
ಮುಂಡಿಸುವ ಕಂಬಳಿವಿಡಿದಳು |
ದ್ದಂಡೆ ಚವುಡೇಶ್ವರಿಯು ಹಡಪದ |
ಮಂಡನವನಾಂತೊಡನೆ ನಡೆದರು ಜಕ್ಕಿಯುಡುಚಿಯರು || ೩೨ ||

ಮಾರಿ ಪಾವುಗೆವಿಡಿದಳಾ ಪೆಂ |
ಡಾರಿ ಮುಖಪಾವಡದ ದಾಸಿ ಕ |
ಠಾರಿಯಾಂತಳು ದುರ್ಗಿ ಕೈಲಾಗಿತ್ತಳೆಕನಾತಿ ||
ಚಾರು ಬೊಕ್ಕಸವಾಂತಳೆಕ್ಷಿಣಿ |
ಘೋರ ದೇವತೆಯರುಗಳಾತನ |
ಸೇರುವೆಯೊಳ್ಯೆತಂದರೊಂದೊಂದೊಳಗವನಾಂತು || ೩೩ ||

---

೧ ಳಳುವಂತೆ (ಇ.)

ಕೊಡೆಯುವಳು ಹರುಕಾಂತಿ ಕನ್ನಡಿ |
ವಿಡಿದವಳು ಮಾತಂಗಿ ಕರಗವ |
ಪಿಡಿದವಳು ಕನ್ನಕ್ಕಿ ಭಂಡಾರಕೆ ಲಕುಮಿ ಬೋನ ||
ಗುಡಿಕೆಯಾಂತಳು ಮಸಣಿಯುರೆ ಪೂ |
ವಿಡಿತಿ ವನದೇವತೆ ಪತಾಕೆಯ |
ಪಿಡಿದು ನಡೆದರು ಕಾಳರಾತ್ರಿಕರಾಳದೇವಿಯರು || ೩೪ ||

ಜೆಟ್ಟಿಗರು ಪೊಂಗುದಿಗೆಯಾಂತರು |
ಕಟ್ಟಿಗೆಯವರು ಯೋಗಿಣೀವ್ರಜ |
ಭಟ್ಟರಂದದಿ ಪೊಗಳಿದರು ಚೌವೀಸ ತೀರ್ಥಕರು ||
ದಿಟ್ಟ ರಾವುತರಾಗಿ ಮಿಗೆ ಪರಿ |
ವೇಷ್ಟನದಿ ಮೈಲಾರಸಂಕುಳ |
ವಿಟ್ಟಣಿಸಿ ಭೈರವರು ಹರಿಗೆಯ ತುಳುವ ಪಾಯಕರು || ೩೫ ||

ಬಿಲ್ಲವರು ಕಾಡೆರೆಯ ವೀರರು |
ಝುಲ್ಲಿಯಾ ಸಬಳಿಗರು ಬೀರರು |
ನಿಲ್ಲದಿರಿವಾಳುಗಳು ಕಾಳಬ್ರಹ್ಮರಾಕ್ಷಸರು ||
ಮಲ್ಲ ಭೂತ ಪಿಶಾಚಿ ಸಂಕುಳ |
ಘಲ್ಲಣೆಯ ಕಹಳೆಗಳ ವಾದ್ಯಗ |
ಳೆಲ್ಲವನ್ನಾಡಿಸುತೆ ನಡೆದರು ಶರಣಮಣಿಯೊಡನೆ || ೩೬ ||

ಗೂಳಿಗಳ ಠಕ್ಕೆಯದ ವ್ಯಾಸನ |
ತೋಳ ಕೇತನಗಳ ಕಲಶಗಳ |
ಮೇಳವಿಸಿ ಮುಂಗಡೆಯ ಮಿರುಗುವ ಶುಭ್ರನೇಜಯದ ||
ಹೇಳಲಳವೇ ಘೂರ್ಮಿಸುವ ವಾ |
ದ್ಯಾಳಿಗಳ ಬಹು ಬಿರುದನೊದರುವ |
ಕಾಳೆಗಳ ಗಡಣದೊಳು ತೆರಳಿದ ಹರಿಶರಣಭರಣ || ೩೭ ||

ಶಿವಸಮಯಕತಿ ಸಲುವ ಪಲ್ಲವ |
ಧವಳತರ ಪೂರ್ಣಾತಪತ್ರದ |
ಧವಲಭೂಷಣದಂಡದಾಂದೋಳದ ಸಿತಧ್ವಜದ ||
ಧವಳಮಯವಹ ಕನಕಚಾಮರ |
ಧವಳ ಶಂಖದ ಘೋಷಣೆಯ ವೈ |
ಭವದಿ ಶಂಕರದಾಸಿಮಯ್ಯಂ ನಡೆದನೇನೆಂಬೆ || ೩೮ ||

ಹೊಡೆವ ವಾದ್ಯಧ್ವನಿಗದಿರಿದುದು |
ಪೊಡವಿ ಬಹು ಕಹಳೆಗಳ ಬಿರುದಿನ |
ನುಡಿಗೆ ಮುಖ ಮರೆಸಿದುದು ಪರವಾದಿಗಳ ಸಂಕುಳವು ||
ಜಡಿವ ಬಹಳ ಪತಾಕೆಗಳ ಕಂ |
ಡುಡುಗಿ ಹೋದತ್ತನ್ಯ ದೈವದ |
ಗಡಣವೀ ಪರಿ ಭಯರಸವ ಪಸರಿಸುತೆ ತೆರಳಿದನು || ೩೯ ||

ಪಥದೊಳಗೆ ಮಾರಾಂತ ದೈವವ |
ಮಥಿಸುತಂ ಕೆಲ ದೈವ ಶರಣಾ |
ಗತರದಾಗಲು ರಕ್ಷಿಸುತ್ತಂ ಬಿರುದುಗೇಳ್ದನ್ಯ ||
ಮತದವರು ವಾದಿಸೆ ಗೆಲುತ್ತಂ |
ವ್ರತಿ ಸದಾಚಾರಜ್ಞ ಭಕ್ತ್ಯೋ |
ನ್ನತೆಯ ಶಿವಭಕ್ತರ ನೀರಿಕ್ಷಿಸುತ್ತೈದಿದಂ ಶರಣ || ೪೦ ||

ಶೇಷಗುಣಸಂಪನ್ನ ಮಹಿಮಾ |
ಭೂಷಣಾಂಗಂ ಶಿಖಿಪುರವರಾ |
ಧೀಶ ಸದ್ಗುರು ಜಡೆಯ ಶಂಕರಪದನಳಿನಭೃಂಗ ||
ಈಶಭಕ್ತಲಲಾಮ ಭಕ್ತಿನಿ |
ವಾಸ ಭಾಳಾಂಬಕನು ಶಂಕರ |
ದಾಸಿಮಯ್ಯಂ ಬಂದನಾ ಮುದನೂರ ಸನ್ನಿಧಿಗೆ || ೪೧ ||

ಕಂಡನಾ ಮುದನೂರಿನಿಂ ಬಹ |
ತಂಡತಂಡದಿ ನೆಲ್ಲ ತುಂಬಿಹ |
ಬಂಡಿಗಳ ತಲೆಹೊರೆಯ ಹೆಡಗೆಯ ತೋರ ಮೋಳಿಗೆಯ ||
ಮಂಡಿಸಿದ ಹೇರುಗಳ ಬೆನ್ನೊಳು |
ಕೊಂಡು ಬಹ ಹೇಸರದ ಕುದುರೆಯ |
ಹಿಂಡು ಜೀವಧನಗಳ ಶಂಕರದಾಸಿಮಯ್ಯಗಳು || ೪೨ ||

ಮೆರೆದನಲ್ಲಾ ಮಹಿಮೆಯಂ ಧರೆ |
ಗುರುವ ವಸ್ತುವ ಪಡೆದು ಮಿಗೆ ಕಿ |
ಕ್ಕಿರಿದು ಧಾನ್ಯದ ಸುಗ್ಗಿ ರಾಜ್ಯದೊಳೆನುತ ಬರುತಿರ್ದ ||
ಕರೆಗೊರಳನೇ ಬಲ್ಲ ದೇಶದ |
ಬರನು ಬಿಟ್ಟುದು ಶಿವ ಶಿವಾ ಈ |
ತೆರನ ಗಳಿಸಿದರುಂಟೆ ದೇವರದಾಸಿಮಯ್ಯನೊಲು || ೪೩ ||

ಭಾಳನೇತ್ರದ ಭಕ್ತ ಬರ್ಪುದ |
ಕೇಳಿ ದೇವರದಾಸಿಮಯ್ಯಂ |
ಹೇಳಲಳವೇ ಸಂತಸದಿ ತನ್ನೂರೊಳಿಹ ಭಕ್ತ ||
ಜಾಳಸಹಿತಂ ಕಳಶ ಕನ್ನಡಿ |
ಮೇಳದೆಳೆವೆಣ್ಣುಗಳೊರಲುತಿಹ |
ಕಾಳೆಗಳ ಬಹು ವಾದ್ಯಘೋಷಣೆಯಿಂದಲಿದಿರ್ಗೊಂಡ || ೪೪ ||

ಸದಮಳಾಂಗನ ನಂದಿಕೇಶ್ವರ |
ವದನನಂ ಸದ್ಭಕ್ತರಾಶ್ರಯು |
ಸದನನಂ ಪರದೈವಕೋಳಾಹಳನ ಪರಸಮಯ ||
ಮದಹರನ ಸುಜ್ಞಾನಪೂರಣ |
ಹೃದಯ ಶಂಕರದಾಸಿಮಯ್ಯನ |
ನಿದಿರುಗೊಂಡಂ ಕರುಣಿ ದೇವರದಾಸಿಮಯ್ಯಗಳು || ೪೫ ||

ವಾಸರಾಧಿಪನೆಡೆಗೆ ನಕ್ಷ |
ತ್ರೇಶ ಬಂದೊಲು ವೃಷಭನಂ ಚಂ |
ಡೇಶ ಸಾರ್ದೊಲು ಭೃಗುವಿನೆಡೆಗೆ ದಧೀಚಿ ಬಂದಂತೆ ||
ನ್ಯಾಸನೆಡೆಗೆ ಕಣಾದ ಬಂದೊಲು |
ಈಶಭಕ್ತಲಲಾಮ ಶಂಕರ |
ದಾಸಿಮಯ್ಯಂ ಸಾರ್ದ ದೇವರದಾಸಿಮಯ್ಯಗಳ || ೪೬ ||

ಭರದಿ ದೇವರದಾಸಿಮಯ್ಯಂ |
ಧರೆಯೊಳಗೆ ಮೆಯ್ಯಿಕ್ಕೆ ಕಂಡಾ |
ಶರಣ ಶಂಕರದಾಸಿಮಯ್ಯಗಳೊಡನೆ ನಮಿಸಿದರು ||
ಪರಮಮಾಹೇಶ್ವರಸಮೂಹಂ |
ಶರಣೆನಲು ತಾನೆರಗಿದಂ ಘನ |
ಹರುಷಮಯರಿರ್ವರು ವಿರಾಜಿಸಿದರ್ ಸರಾಗದೊಳು || ೪೭ ||

ಆಗರವ ಕಂಡರಸುಗಿಳಿಯೊಲು |
ಮೇಘಮಂ ಕಂಡಾಡ್ವ[೧] ನವಿಲೊಲು |
ಪೂಗಳಂ ಕಂಡಾರಡಿಯೊಲುಂ ಮಾಂದಳಿರ ಕಂಡ ||
ಕೋಗಿಲಂದದಿ ಶಶಿಯು ಕಂಡಿನಿ |
ಸಾಗರದೊಲಿರ್ದರ್ ಶರಣರನು |
ರಾಗರಸದೊಳಗೊಪ್ಪಿದರು ರೋಮಾಂಚ ಸುಗ್ಗಿಯೊಳು || ೪೮ ||

---
೧ ಳ್ವ (ಇ, ಉ.)

ಶರಣರುಘೆ ಉಘೆ ಎಂಬ ಘೋಷದಿ |
ಮೊರೆವ ವಾದ್ಯಾಡಂಬರದಿ ಭೋಂ |
ಕರಿಪ ಶಂಖಧ್ವನಿಗಳಿಂ ಕಹಳೆಗಳ ರಭಸದೊಳು ||
ಕರುಣಿ ಶಂಕರದಾಸಿಮಯ್ಯನ |
ಶರಣ ದೇವರದಾಸಿ ತನ್ನಯ |
ಪುರಕೆ ಬಿಜಯಂಗೆಯಿಸಿಕೊಂಡೊಯಿದಂ ಸರಾಗದೊಳು || ೪೯ ||

ಆ ಮಹಾ ಪುರದೊಳಗೆ ನೆಲಸಿಹ |
ರಾಮನಾಥನ ಗುಡಿಗೆ ಬಂದಾ |
ಸ್ವಾಮಿಗಾನತಗೈದು ಶಂಕರದಾಸಿಮಯ್ಯಗಳು ||
ಈ ಮಹಿಮನಿರ್ದಲ್ಲಿಹುದು ಪರಿ |
ಣಾಮವೆಂದು ಶಿವಾಲ್ಯದೊತ್ತಿನ |
ಧಾಮದೊಳಗಾಶ್ರಯಿಸಿದಂ ಸತಿಶಿಷ್ಯಸಹವಾಗಿ || ೫೦ ||

ಒಡನೆ ಬಂದ ಸಮಸ್ತ ದೇವರ |
ಪಡೆಗಳನು ಕರೆಕರೆದು ಪುರವನ |
ದೆಡೆಯೊಳಿರಿಯೆಂದುರೆ ನಿರೂಪವ ಮಾಡಿ ಬೀಳ್ಕೊಟ್ಟ ||
ಮೃಡಶರಣ ಮುಂಡಿಸಿದ ಭಕ್ತರ |
ಗಡಣದಿಂ ತನ್ನೊತ್ತಿನೊಳು ತ |
ನ್ನೊಡಲೆನಿಸುತಿಹ ದಾಸಿಮಯ್ಯನ ಕುಳ್ಳಿರಿಸಿಕೊಂಡ || ೫೧ ||

ಶಿವನ ಶರಣರ ತಿಂಥಿಣಿಯೊಳನು |
ಭವದ ಸದ್ಗೋಷ್ಠಿಯೊಳು ಕರುಣಾ |
ರ್ಣವರು ಶಂಕರದಾಸಿ ದೇವರದಾಸಿಮಯ್ಯಗಳು ||
ಅವಿರಳಾನಂದದೊಳಿಹಾಕ್ಷಣ |
ಯುವತಿಮಣಿ ಶಿವದಾಸಿ ತನ್ನಯ |
ಕುವರನೆನಿಸುವ ವಕ್ರಪಾದನೊಳೆಂದಳಿಂತೆಂದು || ೫೨ ||

ಹೋಗು ಧಾನ್ಯಕ್ಕೆಲೆ ಮಗನೆ ಕರ |
ಬೇಗ ಬಾ ದೇವರು ಬಳಲಿ ಬೆಂ |
ಡಾಗುತೈದರೆಯೆಂಬ ನುಡಿಯುಂ ಕೇಳಿ ಮನದೊಳಗೆ ||
ಈ ಗರುವ ಸದ್ಭಕ್ತಗೀಯೆಡ |
ರಾಗಿಹುದು ಗುಣವೇ ಎನುತ ಚಿಂ |
ತಾಗಮದೊಳಾ ಶರಣ ದೇವರದಾಸಿಮಯ್ಯಗಳು || ೫೩ ||

ಬೇಡವಯ್ಯಾ ನೀವು ಧಾನ್ಯವ |
ಬೇಡಿ ತಾಹ ಪ್ರಯಾಸ ನಮ್ಮಯ |
ಬೀಡಿನಲ್ಲಿಪ್ಪನ್ನ ಬತ್ತವ ಬಂಡಿಯೊಳು ನಿಮಗೆ ||
ಹೂಡಿ ಕಳುಹುವೆನೆಮ್ಮ ಬತ್ತದಿ |
ನಾಡು ಬದುಕಿದೆ ನಿಮಗೆ ಕೊಟ್ಟರೆ |
ಕೇಡೆ ಎನುತಾ ಶರಣ ಶಂಕರದಾಸಿಯೊಳು ಪೇಳ್ದ || ೫೪ ||

ಮೃಡನ ಮೆಚ್ಚಿಸಿ ಭಾಳನೇತ್ರವ |
ಪಡೆದಿರೇತಕೆ ಜೀಯ ಭಾಗ್ಯವ |
ಪಡೆಯದಾದಿರಿ ನಿಚ್ಚ ಧಾನ್ಯವ ಬೇಡಿ ತಂದುಂಬ ||
ಬಡತನದೊಳಿರಬೇಡಿ ಧಾನ್ಯವ |
ಕೊಡುವೆ ಬೇಕಾದಷ್ಟು ನಾಂ ಸಲೆ |
ಪಡೆದ ತವನಿಧಿ ನಿಮ್ಮದಲ್ಲವೆ ದೇವ ಕೇಳೆಂದ || ೫೫ ||

ಶರಣನಾಡಿದ ಮಾತಿಗಂತಃ |
ಕರಣ ಸಂಚಲವಾಗಿ ರೋಷಾಂ |
ಕುರ ಮುಖದಿ ಪಲ್ಲವಿಸುತೆಂದಂ ನಸು ನಗುತ ನಾವು ||
ತಿರಿದು ತಂದುಂಬುವರು ನೀವೈ |
ಶ್ವರಿಯವುಳ್ಳವರೆಂದು ನಿಮ್ಮಯ |
ಪುರಕೆ ಬಂದೆವು ನೀವು ಕೊಡದಿನ್ನಾರು ಕೊಟ್ಟಪರು || ೫೬ ||

ತಿರುಕನಂ ಪೊಂದಿದ್ದ ಕಾರಣ |
ತಿರಿದು ಬದುಕಿದೆವಿಷ್ಟು ದಿನ ನೀ |
ದೊರೆಯಲಾ ನಿಮ್ಮೂರ ಸಾರಿದೆವಿನ್ನು ನಿಮ್ಮಿಂದೆ ||
ದೊರೆಗಳಾದಪೆವಯ್ಯ ನಿಮ್ಮೊಲು |
ಕರೆಕರೆದು ಕೊಟ್ಟಪೆವು ಬೇಡದ |
ವರಿಗೆ ಬಂಧನವಿಕ್ಕೆಯಾದರು ಮೇಲೆ ಕಟ್ಟಿಪೆವು || ೫೭ ||

ತಿರಿದು ತಂದುದನುಂಡು ಹೊಟ್ಟೆಯ |
ಹೊರೆವ ದಾರಿದ್ರ್ಯವನು ನೀವೇ |
ಕರುಣದಿಂ ರಕ್ಷಿಸುವೆನೆಂದರೆ ಬೇಡವೆನಬಹುದೇ ||
ಹರ ಹರಾ ಬೇಡಿದರಿಗೀವುದ |
ದರಿದು ನಿಮ್ಮೊಲು ಬೇಡದಿರ್ದರು |
ಕರೆದು ಕೊಟ್ಟಪೆನೆಂಬ ದಾನಿಗಳುಂಟೆ ಧರೆಯೊಳಗೆ || ೫೮ ||

ಎಲ್ಲರಂ ಕರೆಕರೆದು ನೀವತಿ |
ನೆಲ್ಲನೇ ಕೊಟ್ಟಪಿರಿ ನಮ್ಮೂ |
ರಲ್ಲಿಯೊಕ್ಕಲಿಗರು ಕೃಷಿಯನುಂ ಮಾಡಿ ಬೆಳೆಬೆಳೆದು ||
ನೆಲ್ಲು ಗೋದಿ ಸಮಸ್ತ ಧಾನ್ಯವ |
[1]ಚೆಲ್ಲುವರು ಬೇಡಿದವರಿಗೆಯವ |
ರಲ್ಲಿ[1] ನಿಮ್ಮೊಲು ಬೇಡದವರಿಗೆ ಕೊಡುವ ಗುಣವಿಲ್ಲ || ೫೯ ||

ಹುಚ್ಚರಯ್ಯಾ ನಾವು ಪಡೆದೆವು |
ಕಿಚ್ಚುಗಣ್ಣನು ರಾಮನಾಥನ |
ಮೆಚ್ಚಿಸಿಯೆ ನೀ ಪಡೆದೆಯೆಲ್ಲಾ ಪ್ರೌಢತನದಿಂದೆ ||
ನಿಚ್ಚನಿಚ್ಚಂ ಬಳಸಿದರೆ ಮಿಗೆ |
ಹೆಚ್ಚುತಿಹ ತವನಿಧಿಯ ಬತ್ತವ |
ನಚ್ಚರಿಯ ಕಾಣಿಸಿದೆ ನಿನ್ನೊಲು ಜಾಣರಾರೆಂದ || ೬೦ ||

ಮೃಡನ ಮಚ್ಚಿಸಿ ನೀನು ಬತ್ತವ |
ಪಡೆದುದನು ಜಗವೆಲ್ಲ ಬಲ್ಲುದು |
ಕೊಡುವ ಗುಣವನು ರಾಮನಾಥನು ಕೊಟ್ಟಪನೆ ಹೇಳಾ ||
ಒಡಲಧರ್ಮದಿ ನಿಮ್ಮ ನಿವೇ |
ಪಡೆದಿರೋ ನಮಗರಿಯಬಾರದು |
ಪಡೆದ ವಿವರವ ಚಿತ್ತವಿಸಬೇಕೆಂದು ಕೈಮುಗಿದ || ೬೧ ||

ಬಂದವರ ಸಂತಯಿಸಿ[2] ನೀ ದಯ |
ದಿಂದ ಬತ್ತವ ನಮಗೆ ಕೊಟ್ಟಪೆ |
ನೆಂಬ ವಾಕ್ಯಮೆ ಕೊಟ್ಟುದಲ್ಲದೆ ಬೇರೆ ಕೊಡಬೇಕೇ ||
ಬಂದುದಾಗಳೆ ನಿಮ್ಮ ತವನಿಧಿ |
ಯಿಂದೆಮಗೆ ಸೈದಾನವೆನುತಂ |
ವಂದಿಸಿಯೆ ಬೀಳ್ಕೊಟ್ಟ ದೇವರದಾಸಿಮಯ್ಯಗಳ || ೬೨ ||

ನೆನೆದ ಕಾರ್ಯಂ ಸಿದ್ಧಿಸಲಿ ಯೌ |
ವನಮುದಾಗಲಿ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿ ಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನ ಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೬೩ ||

**ಅಂತು ಸಂಧಿ ೬ಕ್ಕಂ ಪದ ೪೨೦ಕ್ಕಂ ಮಂಗಳಂ**

---

೧-೧ ಬಲ್ಲವರು ಬೇಡಿದರೆ ಕೊಡುವರು । ಅಲ್ಲಿ (ಇ.) ೨ ಸತ್ಕರಿಸಿ (ಇ, ಉ.)

## ೭ನೆಯ ಸಂಧಿ

# ವಕ್ತ್ರಪಾದಮುನಿಯು ಶಂಕರದಾಸಿಮಯ್ಯನ ಮಹತ್ವವನ್ನು ವಿವರಿಸಿದ್ದು

**ಸೂಚನೆ**

ಕರುಣಿ ಶಂಕರದಾಸಿಮಯ್ಯಂ |
ಧರೆಯೊಳವತರಿಸಿದ ಮಹತ್ವವ |
ನೊರೆದ ದೇವರದಾಸಿಮಯ್ಯಗೆ ವಕ್ತ್ರಪಾದಮುನಿ ||

ನರಹರಿಯ ಶಿರವಾಂತ ವ್ಯಾಘ್ರಾ |
ಸುರನ ಚರ್ಮವನುಟ್ಟ ತ್ರಿಪುರಾ |
ಸುರನ ಕಾಲನ ಸುಟ್ಟ ನವಬ್ರಹ್ಮರ ಶಿರವ ತೊಟ್ಟ ||
ಸ್ಮರವಿಭೂತಿಯನಿಟ್ಟ ನಾಗಾ |
ಸುರನ ತೊವಲಂ ಪೊದೆದ ವಾಣೀ |
ವರನ ಮಸ್ತಕವಿಡಿದ ಶಂಕರ ರಕ್ಷಿಸುಗೆ ನಮ್ಮಂ || ೧ ||

ಶರಣನಾಡಿದ ವ್ಯಂಗ್ಯಗಳನಾ |
ದರಿಸಿ ಮನದೊಳು ನಾಚಿ ಯೋಗ್ಯರ |
ಪರಿಯನರಿಯದೆ ನುಡಿದೆನಲ್ಲಾ ಎಂದು ಚಿಂತಿಸುತ ||
ಶಿರವೆರಗಿ ನಡೆತಂದ ನಿಜಮಂ |
ದಿರಕೆ ದೇವರದಾಸಿ ರಾಮೇ |
ಶ್ವರನೆ ಬಲ್ಲನೆನುತ್ತೆ ನಿಲ್ಲುತ ತಲೆಯ ದೂಗಿಸುತ || ೨ ||

ಪಾಡಳಿದುವೈತಪ್ಪ ಕಾಂತನ |
ನೋಡಿ ಜಗ್ಗನೆ ಜರಿದು ತನುವ |
ಲ್ಲಾಡುತಂ ದುಗ್ಗಳೆ ಪತಿಯ ದಿವ್ಯಾಂಘ್ರಿಗಳ ತೊಳೆದು ||
ಗಾಢದಿಂ ಗದ್ದುಗೆಯನಿಡೆ ಮುಖ |
ಬಾಡಿ ಸುಯ್ದುವ್ರತ ಮೂರ್ತಿಗೊಂಡತಿ |
ಹೇಡಿಗೊಂಡರಸನ ವಿಚಾರಂಗೈದಳಾ ಲಲನೆ || ೩ ||

ಆದುದೇತಕೆ ದುಗುಡ ಮಿಥ್ಯಾ |
ವಾದಿಗಳು ದೂಷಿಸಿದರೋ ಮಿಗೆ |
ಪೋದುದಿಲ್ಲವೊ ರಾಮನಾಥನ ಗುಡಿಗೆ ಶರಣದೊಳು ||
ವಾದಿಸಿದಿರೋ ನಿಮಗೆ ನಿಗ್ರಹ |
ಮಾದುದೋ ಪರರಂ ಜರೆದಿರೋ |
ಹೋದುದೋ ಸನ್ಮಾನ ರಾಜದ್ವಾರಕ್ಕೈದಿದಿರೋ || ೪ ||

ವ್ರತವಿಹೀನರ ಮನೆಗೆ ಪೋದಿರೊ |
ಪತಿತರಂ ನುಡಿಸಿದಿರೊ ವೆಗ್ಗಳ |
ವ್ರತಿಗಳಂ ತಪ್ಪೆಂದಿರೋ ಸಲ್ಲದುದ ಗ್ರಹಿಸಿದಿರೋ ||
ಹಿತರ ಹಿಂಗಿದಿರೋ ವಿವೇಕೋ |
ನ್ನತಿಯ ಮರೆದಿರೊ ದೂಷ್ಯಮಾರ್ಗದಿ |
ಗತಿಸಿದಿರೊ ಪ್ರಾಣಗಳ ಕೊಲುವುದ ನಿಂದು ನೋಡಿದಿರೋ || ೫ ||

ಬೇಡಿದರಿಗಿಲ್ಲೆಂದಿರೋ ಮಾ |
ತಾಡಿ ತಪ್ಪಿದಿರೋ ಪರರಿಗತಿ |
ಕೇಡನೆಣಿಸಿದಿರೋ ಭವಿತ್ವರಿಗರಿಯದೆರಗಿದಿರೋ ||
ಬೇಡಿ ಭಂಗಿತರಾದಿರೋ ನೀಂ[೧] |
ಕಾಡಿದಿರೊ ಮಾನ್ಯರ ಪರಾಂಗನೆ |
ನೋಡಿದಿರೊ ಮನವೆಳಸಿ ದುರ್ಜನಸಂಗ ನಿಮಗಾಯ್ತೋ || ೬ ||

ಮೃಡನ ಜಪವಂ ಮಾಡುತಿರ್ಪರ |
ನುಡಿಸಿದಿರೊ ಪರದೈವಶೇಷವ |
ಪಿಡಿದಿರೋ ಜಂಗಮಗಳೊಳು ನೆರೆ ರೂಪನೆಣ[೨]ಸಿದಿರೋ ||
ಮೃಡಶರಣರೊಲಿದಿತ್ತ ಭಸಿತವ |
ಪಿಡಿಯದಾದಿರೊ ಶ್ರೀವಿಭೂತಿಯ |
ಹಿಡಿದು ತಪ್ಪಿದಿರೋ ಪರಾರ್ಥಕೆ ಮನವನಿಕ್ಕಿದಿರೋ || ೭ ||

ಹಾದಿಯಂ ತೋರೆನಲು ತೋರಿಸ |
ದಾದಿರೋ ಕೇಳುವೆಯೊಳನ್ಯತವ |
ಬೋಧಿಸಿದಿರೋ ಸಹಜ ಸದ್ಗುರುಲಿಂಗಜಂಗಮದಿ ||
ಭೇದಮಂ ಮಾಡಿದಿರೊ ಜಂಗಮ |
ಪಾದ ತೀರ್ಥವನೊಸರಿಸಿದಿರೊ ಪ್ರ |
ಸಾದದೊಳಗತಿರುಚಿಯನರಸಿಯೆ ಸಲಿಸದುಳಿದಪಿರೋ || ೮ ||

---

೧ ಮಿಗೆ (ಇ, ಉ.) ೨ ನರ (ಇ, ಉ.)

ಎರಗದಾದಿರೊ ಶಿವಶರಣರಿಗೆ |
ತರಿದಿರೋ ನೆಳಲಾರವೆಯ ಬೇ |
ಸರಿಕೆಯಾದುದೊ ಮಾಟಕೂಟದಿ ಗುರುವಿನೊಳು ಗುಣವ ||
ನರಸಿದಿರೊ ಸದ್ಭಕ್ತರುಚಿತವ |
ನರಿಯದಾದಿರೊ ಶರಣು ಮಾಡಲು |
ಮರಳಿ ಶರಣೆನದಿರ್ದಿರೋ ಭವಿಸಂಗ ನಿಮಗಾಯ್ತೋ || ೯ ||

ಶರಣರಿತ್ತಾ ಭಸಿತವೊಂದೇ |
ಕರದೊಳಾಂತಿರೊ ಮಿಗಿಲು ಭಾಳದಿ |
ಧರಿಸಿದಿರೊ ಸೂಸಿದಿರೊ ಲಿಂಗವ ಕೆಡಹಿದರ ಮಠಕೆ ||
ಕರೆದಿರೋ ರುದ್ರಾಕ್ಷಿಗಳ |
ನವಧರಿಸುವಾಗಲು ಮಣಿಯೊರಸಿ ಕೇ |
ಸರಗಳುದುರಿದುವೋ ಇದೇತಕೆ ದುಗುಡವೆಲೆ ರಮಣ || ೧೦ ||

ಹಲವು ಲಿಂಗದೊಳೊಳ್ಳಿತಾದವ |
ಕೆಲವನಾಯ್ದಿರೊ ಶಿವಶರಣರೊಳು |
ಕುಲವನಾರೋಪಿಸಿದಿರೋ ಗುರುಭಕ್ತರೊಡೆಯರೊಳು ||
ಚಲಕೆ ಹೋರಿದಿರೋ ವಿವೇಕವು |
ಚಲನವಾದುದೊ ಬಿನುಗು ದೈವವ |
ನೊಲಿದು ನೋಡಿದಿರೋ ಎನುತ ಕೇಳಿದಳು ದುಗ್ಗಳೆಯು || ೧೧ ||

ಪಂಚವರ್ಣದ ಜಪವ ಮಾಡುತ |
ಸಂಚಲಾತ್ಮಕರಾದಿರೋ ಧನ |
ವಂಚನೆಯ ಜಂಗಮದೆಡೆಗೆ ಮಾಡಿದಿರೊ ಘನ ಕಿರಿದು ||
ಪಂಚಮುದ್ರಾಂಕಿತರನೆಂದಿರೊ |
ಹಿಂಚಿದಿರೊ ಶಿವಸಂಭ್ರಮುಕ್ಕತಿ |
ಮುಂಚಿದಿರೊ ಶಿವಭಕ್ತರಾಡುವ ವಾಕ್ಯಗಳ ಮೀರಿ || ೧೨ ||

ಜಪವ ಮಾಡುತ ನುಡಿದಿರೋ ತ |
ಜ್ಜಪಸರಂ ಕೈಯಿಂದ ಬಿದ್ದುದೊ |
ಜಪಸರದಿ ಮೇರುವಿಗೆ ಬಾರದೆಯರ್ಧಮಣಿಯೊಳಗೆ ||
ಜಪವ ಬಿಟ್ಟರೊ ಬೇಗ ಬೇಗದಿ |
ಜಪಸರದ ಮಣಿಗಳ ತಿರುಪಿದಿರೊ |
ಜಪದ ಸಂಖ್ಯೆಯ ಮರೆದು ಬಿಟ್ಟರೊ ದಂದುಗಕ್ಕೆಳಸಿ || ೧೩ ||

ಶಿವಶರಣರೊಳು ನೀವಹಂಕಾ |
ರವನು ಮಾಡಿದಿರೋ ಸುಲಿಂಗವ |
ಧರಿಸುವಾಗ ಪರಾಕುವಾದುದೊ ತೆಂಕವುುಖವಾಗಿ ||
ಶಿವನ ಪೂಜೆಯ ಮಾಡಿದಿರೊ ಇಂ |
ತವಿಚರಂಗಳನಾಗದಿ[೧]ರ್ದೊಡೆ |
ತವನಿಧಿಯ ಸುಯಿದಾನ ಬರುವುದೆ ನೀವು ಚಿಂತಿಪರೆ || ೧೪ ||

ಹೋದುದೇ ತವನಿಧಿಯಕಟ ಇಂ |
ತಾದುದೇ ಶಿವ ಶಿವ ಮಹಾತ್ಮರ |
ಭೇದವರಿಯದೆ ನುಡಿದ ಫಲ ಸಿದ್ಧಿಸಿತೆ ತನಗೆನುತ ||
ಆದಯಾಂಬುಧಿ ಮರುಗೆ ಸತಿಯೇ |
ನಾದುದೆಂದೊರೆದೊರೆದು ಕೇಳ |
ಲ್ಕಾದ ವಿವರವನರುಪಲೊಡನಿಂತೆಂದಳಾ ಲಲನೆ || ೧೫ ||

ಕೆಟ್ಟಿವಲ್ಲಾ ಸಕಲದೈವಘ |
ರಟ್ಟ ಶಂಕರದಾಸಿಯೊಳು ನೀವ್ |
ದಿಟ್ಟತನದಿಂದಾಡಿದುದರಿಂ ಬತ್ತ ಬಯಲಾಯ್ತು ||
ಮುಟ್ಟಬಾರದ ಕಿಚ್ಚ ನುಂಗಲು |
ಹೊಟ್ಟೆ ಬೇಯದೆ ಮಾಣ್ಬುದೇ ಇದ |
ದಿಟ್ಟಗಿಡಿಯಂ[೨] ಬಲ್ಲನೆನುತಲಿ ಮರುಗಿದಳು ರಮಣಿ || ೧೬ ||

ಬಾಯ ಹವಣಿಗೆ ತುತ್ತ ನುಂಗದೆ |
ಸಾಯಸಕ್ಕೊಳಗಾದೆವಲ್ಲಾ |
ಕಾಯಜಾಂತಕ ರಾಮನಾಥನೆ ಬಲ್ಲನಿದಕನುವ ||
ದಾಯವಾವುದು ಪೇಳಿ ಖಂಡಿತ |
ಕಾಯಕದ ವ್ರತಿಗಳಿಗೆ ಬತ್ತವ |
ನೀಯಬೇಕೆಂದಾಡುವುದು ಸನ್ಮತವೆ ನಿಮಗರಸಾ || ೧೭ ||

ಉಡುಪತಿಗೆ ಶೈತ್ಯೋಪಚಾರವ |
ಕೊಡುವೆ[೩]ನೆಂಬಿರಿ ಮರುಳನೊಲು ಪಾ |
ಲ್ಗಡಲೊಳದ್ದನ ಸುಧೆಯ ಬೆರಸುವೆನೆಂಬ ಗಾಂಪನೊಲು ||
ಪಿಡಿಕೆಯಶನವುನನ್ನಪೂರ್ಣಗೆ |
ಕೊಡುವೆನೆಂಬ ವಿಕಾರಿಯಂದದಿ |
ಮೃಡನ ಭಕ್ತರಿಗೀವೆನೆಂಬುದು ನಿಮಗೆಯಿದು ಗುಣವೇ || ೧೮ ||

---

೧ ಮಾಡ (ಉ.) ೨ ಸೃಷ್ಟಿಗೊಡೆಯನೆ (ಉ.) ೩ ನೊಡರ್ವೆ (ಇ, ಉ, ಎ.)

ಬೇಡಿದವರಿಗೆ ಕೊಡುವ ಗುಣಮದು |
ರೂಢಿಯೊಳಗುಂಟಾದುದೇನುವ |
ಬೇಡದವರಿಗೆ ಕೊಡುವ ಗುಣ ಕೆಡಿಸುವುದಿದೇ ಸಾಕ್ಷಿ ||
ಬೇಡಿ ಬಳಲು[೧]ವ ಯಾಚಕರುಗಳಿ |
ಗಾಡಬಾರದು ಪಾಪ ಶರಣರು |
ಬೇಡಿ ಕಾಯುವ ಹೊರೆಯರೆಂಬುದನರಿಯಿರೇ ನೀವು || ೧೯ ||

ಬೇಡುವರ ಕಂಡಂಜಿ ಮಾನವ |
ರೋಡುತಿಹರವರಂ ವಿಚಾರಿಸಿ |
ನೋಡರಾರೂ ಕೂಳುಗಾಣದ ಪೇತರುಗಳಂತೆ ||
ಕಾಡುವರು ಕಂಡವರ ಮೋಕ್ಷದ |
ಬೀಡವಂದಿರಿಗಿಲ್ಲ ದೋಷ |
ಕ್ಕೀಡಹರು ರವಿಚಂದ್ರರುಳ್ಳನ್ನಬರ ಕೇಳರಸಾ || ೨೦ ||

ದೂರ್ವೆಯಿಂ ಕಡೆಗಾದ ವಸ್ತುಗ |
ಳುರ್ವಿಯೊಳಗಿಲ್ಲೆಂಬರೆಲ್ಲರು |
ದೂರ್ವೆ ಮಂತ್ರಾಕ್ಷತೆಗೆ ಯೋಗ್ಯಂ ಮಂತ್ರಕಿದು ಮುಖ್ಯಂ ||
ದೂರ್ವೆ ಗೋರಕ್ಷೆಗೆ ನಿಮಿತ್ತಂ |
ದೂರ್ವೆ ಭೀಕರಕಾಯ್ವು[೧] ಮೂಲಿಕೆ |
ದೂರ್ವೆಯಿಂ ಕಡೆ ಬೇಡಿ ಬಾಳುವ ಮನುಜನೆಲೆ ರಮಣಾ || ೨೧ ||

ಜಗದೊಳಗೆ ಲಘು ಕಾಷ್ಠಮುದರಿಂ |
ಲಘು ತೃಣಂ ತೃಣದಿಂದ ಲಘು ನೆರೆ |
ಲಘು ಶಿರೋಜ ಶಿರೋಜದಿಂ ಲಘು ಬೂರುಗದರಿಂದೆ ||
ಲಘುವೆನಿಸುವುದು ರೇಣುವದರಿಂ |
ಲಘುವೆನಿಪುದಣುವಣುವಿನಿಂದತಿ |
ಲಘುತರಂ ಯಾಚಕರು ಲೋಕದೊಳೆಂಬುದರಿದರಿದು || ೨೨ ||

ಬೇಡುವರೆ ಶಿವಪೂಜಕರು ನಾ |
ಡಾಡಿ ಮಾನವರೋ ಅವರೊಳಿಂ |
ತಾಡಬಹುದೇ ಅವರಿಗಿಂ ಸಿರಿಯುಳ್ಳವರೆ ನೀವು ||
ರೂಢಿಸುವ ಮೋಕ್ಷವನು ದೇವರ |
ಬೇಡಿಕೊಳ್ಳದೆ ನಾಲ್ಕು ನೆಲ್ಲನು |
ಬೇಡಿಕೊಂಡರಿಗೇಕೆ ಮಾಹೇಶ್ವರರೊಳಗೆ ಹಮ್ಮು || ೨೩ ||

---

೧ ಬಾಳು (ಇ, ಉ.) ೨ ಯ (ಉ.)

ಮೃಡನ ಸಾಲೋಕ್ಯವನು ಪಡೆದಿರೊ |
ಮೃಡನ ಸಾಮಿಪ್ಯವನು ಪಡೆದಿರೊ |
ಮೃಡನ ಸಾರೋಪ್ಯವನು ಪಡೆದಿರೊ ಮೃಡನ ಸಾಯುಜ್ಯ ||
ಪಡೆದಿರೋ ನಾಲ್ಕಾಳು ನೆಲ್ಲನು |
ಪಡೆದವರ್ಗಿದೆ ಶಿವಶರಣರೊಳು |
ನುಡಿಯ ಬಹುದೇ ಪೌರುಷದ ಮಾತುಗಳ ನೀವರಸಾ || ೨೪ ||

ವಾಸವನ ಸೌಭಾಗ್ಯಮಂ ದೂ |
ರ್ವಾಸ ಸೆಳೆದೊಲಗಸ್ತ್ಯ ಶರಧಿಯ |
ಪೋಶನಂಗೊಂಡಂತೆ ವಿಶ್ವಾಮಿತ್ರ ಮುನಿರಾಯ ||
ದೇಶಪತಿ ಹರಿಶ್ಚಂದ್ರರಾಯನ |
ಭಾಷೆಯಂ ತೆಗೆದಂತೆ ಶಂಕರ |
ದಾಸಿಮಯ್ಯಂ ತೆಗೆದ ತಪ್ಪದು ನಮ್ಮ ತವನಿಧಿಯ || ೨೫ ||

ಎಂದು ದುಗ್ಗಳೆ ಪತಿಯಿದಿರಿನೊಳ್ |
ನಿಂದು ಪೇಳುತ್ತಿಹ ಸಮಯದೊಳ್ |
ಮಂದಿರದ ಸನ್ನಿಧಿಯ ಸರಿಸಕೆ ವಕ್ತ್ರಪಾದಮುನಿ ||
ಬಂದು ಧಾನ್ಯವ ಬೇಳ್ಪುದಂ ಕೇ |
ಳ್ದಂದು ತನ್ನಯ ಸತಿಸಹಿತ ಭರ |
ದಿಂದಲಾತನ ಬಳಿಗೆ ದೇವರದಾಸಿಮಯ್ಯಗಳು || ೨೬ ||

ಪೋಗುತಾತನ ಪಾದಕಾನತ |
ರಾಗಿ ದಂಪತಿಯುರು ಶಿರಂಗಳ |
ಬಾಗಿ ನಿಂದಿರಲೊಡನೆ ವಂದಿಸಿ ವಕ್ತ್ರಪಾದಮುನಿ ||
ರಾಗ ಮಿಗೆ ಮನ್ಮಾತೆ ಪಿತರುಗ |
ಳೀಗಲಿಲ್ಲಿಗೆ ಬಂದಿರೇಕೆನ |
ಲಾಗ ಬಿನ್ನೈಸಿದರು ಕೈಮುಗಿದಾದ ಕಾರಣವ || ೨೭ ||

ಅವರ ವಾಕ್ಯವ ಕೇಳಿ ಮರುಗುತ |
ಕಿವಿಗಳಂ ಮಿಗೆ ಮುಚ್ಚಿಕೊಳುತಂ |
ಶಿವ ಶಿವಾ ಭಕ್ತಾಗ್ರಗಣ್ಯರು ನೀವು ನಿಮಗಿಂತು ||
ವಿವರವಲ್ಲದ ಮಾತು ಸಲುವುದೆ |
ಅವರೊಳೇಕಿಂತಾಡಿದಿರಿಯೆಂ |
ದವಿಳರಾತ್ಮಕ ವಕ್ತ್ರಪಾದಮುನೀಂದ್ರನಿಂತೆಂದ || ೨೮ ||

ಹಿಮಕರಂಗೆ ಕಲಂಕ ರುದ್ರಗೆ |
ತಮ ಸುರೇಂದ್ರಗೆ ಕೋಷ್ಠ ಪರ್ವತ |
ರಮಣಗತಿಶೈತ್ಯಂ ಸಮುದ್ರಗೆ ಕ್ಷಾರವಾದಂತೆ ||
ನಿಮಗಹಂಕಾರಂ ದೊರೆದುದಾ |
ಭ್ರಮೆಯನುಳಿದೊಡೆ ನಿಮ್ಮ ಮಾರ್ಗಕೆ |
ಸಮವೆ ಬಿಡಿರಯ್ಯಾ ಮಹೇಶ್ವರರೊಡನೆ ಹಮ್ಮಿಕೆಯ || ೨೯ ||

ಹಮ್ಮಿನಿಂದಂ ಭವಕೆ ಬಪ್ಪರು |
ಹಮ್ಮಿನಿಂದಂ ಪಾಪಕಿಳಿವರು |
ಹಮ್ಮಿನಿಂದಂ ಮೋಕ್ಷಮಾರ್ಗದ ಹೊಲಬ ದಪ್ಪುವರು ||
ಹಮ್ಮಿನಿಂದಂ ಶೂನ್ಯಮಪ್ಪರು |
ಹಮ್ಮಿನಿಂದಂ ಕೆಟ್ಟು ಪೋಪರು |
ಹಮ್ಮ ಬಿಡಿ ಬಿಡಿ ನಿಮಗೆ ಸಲ್ಲದು ಶರಣಜನತಿಲಕಾ || ೩೦ ||

ಹಮ್ಮಿನಿಂ ಹರಿ ಭವಕೆ ಬಂದಂ |
ಹಮ್ಮಿನಿಂದಜ ಶಿರವ ನೀಗಿದ |
ಹಮ್ಮಿನಿಂ ಸುರರಾಜ ಭೋಷವ ಹೋಗಲಾಡಿದನು ||
ಹಮ್ಮಿನಿಂ ದಕ್ಷಾಧ್ವ ಕೆಟ್ಟುದು |
ಹಮ್ಮಿನಿಂ ಹತವಾದರಸುರರು |
ಹಮ್ಮು ನಿಮಗೇಕಯ್ಯ ಬಿಡಿ ಬಿಡಿ ಬೇಡ ಯೋಗ್ಯರೊಳು || ೩೧ ||

ಹಮ್ಮಿನಿಂ ಫಣಿಯಾದ ನಹುಷನು |
ಹಮ್ಮಿನಿಂ ಪಶುವಾದರಮರರು |
ಹಮ್ಮಿನಿಂದ ನೃಸಿಂಹನಳಿದಂ ಲೋಕವರಿವಂತೆ ||
ಹಮ್ಮು ಸಲ್ಲದು ಯೋಗ್ಯರೊಳು ಸಿರ |
ಹಮ್ಮತೆಯೊಳಿರಬೇಕು ಯೋಗ್ಯರು |
ನಿಮ್ಮ ಸನ್ಮಾನಕ್ಕಿದೊಂದೇ ಕೊರತೆ ಎಲೆ ದೇವಾ || ೩೨ ||

ಒಳ್ಳಿತಾದ ಪದಾರ್ಥಮಾದರು |
ಕೊಳ್ಳದವರಿಗೆ ಕೊಡಲುಬಾರದು |
ಸಲ್ಲಲಿತವಹ ಪಸುವುಗಳು ನೆರೆ ಮೇವುತಿರುವಂತಾ ||
ಹುಲ್ಲ ನೀರಂ ಪಸಿದ ವಿಪ್ರಗೆ |
ಮೆಲ್ಲಿಸಿಯೆ ಕುಡಿಸಿದರೆ ಪಾತಕ |
ವಲ್ಲವೇ ಅವರವರಿಗವನರಿದೀಯಬೇಕೆಂದ || ೩೩ ||

ಯತಿಗೆ ಕಾಂಚನಮಂ ವನಾಶ್ರಯ |
ಗತಿಶಯದ ಗೋಕ್ಷೀರಮಂ ಪು |
ಷ್ಪಿತೆಗೆ ವಿಧವೆಗೆ ಬ್ರಹ್ಮಚಾರಿಗೆ ಪರಮಹಂಸರಿಗೆ ||
ನುತ ವಿವಿಧ ತಾಂಬೂಲಮಂ ಸದ್ |
ವ್ರತದ ಖಂಡಿತ ಕಾಯಕರಿಗನು |
ಮತವದಲ್ಲವ ವಸ್ತುವಂ ಕೊಡೆ ಘೋರ ಪಾತಕವು || ೩೪ ||

ಪತಿವ್ರತಾಶೀಲದೊಳಗಿರುತಿಹ |
ಸತಿಗೆ ಜಾರನ ತಂದು ತೋರುವ |
ಕೃತಕಿ ಕುಂಟಣಿಗೆಷ್ಟು ಪಾತಕವಷ್ಟು ಪಾತಕವು ||
ವಿತತ ಖಂಡಿತ ಕಾಯಕಂಗಳ |
ವ್ರತಿಗಳಿಗೆ ಪಿಡಿದೀವರಿಗೆ ಸ |
ದ್ಗತಿಯಣುವಿನನಿತಿಲ್ಲ ಪಾತಕಕುಂಡವೇ ನಿತ್ಯಂ || ೩೫ ||

ಇಂತು ಪಾತಕವೆಂದು ತಿಳಿದಿ |
ರ್ದಂತು ಶರಣರ ಕೂಡೆ ಹಮ್ಮಿನ |
ಭ್ರಾಂತಿನಿಂದಾಡುವರೆ ಶಂಕರದಾಸಿಮಯ್ಯಗಳು ||
ಕಂತುಹರನವತಾರವಲ್ಲವೆ |
ಸಂತಸದ ನಿಧಿಯಲ್ಲವೇ ಅ |
ತ್ಯಂತ ಮಹಿಮನದಲ್ಲವೇ ಆತನೊಳು ಹಮ್ಮೇಕೆ || ೩೬ ||

ಗಿರಿಸುತೆಯ ಶಾಪದೊಳು ಪರ |
ಮೇಶ್ವರನು ಚಿಪ್ಪಿಗನಾಗಿ ಜನಿಸಿದ |
ನರರಿಗಿಂತು ಮಹತ್ವಮುಂಟೇ ಎನಲದಂ ಕೇಳಿ ||
ಕರುಣಿ ದೇವರದಾಸಿಮಯ್ಯಂ |
ಹರಗಪರ್ಣೆಯ ಶಾಪಮಾದುದ |
ನೊರೆಯಬೇಕೆಂದೆರಡು ಕೈಗಳ ಮುಗಿದನಾತಂಗೆ || ೩೭ ||

ಎನೆ ನಗುತಲಾ ವಕ್ತ್ರಪಾದಂ |
ಘನ ಮಹಾತ್ಮಗೆ ವಿಸ್ತರಿಸಿದಂ |
ಮನುಜ ಮಂದರಮಾದ ಶಂಕರದಾಸಿಯನ್ವಯಮಂ ||
ಮನಕೆ ಮಂಗಳಮಾದ ಕಿ[1]ವಿಗಳಿ |
ಗನಿರಸದ ಮಳೆಯಾದ ಸಜ್ಜನ |
ಜನಕೆ ಸಂತಸಮಾದ ಕಥೆಯಂ ಪೇಳ್ವೆನೆಂತೆನಲು || ೩೮ ||

---
೧ ಕ (ಉ.)

ಒಂದು ದಿನ ಕೈಲಾಸದೊಳು ಖಂ |
ಡೇಂದುಶೇಖರ ಸಕಲಮಣಿಮಯ |
ಮಂದಿರದೊಳೆಸೆದಿರ್ದ ಹರಿಯುಜರೆಡದ ಭಾಗದೊಳು ||
ಹಿಂದೆ ರುದ್ರಸಮೂಹ ಬ್ರಹ್ಮರ |
ಗೊಂದಣಂ ಬಲಗಡೆಗೆ ದೇವರ |
ಮುಂದೆ ವಾಸವನಿಕರಮಿರ್ದುದು ಮುಗಿದ ಹಸ್ತದೊಳು || ೩೯ ||

ಗರುಡ ಗಂಧರ್ವ ಪ್ರವಿದ್ಯಾ |
ಧರರು ಸಿದ್ಧರು ಯೋಗಿಗಳು ಕಿ |
ನ್ನರರು ಕಿಂಪುರುಷರು ಮಹಾಮುನಿ ಯಕ್ಷ ರಾಕ್ಷಸರು[೧] ||
ಸುರರು ದಾನವ ರವಿಶಶಿಗಳ |
ಶ್ವರರು ಯಕ್ಷರು ಗುಹ್ಯಕರು ತುಂ |
ಬುರರು ನಾರದರೆಡೆಯೊಳೆಸೆದಂ ಶಿವ ಸಗಾಢದೊಳು || ೪೦ ||

ಇಂತು ಸಂಭ್ರಮದೊಳು ವಿರಾಜಿಪ |
ಕಂತುಹರನೊಲವಿಂದೆ ತನ್ನಯ |
ಕಾಂತೆ ಗಿರಿಜೆಯು ಕೇಳಿದಂ ಕಮಲಾಕ್ಷಿ ನಿನ್ನ ಮನ ||
ಸಂತಸಕ್ಕನುಕೂಲಮಾಗಿಹ |
ಮಂತಣದ ಸತ್ಪ್ರೀತಿಯೇನೆನೆ |
ಕಾಂತನೊಳು ಬಿನ್ನೈಸಿದಳು ಕೈಮುಗಿದು ಶರ್ವಾಣಿ || ೪೧ ||

ಸ್ವಾಮಿ ಚಿತ್ತೈಸೆನ್ನ ಮನಸಿನ |
ಕಾಮಮಂ ವಂಚಿಸದೆ ಪೇಳುವೆ |
ಭೂಮಿಯೊಳಗೆಸೆದಿರ್ಪ ಪುಣ್ಯಕ್ಷೇತ್ರತೀರ್ಥಗಳ ||
ಹೇಮಗಿರಿಮುಖ ಪರ್ವತವನು |
ದ್ದಾಮ ಸಪ್ತ ದ್ವೀಪಗಳನಭಿ |
ರಾಮಗಳ ಸಪ್ತಾಬ್ಧಿಗಳ ನೆರೆ ನೋಡಬೇಕೆನಲು || ೪೨ ||

ಪುರಮಥನ ಪೊರಮಟ್ಟು ತೀವಿದ |
ಹರುಷದಿಂ ವಧುಸಹಿತ ನಂದೀ |
ಶ್ವರನ ಬೆನ್ನೊಳಗೈದೆ ಮುಂಡಿಸಿ ದೇವತತಿಗೂಡಿ ||
ಧರಣಿಗಾ ಕ್ಷಣದೊಳಗಿಳಿದು ಭೂ |
ಚರದಿ ಬಿಜಯಂಗೆಯ್ಯುತಂ ಶ್ರೀ |
ಕರ ಭವಾನಿಗೆ ತೋರಿಸಿದನೀ ಮರ್ತ್ಯದೇಳಿಗೆಯ || ೪೩ ||

---

೧ ಮನು ಮುನಿವಿಶಾರದರು (ಉ.)

ಇದು ಮಹಾಮೇರಿದು ಹಿಮಾಚಲ |
ಮಿದು ನಿಷಧಗಿರಿಯಸ್ತಪರ್ವತ |
ವಿದು ಮಹಾ ಮಲಯಾದ್ರಿಯಿದು ಕೇಳ್ ಮಾಲ್ಯವಾನ್ ಶೈಲ ||
ಉದಯನಗವಿದು ವಿಂಧ್ಯಪರ್ವತ |
ವಿದು ಮಹಾಗೋವರ್ಧನಂ ಮೇ |
ಣಿದು ಲಲನೆ ಮಂದಾರಪರ್ವತ ನೋಡು ನೋಡೆಂದ || ೪೪ ||

ಚಾಪಲಾಂಬಿಕೆ ನೋಡು ಕುಷ್ಯ |
ದ್ವೀಪ ಮಿತ್ರದ್ವೀಪ ಜಂಬು |
ದ್ವೀಪಮಂ ಪ್ಲಕ್ಷಾಖ್ಯಮಂ ಕ್ರೌಂಚಾಖ್ಯ ಶಾಲ್ಮಲ್ಯ ||
ದ್ವೀಪಮಂ ಶ್ವೇತಾಖ್ಯ ಮಿರುಪ |
ದ್ವೀಪಮಂ ಕೇಳಿಂತು ಸ್ವಪ್ತ |
ದ್ವೀಪ ಭೂಮಿಯೊಳಿಹವು ಸಕಲಾಕಾರಪೂರಣದಿ || ೪೫ ||

ದಧಿ ಲವಣಮಿಕ್ಷುರಸಮಾಜ್ಯಂ |
ಮಧು ಸುಧಾ ಸ್ವಾದೋದಕಂ ತೀ |
ವಿದ ಗಭೀರದ ಸಪ್ತಸಾಗರಮಿವು ಸರೋಜಮುಖಿ ||
ಇದು ಜಗುನೆಯಿದು ಜಾನ್ಹವೀನದಿ |
ಇದು ಭಗೀರಥಿಯಿದು ಸರಸ್ವತಿ |
ಇದು ಯಮುನೆಯಿದು ಗಂಗೆ ಗೋದಾವರಿಯಿದೆಂದೊರೆದ || ೪೬ ||

ನೋಡು ವಲ್ಲಭೆ ಕೃಷ್ಣವೇಣಿಯ |
ನೋಡು ಫಲ್ಗುಣಿ ವಾರಣಾಸಿಯ |
ನೋಡು ಪಾಪವಿನಾಶಿಯಂ ಕಾವೇರಿ ಕಪಿಲೆಯನು ||
ನೋಡು ಭೀಮಾವತಿಯ ನೇತ್ರಿಯ |
ನೋಡು ನರ್ಮದೆ ತುಂಗಭದ್ರೆಯ |
ನೋಡೆನುತ ತೀರ್ಥಂಗಳಂ ತೋರಿಸಿದ ಗಿರಿಸುತೆಗೆ || ೪೭ ||

ಧಾತ್ರಿಯೊಳು ಮಿಗಿಲೆನಿಪ ಕಾಶೀ |
ಕ್ಷೇತ್ರ ಗಯೆ ಕುರುಭೂಮಿ ಪಂಪಾ |
ಕ್ಷೇತ್ರ ಸಾಲಿಗ್ರಾಮ ದಂಡಕ ಬದರಿಕಾರಣ್ಯಾ ||
ಕ್ಷೇತ್ರ ಭಾಸ್ಕರ ಕುಂಭಕೋಣ |
ಕ್ಷೇತ್ರ ರಾಮೇಶ್ವರ ಗಜಾರ |
ಣ್ಯತ್ರಯಂ ಶ್ರೀ ಪರ್ವತಾದಿ ಸ್ಥಳವ ತೋರಿಸಿದ || ೪೮ ||

ಮಹಿಯೊಳಿಹ ಸುಕ್ಷೇತ್ರ ತೀರ್ಥದ |
ಮಹಿಮೆಗಳ ವಿಸ್ತರಿಸಿ ದೇವಿಗೆ |
ಸಹಜದಿಂ ಪೇಳುತ್ತೆ ಮುಂದಕೆ ಬಪ್ಪ ಸಮಯದೊಳು ||
ಮಹದಡಂಬವೆನಿಪ್ಪ ನಗರದ |
ಗಹನದೊಳು ವ್ಯಭಿಚಾರದಿಂದಳಿ |
ದಿಹ ವಿಕಾರ ಸ್ತ್ರೀ ಪುರುಷರಂ ಕಂಡಳಗಜಾತೆ || ೪೯ ||

ಆರಿವರು ಪೇಳ್ ದೇವ ನಡೆತಹ |
ದಾರಿಯೊಳು ಬಿದ್ದಿರ್ದಪರದೇಂ |
ಕಾರಣಂ ದಂಪತಿಗಳಾಯುಧದಿಂದೆ ಹತವಾಗಿ ||
ಆರು ಕೊಂದರೊ ಶಿವ ಶಿವಾ ಎನೆ |
ಮಾರಹರ ನಸು ನಗುತ ಪೇಳ್ದಂ |
ಜಾರವಿಷಯದೊಳಳಿದವರನು ನಿರೀಕ್ಷಿಸದಿರೆಂದ || ೫೦ ||

ಮಾನನಿಧಿ ಪೇಳವರ ನೋಡಿದೊ |
ಡೇನಹುದು ಜಾರತ್ವಮೆಂಬುದ |
ದೇನು ಜಾರತ್ವದೊಳು ಸತ್ತರದೆಂಬ ನುಡಿಯೇನು ||
ನಾನರಿಯೆ ವಿಸ್ತರಿಸಿ ಪೇಳೆನ |
ಲಾ ನಗಾತ್ಮಜೆಯೊಡನೆ ಪೇಳ್ದಂ |
ಮೀನಕೇತನಮರ್ದನಂ ಕೇಳೆಲೆ ಶರಣತಿಲಕಾ || ೫೧ ||

ಆಡಬಾರದು ಪಾಪಯಿವರಂ |
ನೋಡಿದವರಿಗೆಯಿವರ ಸ್ಮರಣೆಯ |
ಮಾಡಿದವರಿಗೆ ಪುಣ್ಯಮಿಲ್ಲಗಜಾತೆ ನೀನಲ್ಲಿ[೧] ||
ನೋಡಬೇಡವರಾರು ಪೇಳೆನ |
ಬೇಡ ದುರ್ವರ್ತಕದಿ ಹಾದರ |
ವಾಡಿ ಸತ್ತರ ಕೊಂಡು ಕಾರಣವೇಕೆ ನಿನಗೆಂದ || ೫೨ ||

ಪಶುವ ಕೊಂದವನಿಂದೆ ಮೃಗಗಳ |
ನೆಸುವನಿಂದತಿ ಪರರನುಂ ದೂ |
ಷಿಸುವನಿಂದಂ ತಪ್ಪುದಾರಿಯ ತೋರಿಸುವನಿಂದಂ ||
ಪುಸಿಗನಿಂದಂ ಕ್ರೂರನಿಂದಂ |
ಪಿಸುಣರಿಂದತಿ ಪಾಪರೂಪರೆ |
ನಿಸುವರನ್ಯ ಸ್ತ್ರೀಪುರುಷವರ್ತಕರು ಲಲಿತಾಂಗೀ || ೫೩ ||

---

೧ ನಿನ್ನಾಣೆ (ಇ, ಉ.)

ಧವನ ದೂಷಿಪ ಲಲನೆ ಗುರುವಾ |
ಕ್ಯವನು ಮಿಾರುವ ಶಿಷ್ಯನಣ್ಣನ |
ಹವಣನರಿಯದ ತಮ್ಮ ತಂದೆಯ ಮಾತು ಕೇಳದಿಹ ||
ಕುವರನೊಡೆಯಗೆ ದ್ರೋಹಗಳನೆಣಿ |
ಸುವ ಕುಬುದ್ಧಿಯ ದಾಸಿ ದಾಸರ |
ಭವಗಳಿಂದಂ ಘೋರಪಾತಕವಿವರ ನೋಡಿದರೆ || ೫೪ ||

ಸೂಳೆ ಜೋತಿಷಿ ನೃಪತಿಗೆಣಿಕೆಯ |
ಹೇಳುವ ವ್ಯವಹಾರಿ ಕುಂಬರ |
ಗೋಳಕಂ ಚಿತ್ರಕನು ಗಾಣಿಗ ಗಣಕ ದ್ಯೂತಜ್ಞ ||
ಕೇಳು ವಲ್ಲಭೆ ವೈದ್ಯನೆಂಜಲ |
ಗೂಳನುಂಡವ ಪೆಸರನಿಟ್ಟವ |
ರಾಳುತಿಹ ನರಕಂಗಳಿಂದತಿ ನರಕ ಜಾರರಿಗೆ || ೫೫ ||

ತಂದೆಯಂ ಸಲಹದನ ತಾಯಿಗೆ |
ವಂದಿಸದವನ ಬರಿದೆ ಸಾಕ್ಷಿಯ |
ಬಂದವನ ಕೃತ್ರಿಮವನನ್ನದೊಳಿಕ್ಕಿ ಕೊಲುವವನ ||
ಬಂಧುಗಳಿಗಲ್ಲದನ ಪರರಿಗೆ |
ಬಂಧನವ ಮಾಡುವನ ಪಾತಕ |
ದಿಂದಧಿಕ ಪಾತಕಮಿವರನೀಕ್ಷಿಸದಿರೆಲೆ ಗಿರಿಜೆ || ೫೬ ||

ಎನೆ ನಗುತ ದೇವಂಗೆ ಪರ್ವತ |
ತನುಜೆ ಬಿನ್ನಹ ಮಾಡಿದಳು ಕೇಳ್ |
ನಿನಗಿದರ ಸಂಕಲ್ಪವೇತಕೆ ಪಾಪಪುಣ್ಯಗಳು ||
ಮನಸು ಕಾಮ್ಯಾದಿ ಲೀಯವಾಗಿಹ |
ಮನುಜತತಿಗಲ್ಲದೆ ಮಹಾತ್ಮಕ |
ನಿನಗೊಳವೆ ನಿನ್ನರಸಿಯಾದುದರಿಂದೆ ನನಗೊಳವೇ || ೫೭ ||

ದೇವ ಕೇಳಿನದರ್ಶನದಿ ತಮ |
ಪಾವಕನ ದರ್ಶನದಿ ಹಿಮ ಮಿ |
ತ್ರಾವಳಿಯ ದರ್ಶನದಿ ದುಃಖಂ ನಿಮ್ಮ ದರ್ಶನದಿ ||
ಆವ ಪಾತಕವಾದರೆಯು ಬಂ |
ದಾವರಿಸವೆಂದುಂಟು ವೇದಂ |
ದೇವ ನಾಂ ಪಾಪಕ್ಕಳುಕೆ ಕೇಳೆಂದಳಗಜಾತೆ || ೫೮ ||

ತೂಳವೇತಕೆ ರಮಣಿ ನಿನಗದ |
ಕೇಳಿದಲ್ಲದೆಯಶನವಿಳಿಯದೆ |
ನಾಳೆ ನಿನಗರುಪುವೆನು ಸುಮ್ಮನಿರೆನುತ ಸಂಭ್ರಮದಿ ||
ಭಾಳಲೋಚನ ಮುಂದಕೈದಿದ |
ಹೇಳಲಳವೇ ಸಕಲ ಗೀರ್ವಾ |
ಣಾಳಿ ಸಹಿತಲು ಬಂದ ಮಾಗಡವೆಂಬ ಕ್ಷೇತ್ರಕ್ಕೆ || ೫೯ ||

ಇದು ಮಹಾ ಪುಣ್ಯಾಶ್ರಯಂ ಕೇ |
ಳಿದ ನಿರೀಕ್ಷಿಸೆ ಪಾಪ ಪಿಂಗುವು |
ದಿದರೊಳಾಶ್ರಯಿಸಿರ್ದ ಮುನಿಗಳ ಲೆಕ್ಕಗೊಳಬಹುದೇ ||
ಇದರ ಮಹಿಮೆಗಿದೇ ಸಮಂ ನಾ |
ವಿದರೊಳಿರಬೇಕೆಂದು ದೇವಂ |
ಸುದತಿಗೊರೆದರಮನೆಯ ಮಾಡಿಸಿದಂ ವಿಲಾಸದೊಳು || ೬೦ ||

ಆ ಸುಮಂದಿರದೊಳಗೆ ತ್ರೈಜಗ |
ದೀಶ ಪರಮೇಶ್ವರನ ರಾಣೀ |
ವಾಸವೆನಿಸುವ ಮೇನಕಾತ್ಮಜೆ ಚಾರು ವೇಳೆಯೊಳು ||
ಆಶ್ರಯಿಸಿದಳು ಚಾರುವಿಭವ[1]ವಿ |
ಳಾಸಿನೀಜನಸಹಿತಲಾಗ ಮ |
ಹೇಶ ಗಿರಿಜಾದೇವಿಯೊಡನಿಂತೆಂದು ಪೇಳಿದನು || ೬೧ ||

ಪರಮ ಪುಣ್ಯ ಕ್ಷೇತ್ರವಾಸದಿ |
ಗಿರಿಜೆ ಕೇಳಾ ಪಂಚವಾಸರ |
ವಿರಲು ಬೇಕಲ್ಲದೊಡೆ ಫಲಮಿನಿತಿಲ್ಲ ನೀನಿಲ್ಲಿ ||
ಇರು ವಿಳಾಸಿನಿಯರು ಸಹಿತಲೀ |
ಸುರಸಹಿತ ಸಹವಾಗಿ ದೇಶಾಂ |
ತರವ ಮಾಡಿಯೆ ಬರ್ಪೆನೆಂದಾಯಕಳ ಬೀಳ್ಕೊಂಡ || ೬೨ ||

ಪೋದನೀಶ್ವರನಿತ್ತಲಾ ದಿನ |
ಪೋದುದಂ ಮರುದಿವಸದೊಳು ಕೇ |
ಳಾದುದಂ ವಿಸ್ತರಿಪೆ ದೇವರದಾಸಿಮಯ್ಯಗಳೀ ||
[2]ಆ ದಯಾಂಬುಧಿಯುಡುವ ನವ ವ |
ಸ್ತ್ರಾದಿಗಳನಿಲಿಯಿಂದ ಛಿದ್ರಿಸಿ |
ದಾದಿ ಪರಶಿವ ಶಿವೆಯ ಸೇವಕರರಿಯದಂದದೊಳು[2] || ೬೩ ||

---

೧ ವಿಭವದಿಂದೆ (ಉ.) ೨-೨ ಪೊದೆವ ದುಕುಲಾಂಬರಗಳಿಲ್ಲವ | ಸದನದೊಳು ಮಡಗಿರ್ದ ವಸ್ತ್ರವ|ವೊದಗಿ ಮೂಷಕ ಛಿದ್ರಗೈದುದನೇನ ಪೇಳುವೆನು || (ಇ.)

ಪಟ್ಟವಳಿಗಳು ಛಿದ್ರವಾದುದ |
ನಿಟ್ಟಿಸಿದಳೊರ್ವ ಸತಿ ದೇವನ |
ಪಟ್ಟದರಸಿಗೆ ತಂದು ತೋರಿಸೆ ಕೇಳಿ ಗಿರಿಜಾತೆ ||
ಕೆಟ್ಟವೈ ವಸ್ತ್ರಂಗಳೆನುತಂ |
ನೆಟ್ಟ ದುಗುಡದಿ ಮೂಗಿನೊಳು ಬೆರ |
ಲಿಟ್ಟು ಚಿಂತಾಕ್ರಾಂತೆಯಾದಳು ದೇಹಮಂ ಮರೆದು || ೬೪ ||

ಆ ಸಮಯದೊಳು ಬಂದನಾ ಜಗ |
ದೀಶ ಭೋಂಕನೆ ವೃದ್ಧ ಚಿಪ್ಪಿಗ |
ವೇಷಮಂ ತಳೆದುಡಿಯ ಚೀಲದ ಕೆಯ್ಯ ಕತ್ತರಿಯ ||
ಮಾಸಿದಂಗದ ನೆರೆದಲೆಯ ಬೆಳು |
ಮಿಾಸೆ ಗಡ್ಡದ ಪಲ್ಗಳುದುರಿದ |
ಬೋಸುವಾಯಿಂದರಮನೆಯ ಮುಂಬಾಗಿಲೊಳು ನಿಂದ || ೬೫ ||

ಹಲವು ಹರಿಗಳ ಮೊದಲ ಪರಿಯೊಳು |
ಪೊಲಿಯ ಬಲ್ಲೆನು ಕಿತ್ತ ವಸ್ತ್ರವ |
ಪೊಲಿಸುವವರುಂಟೇ ಎನಲು ಕೇಳ್ದೊರ್ವ ಸತಿ ಪೋಗಿ ||
ಕಳೆಯುಡುಗಿ ಚಿಂತಿಸುವ ದೇವಿಯ |
ರೊಳು ವಿಲಾಸದಿ ಪೇಳೆ ಹರುಷಂ |
ದಳೆದು ಕರೆ ಎನೆ ಕರೆದು ತಂದರು ವಸ್ತ್ರಭಿನ್ನಕನ || ೬೬ ||

ಬಂದನಾ ನಾಗಲಿಕನಗಜೆಯ |
ನಿಂದು ನೋಡುತೆ ಕೆಮ್ಮಿ[೧] ನಡುಗುತೆ |
ನಿಂದಿರಲು ಮಿಗೆ ಪರಿದ ವಸ್ತ್ರವ ನೀನು ಪೊಲಿದಪೆಯಾ ||
ಎಂದು ಗಿರಿಜಾದೇವಿ ಕೇಳ |
ಲ್ಕೆಂದನಾ ನಾಗಲಿಕ ಹರಿದವ |
ತಂದು ತೋರಿಸೆನಲ್ಕೆ ತಂದರು ದಿವ್ಯವಸ್ತ್ರಗಳ || ೬೭ ||

ನೋಡಿದಂ ಛಿದ್ರಗಳ ಗಿರಿಜೆಯೊ |
ಳಾಡಿದಂ ಪೊಸ ವಸ್ತ್ರದಂದದಿ |
ಮಾಡಿಕೊಟ್ಟಪೆ ನಾನು ಬೇಡಿದುದೀಯೆನಲು ನಗುತೆ ||
ಆಡಿದಳು ನೀನೇನನಾದರೆ |
ಬೇಡು ಬೇಡಿದುದಿತ್ತು ಮನ್ನಿಪೆ |
ನಾಡ ಮಾತೇನೊಲಿದು ಪೊಲಿ ನೀನೆಂದಳಗಜಾತೆ || ೬೮ ||

---

೧ ವಂದಿಸಿಯೆ ಕೆಮ್ಮುತ್ತೆ. (ಉ.)

ಗಿರಿಜೆಯಾಡಿದ ಮಾತಿಗಾ ನಾ |
ಗರಿಕ ನಂಬುಗೆಯಾಗಬೇಕೆನೆ |
ಹರ ಹರಾ ನಾವಾಡಿ ತಪ್ಪಿದುದಿಲ್ಲವಿಷ್ಟು ದಿನ ||
ಮರುಳೆ ನೀ ಬೇಡಿದುದ ಕೊಡುವುದ |
ದರಿದೆ ನಂಬುಗೆ ಯಾಕೆ ಪೊಲಿಯೈ |
ಕರಿಮುಖನ ಮೇಲಾಣೆ ನೀ ಬೇಡಿದುದನಿತ್ತಪೆನು || ೧೯ ||

ಎಂದು ದೇವಿ ನಿರೂಪಿಸಲು ರಾ |
ಗಂದಳೆದು ನಾಗಲಿಕ ವಸ್ತ್ರದೊ |
ಳೊಂದಿದೆಳೆಗಳ ಬಣ್ಣಬಗೆಗಳನರಿದು ಪೊಲಿದೀಯೆ ||
ಎಂದಿನಿಂ ಚೆನ್ನಾಗಿರಲು ರಾ |
ಕೇಂದುಮುಖಿ ಮಿಗೆ ಮೆಚ್ಚಿ ಸಂತಸ |
ದಿಂದೆ ಬೇಡೈ ನಿನ್ನ ಕಾಮ್ಯವನೀವೆನೆನಲೊಲಿದು || ೨೦ ||

ಬೇಡಿದಂ ನಾಗಲಿಕ ನಿನ್ನ ಸ |
ಗಾಢವೆತ್ತ ವಿಲಾಸವಿಭ್ರಮ |
ವೀಡಿರಿದ ಸೌಂದರ್ಯ ಸುಕುಮಾರೀಯ ಸೌಖ್ಯವನು ||
ನೋಡಿ ಭ್ರಮಿಸಿದೆನೆನ್ನೊಡನೆ ನೀ |
ಕೂಡಿ ರತಿಸುಖಸಾಗರದೊಳೋ |
ಲಾಡಿಸೆಂದೆನೆ ದೇವಿಯರು ಬೆರಗಾದರೇನೆಂಬೆ || ೨೧ ||

ಕೆಟ್ಟಿತಲ್ಲಾ ಕಾರ್ಯ ವಾಕ್ಯವ |
ಕೊಟ್ಟೆ ನಿನಗೆಯು ಮೇಲನರಿಯದೆ |
ದಿಟ್ಟನಿವನೆಂದರಿದುದಿಲ್ಲಂ ಘನಹನೆಂದಿರ್ದೆ ||
ಕೊಟ್ಟ ನಂಬುಗೆ ಪುಸಿಯುಬಾರದು |
ಕೆಟ್ಟುದೆನ್ನಯ ಸತ್ಯವಿದಕೇಂ |
ಬಟ್ಟೆಯೆಂದಾ ಗಿರಿಜೆ ಮಂತಣಗೊಂಡಳೆದೆಯೊಳಗೆ || ೨೨ ||

ಶಿವ ಶಿವಾ ದೇವೇಂದ್ರನಜ ಮಾ |
ಧವ ಕುಬೇರಾದ್ಯಮರ ಮನು ಮುನಿ |
ನಿವಹ ತಮ್ಮಯ ಮಾತೆಯೆಂದೇ ಬಗೆವರೆನ್ನುವನು ||
ಇವನದೇಂ ಕಾರಣವೊ ನನ್ನಯ |
ವ್ಯವಹರಣೆಗೆಣೆಸಿದ ವಿಕಾರವ |
ತವಿಸಬೇಕೆಂದವನೊಳಿಂತೆಂದಳು ಮಹಾದೇವಿ || ೨೩ ||

ಏನ ಬಯಸಿದೆ ಪಾಪಿ ನಿನಗದು[೧] |
ಹೀನವಲ್ಲದೆ ಮುಪ್ಪಿನವನಿಗಿ |
ದೇಂ ವಿಚಾರ ವಿವೇಕಿಗಳು ನೆರೆ ಪಾಪಕೆಣಿಸುವರೇ ||
ಮಾನವಂತರು ಪರಸತಿಯರಭಿ |
ಮಾನವಂ ಕೆಡಿಸುವರೆ ಭಾಗ್ಯವ |
ನೇನ ಬೇಡಿದೊಡೀಯೆನೇ ನಿರ್ಭಾಗ್ಯ ಸಾಯುವನು[೨] || ೭೪ ||

ಸಾಯದಿಹ ವರವೀವೆ ಪೂರ್ವದ |
ಪ್ರಾಯಮಂ ಮರಳಿಸುವೆ ತ್ರಿಜಗದ |
ರಾಯ ಪಟ್ಟವ ಕಟ್ಟುವೆನು ಕೇಳರೆಮರುಳೆ ನಿನಗೆ ||
ತಾಯಿ ನಾಂ ತ್ರೈಜಗಕೆ ನಿನ್ನ ನಿ |
ಜಾಯತವ ನೀನರಿಯಲಿಲ್ಲವೆ |
ಬೀಯಮುಪ್ಪರೆ ಪಾತಕಕ್ಕನ್ಯಾಯಮಂ ಬಯಸಿ || ೭೫ ||

ವೇಶಿಯರ ಕೂಡಿದರಿಗರ್ಥ ವಿ |
ನಾಶಮುಪ್ಪುದು ವಿಧವೆಯರನಭಿ |
ಲಾಷೆಯಿಂ ವರಿಸುವರಿಗತ್ಯಾಯುಷ್ಯ ಕುಂದುವುದು ||
ದಾಸಿಯರ ಕೂಡುವಗೆ ಕುಲದ ವಿ |
ಶೇಷ ತಗ್ಗುವುದನ್ಯ ಸತಿಯರಿ |
ಗಾಸೆಗೈವರಿಗರ್ಥವುಂ ಆಯುಷ್ಯ ಕುಂದುವುದು || ೭೬ ||

ಪರಸತಿಯ ಬಯಸುವನ ಮಾನ್ಯರು |
ಸರಕುಮಾಡರು ಬಂಧುವರ್ಗಂ |
ಕರೆಯರೊಸಗೆಗೆ ನಂಬರಭಿಮಾನಿಗಳು ಕೇಳವಗೆ ||
ಧರಣಿ ಮುನಿವುದು ತಂದೆತಾಯಿಗ |
ಳಿರರವನ ಸಂಗಾತ ಕೈವಿಡಿ |
ದರಸಿಯುಂ ದೂರುವಳು ಕಂಡವರೊಡನೆ ಬೈಬೈದು || ೭೭ ||

ಒಡನೆ ಬೆರಸಿರ್ದಾಗಲೆದೆ ದಡ |
ದಡಿಸುತಿಹುದಾ ಕ್ಷಣದಿ ಕಂಡಡೆ |
ಬಡಿವರೊಡೆಯರು ಪೋಗುವುದು ಬಹುದಧಿಕ ಪ್ರಾಯಾಸ ||
ನಡುಗಿಪುವು ಕೈಕಾಲ್ಗಳಾತ್ಮನ |
ಬಿಡುಗಡೆಯು ನಿಶ್ಚಯವು ಮನದೊಳು |
ಹಿಡಿದಿಹುದು ಕೇಳಲ್ಪಸುಖ ಪರ ನಾರಿಯರ ಕೂಟ || ೭೮ ||

೧ ನಿನ್ನೊಳು (ಉ.) ೨ ಸಾಯೆನಲು (ಇ.) ಸಾಯೆಯಲಾ (ಎ.)

ಬಾಲೆಯರ ಸಂಯೋಗಮೊಂದೇ |
ಕಾಲಗಳಿಗೆಗೆ ಸಾಕೆನಿಸುವುದು |
ಮೇಲೆ ಛೀಯೆನಿಸುವುದು ನಿನಗಿದರಿಂದ ಫಲವೇನು ||
ಹಾಲನುಳಿದಂಬಿಲವ ಬಯಸುವ |
ಬಾಲಬುದ್ಧಿಯ ಬಿಟ್ಟು ಕಳೆ ನಾ |
ಪಾಲಿಸುವೆ ನಿನಗಧಿಕ ಭಾಗ್ಯವ ತುಷ್ಟಿಬಡೆವಂತೆ || ೭೯ ||

ಇಂತು ಬೋಧಿಸೆ ಕೇಳ್ದು ಶಿವನ |
ತ್ಯಂತ ಹರುಷಂಬೋಗಿ ಪರ್ವತ |
ಕಾಂತಸುತೆಯೊಳು ನುಡಿದ ಕಾತುರಿಯಾವರಣ[1]ನಾಗಿ ||
ಕಾಂತೆ ನೀನೆಂತೊರೆದರುಂ ಮ |
ದ್ಭ್ರಾಂತು ಪರಿಹರಮಾಗದಿವೆಯೋ |
ರಂತೆ ಕೂಡೆನ್ನೊಡನೆ ಪುಣ್ಯಶ್ರವಣಮೇಕೆಂದ || ೮೦ ||

ಹಸಿದವಗೆ ತಾಂಬೂಲವೀವುದು |
ತೃಷಿತಗಾಜ್ಯಾಹುತಿಯನೀವುದು |
ಬಿಸಿಲು ತಾಕಿದವರಿಗೆ ಕಣುಕದ ಕಡುಬ ನೀಡುವುದು ||
ಶಶಿವದನೆ ಕೇಳ್ಕಾಮತಾಪದೊ |
ಳಸುವಳಿದವಗೆ ಬೋಧೆ ಪೇಳ್ವುದು |
ರಸಿಕ ಮಾರ್ಗವೆ ತಳುವ ಮಾಡದಿರೊಲಿದು ಕೂಡೆಂದ || ೮೧ ||

ನುಡಿದ ಮಾತಿಗೆ ತಪ್ಪದಿದ್ದರೆ |
ಮಡದಿ ಎನ್ನೊಳು ಬೆರಸು ನಿನ್ನಯ |
ನುಡಿಯುನೊಲ್ಲದೊಡೊಲ್ಲೆನೆಂದೊಡೆ ಪೋಪೆ ನಾನೀಗ ||
ಬಡವ ನಾಂ ಪದಿನಾಲ್ಕು ಲೋಕಗ |
ಳೊಡತಿ ನೀನೆಲೆ ರಮಣಿ ನಿನಗಾಂ |
ಪಡಿಯೆ ದಾರಿದ್ರದೊಳು ಧನಿಕರಿಗೆಲ್ಲಿಹುದು ಸಹಜಂ || ೮೨ ||

ಎಂದು ಮರುಗುತ ಕೃತಕ ಚಿಪ್ಪಿಗ |
ನಿಂದಿರಲು ಗಿರಿಜಾತೆ ಮನದೊಳ |
ಗೆಂದಳಿವ ನಾಡಾಡಿ ಮಾನವನಲ್ಲ ಶಿವ ತಾನೆ ||
ಬಂದನೋ ನನ್ನಿರವ ನೊಡುವೆ |
ನೆಂದು ಠಕ್ಕಿನೊಳಕಟಕಟ ಇದ |
ರಂದಮಂ ನಿಶ್ಚಯಿಸಬೇಕೆಂದೂರ್ಧ್ವ ದೃಷ್ಟಿಯೊಳು || ೮೩ ||

---

೧ ಯುತನು ತಾ (ಇ.)

ನೋಡಿ ಶಿವನೆಂದರಿದು ಚಿತ್ತದೊ |
ಳೀಡಿರಿದುದತಿ ಚಿಂತೆ ನಗೆಮೊಗ |
ಬಾಡಿದುದು ಮರವಟ್ಟುದಂಗೋಪಾಂಗವಾ ಕ್ಷಣದಿ ||
ಪಾಡಳಿದ ವಲ್ಲಭೆಯನೀಶ್ವರ |
ನೋಡಿ ತನ್ನ ನಿಜ ಸ್ವರೂಪದ |
ಗಾಡಿಯಂ ತೋರಿಸಿದ ಕೇಳೆಲೆ ಶರಣಕುಲತಿಲಕಾ || ೮೪ ||

ಕಂಡು ಹರನಾ ಗಿರಿಸುತೆಯನೋ |
ರಂತೆ ಬಿಗಿಬಿಗಿದಪ್ಪಿ ಮುದ್ದಿಸಿ |
ಚಿಂತೆ ಯಾಕೆಲೆ ರಮಣಿ ನಿನಗೆಂದೊರೆದೊರೆದು ಕೇಳೆ ||
ಇಂತು ಮಾಳ್ಪರೆ ಅಕಟಕಟ ನಿಜ |
ಕಾಂತೆಯರೊಳಭಿಮಾನಿಗಳು ನೀ |
ಭ್ರಾಂತನಲ್ಲದೆ ಜಾಣನೇ ಪೋಗೆಂದಳಾ ಗಿರಿಜೆ || ೮೫ ||

ಹೆಣ್ಣ ವಿವರಿಸಿನೋಡಲತ್ತಿಯ |
ಹಣ್ಣು ಹಿಕ್ಕಿ[1]ದೊಡೆಲೆ ಮರುಳೆ ಕೇ |
ಳಣ್ಣನಾದರು ತಮ್ಮನಾದರು ಪುತ್ರನಾದರೆಯು ||
ಕಣ್ಣಿಗತಿರೂಪಾಗೆ ಬೇಟವ |
ಹಣ್ಣುವರು ಕೂಟಕ್ಕೆಳಸುವರು |
ಹೆಣ್ಣಿನೊಳು ಸದ್ಗುಣವನರಸುವುದುಚಿತವೇ ಪೇಳಾ || ೮೬ ||

ಅರಸನಂತೆಸೆದಿರ್ದರುಂ ಪರ |
ಪುರುಷರಂ ಬಯಸುವರು ವಿಷಯದಿ |
ಪರಿ[2]ವೃತಿರ್ಪರು ಬಾರದುದಕೆಳಸುವರು ನೋಡಿದರೆ ||
ಶಿರವನೆರ[3]ಗಿಹರೇನನೂ ಇನಿ |
ತರಿಯದಭಿಮಾನಿಗಳೆನಿಸಿ ಕೇಳ್ |
ಮರುಳೆ ಸತಿಯರ ಮನವ ಕಾಂಬವರುಂಟೆ ಲೋಕದೋಳು || ೮೭ ||

ಆಡುವರು ಬೀರ[4]ವನು ಪಾಪವ |
ಮಾಡಿ ಮೌನದೊಳಿಹರು ಗಂಡನ |
ಕೂಡೆ ಸಜ್ಜನಿಕೆಗಳ ಮೆರೆವರು ಪರಪುರುಷರೊಡನೆ ||
ಮಾಡುವರು ಬೇಟಗಳನೊಲಿದನು |
[5]ಗೂಡಿದರೆಯದುಭುತದೊಳಿ[5]ಪ್ಪರು |
ಕೇಡುಬಯಸುತ್ತಿಹರು ತಮಗನುಕೂಲವಿಲ್ಲದರ || ೮೮ ||

---

೧ ಹಿಸುಕಿ (ಇ.) ೨ ವಿಸಟಂ । ಬರಿ (ಇ, ಉ.) ೩ ಬಾ (ಇ.) ೪ ಬಿರುದ (ಉ.)
೫-೫ ಗೂಡದಿರೆ ಹದುಬತೆಯೊ (ಇ, ಉ.)

ಅತ್ತಿ ಪೂವಾದಾಗ ವಾರಿಧಿ |
ಬತ್ತಿ ಬಯಲಾದಾಗ ಪಶ್ಚಿಮ |
ದತ್ತಣಿಂ ಚಂದ್ರಾರ್ಕರಿಂದ್ರನ ದೆಸೆಗೆ ನಡೆದಾಗ ||
ಮುತ್ತು ಮೃದುವಾದಾಗ ಹೇಸರ |
ಗತ್ತೆ ವಾರುವನಾದ ಕಾಲಕೆ |
ಚಿತ್ತ ನಿರ್ಮಳವಹುದು ಸತಿಯರಿಗೆಂಬುದರಿದಿರ್ದು || ೮೯ ||

ಕೃತಕವೇಷದಿ ಬಂದು ಎನ್ನಯ |
ಪತಿವ್ರತಾಹೀನೆ[1]ಯನು ಮಾಳ್ಪುದು |
ಮತವೆ ಹಿಡಿ ಶಾಪವನೆನುತ ಕೋಪದೊಳು ಗಿರಿರಾಜ ||
ಸುತೆ ಕಟುಗ್ರವ ಮಾಡೆ ಶಂಕರ |
ನತಿ ಬೆದರಿ ಕಂಗೆಟ್ಟು ನಿರ್ಮಳ |
ಮತಿಯುಡುಗಿ ತಲ್ಲಣಿಸುತಿಂದೆಂದನು ಭವಾನಿಯೊಳು || ೯೦ ||

ಕೇಳು ಸತಿ ಹಾದರದ ವಿವರವ |
ಕೇಳಿದೆಯಲಾ ಮೊನ್ನೆಯದನಾ |
ಪೇಳಲೇತಕೆ ಕಾಣಿಸುವೆ ನಿನಗೆನುತಲೀ ರೂಪ ||
ತಾಳಿ ಬಂದಿಂತೆಂದೆನೆನಲು ಕ |
ರಾಳ ವೇಷದಿ ಗೌರಿದೇವಿ ಚ |
ಡಾಳಿಸಿದಳೀಶ್ವರನೊಡನೆ ಮೇಲುತ್ತರದ ಮಾತ || ೯೧ ||

ನೋಡಿದರೆ ಪಾತಕವು ಬೆಸಗೊಳ |
ಬೇಡವೆಂದೆನಗೊರೆದೆ ನೀನೇ |
ಮಾಡಿ ತೋರಿದೆ ಅಕಟಕಟ ನುಡಿಯಂತೆ ನಡೆಯಿಂತೆ ||
ನೋಡಬಾರದ ಪಾತಕಂಗಳ |
ನಾಡಬಹುದೇ ಆಡದುದ ನೀ |
ಮಾಡಬಹುದೇ ಎನಲು ಶಂಕರ ಮನದೊಳಿಂತೆಂದ || ೯೨ ||

ನ್ಯಾಯಮಂ ತಿಳಿದಿರ್ದು ನಾವ |
ನ್ಯಾಯಮಂ ಮಾಡಿದೆವಲಾ ಕಮ |
ಲಾಯತಾಕ್ಷಿಯ ಶಾಪ ಬಿಡದಿನ್ನಳುಕಲೇಕೆನುತ ||
ಕಾಯಜಾಂತಕ ನಗುತ ಶಾಪವ |
ನೀಯೆನಲು ಗಿರಿಜಾತೆ ತ್ರಿಜಗದ |
ನಾಯಕನ ಶಾಪಿಸಿದಳೇನೆಂಬೆನು ಮಹಾದ್ಭುತವ || ೯೩ ||

---

೧ ವ್ರತವ ಹಾನಿ (ಉ.)

ಹೋಗಿ ಭೂಮಿಯೊಳುದಿಸಿ ಚಿಪ್ಪಿಗ |
ನಾಗಿ ಜೀವಿಸೆನಲ್ಕೆ ಕೇಳ್ದಾ |
ನಾಗಭೂಷಣ ತನ್ನ ನಿಶ್ಯಾಪತ್ವಮೆಂತೆನಲು ||
ಶ್ರೀಗುರು ಶ್ರೀಲಿಂಗ ಚರರ ಸ |
ಮಾಗಮದೊಳಿರು ನಿನ್ನ ಶಾಪವ |
ನೀಗು ಕಡೆಯೊಳು ಜಡೆಯ ಶಂಕರಲಿಂಗದೊಳಗೆನಲು || ೯೪ ||

ಇಂದುಶೇಖರ ನುಡಿದ ಗಿರಿನೃಪ |
ನಂದನೆಯೊಳಿಂತೆಂದು ಕೇಳರ |
ವಿಂದಲೋಚನೆ ನಿನ್ನ ಬಿಟ್ಟರಗಳಿಗೆ ಜೀವಿಪೆನೋ ||
ಎಂದು ಕೇಳಲು ಕೆಲ ದಿನಕೆ ನಾ |
ಬಂದು ನಿನ್ನನೆವೊಲಿ[೧]ಸಿ ನಾ ಕರ |
ತಂದಪೆನು ಪುಸಿಯಲ್ಲ ಪೋಗೆಂದಗಜೆ ಬೀಳ್ಕೊಡಲು || ೯೫ ||

ಆಗ ಶಂಕರದಾಸಿಮಯ್ಯಗ |
ಳಾಗಿ ಜನಿಸಿದ ನೀಲಗಳನನು |
ರಾಗ ಮಿಗೆ ಶಿವದಾಸಿಯಾಗಿಯು ಜನಿಸಿದಳು ಗಿರಿಜೆ ||
ಹೀಗವರ ವೃತ್ತಾಂತ ನೀವಿದ |
ರಾಗನರಿಯದೆ ನುಡಿಯಬಹುದೇ |
ಹೋಗಲಾಡಿದಿರ್ದೈ ಮಹಾತ್ಮನ ಕೆಣಕಿ ತವನಿಧಿಯ || ೯೬ ||

ಶಿವನೆ ತಾನಲ್ಲದೊಡೆ ನಿಟಿಲದಿ |
ಭವಿಸುವುದೆ ಭಾಳಾಕ್ಷಿ ನಿರ್ಜರ |
ನಿವಹಮೋಲೈಸುವುದೆ ಷಡ್ದರ್ಶನಗಳಂಜುವುವೇ ||
ಅವನಿಯೊಳಗಿಹ ಮನುಜರೊಳು ಕೇ |
ಳಿವರ ಹೋಲುವ ಮನುಜ[೨]ರುಂಟೇ |
ವಿವರವರಿಯದೆ ನುಡಿದಿರೆಂದನು ವಕ್ತ್ರಪಾದಮುನಿ || ೯೭ ||

ನೆನೆದ ಕಾರ್ಯಂ ಸಿದ್ಧಿಸಲಿ ಯೌ |
ವನಮದಾಗಲಿ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿ ಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನ ಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೯೮ ||

**ಅಂತು ಸಂಧಿ ೭ಕ್ಕಂ ಪದ ೫೧೮ಕ್ಕಂ ಮಂಗಳಂ**

---

೧ ವರಿ (ಇ, ಉ.) ೨ ಮಹಿಮ (ಉ.)

೮ನೆಯ ಸಂಧಿ

# ಶಂಕರದಾಸಿಮಯ್ಯನು ದೇವರದಾಸಿಮಯ್ಯನಿಗೆ ತವನಿಧಿಯನ್ನು ತಿರುಗಿ ಕೊಟ್ಟದ್ದು

**ಸೂಚನೆ**

ಈಶಭಕ್ತ ಮಹಾತ್ಮ ಶಂಕರ |
ದಾಸಿಮಯ್ಯಂ ಮುದದಿ ದೇವರ |
ದಾಸಿಮಯ್ಯನ ತವನಿಧಿಯ ಮುನ್ನಿನೊಲು ಮಾಡಿದನು ||

ಮರಣಜಿತ ಮಾರಾ^೧^ರಿ ಮಿಗೆ ಪೆರೆ |
ಧರನೆ ಮಾರಿದ ಮಹಿಮ ಮುರರಿಪು |
ವರ^೨^ದ ಮೂಜಗದಯ್ಯ ಮೇರುನಿವಾಸ^೨^ ಮೈನಾಕ ||
ಗಿರಿಯ ಭಾವಂ ಮೋಕ್ಷಲಕ್ಷ್ಮೀ |
ವರನೆ ಮೌನಿಪ್ರಿಯನೆ ಮಂಗಳ |
^೩^ಕರನನುಪಮಾಕ್ಷರಕಾಯ ದಿವ್ಯ^೩^ಮಕಾರರೂಪ ಜಯ || ೧ ||

ಈಶಭಕ್ತಲಲಾಮ ಶಂಕರ |
ದಾಸಿಮಯ್ಯನ ಚಾರು ಜನ್ಮವಿ |
ಶೇಷಮಂ ಕೇಳ್ದಳುಕಿ ಜಗ್ಗನೆ ಜರಿದು ದಡದಡಿಸಿ ||
ಈ ಶರಣನಿರವರಿಯದಾದೆನು |
ಮೋಸವಾಯಿತ್ತೆನುತೆ ದೇವರ |
ದಾಸಿಮಯ್ಯನು ವಕ್ತ್ರಪಾದಗಣೇಶಗಿಂತೆಂದ || ೨ ||

ಅರಿಯದಾದೆನು ಜೀಯ ನಾ ಮೈ |
ಮರೆದು ನುಡಿದೆನು ನಮ್ಮನಾತನ |
ಚರಣದೊಳಗಿರಿಸಯ್ಯ ನೀವೇ ಕರೆದುಕೊಂಡೊಯ್ದು ||
ತರುಳರೊಳಗವಗುಣವನೆಣಿಸದೆ |
ಕರುಣಶೇಷವ ಪಾಲಿಸೆನಲಾ |
ಶರಣನಿರ್ದೆಡೆಗವರನೊಯ್ದಂ ವಕ್ತ್ರಪಾದಮುನಿ || ೩ ||

---

೧ ಯಾ (ಇ, ಉ.) ೨-೨ ದಯಾನಿಧಿ ಮೇರುಗಿರಿನೀವಾಸ (ಉ.) ೩-೩ ಕರನನುಪಮಾ ದಿವ್ಯ ತೇಜ (ಉ.)

ದೊಡ್ಡಿತಂ ಕೆಲಕಿರಿಸಿಯಡೆನಿಡು |
ಗಡ್ಡ ಧೂಳಪ್ಪಂತೆ ಧರಣಿಯೊ |
ಳಡ್ಡ ಬೀಳುತೆ ಪೋದರಾ ದಂಪತಿಗಳವರೆಡೆಗೆ ||
ಕಡ್ಡ ಬೇಡೆಲೆ ಸ್ವಾಮಿ ನಾವರೆ |
ಯೆಡ್ಡರೆಮ್ಮೊಳು ನಿಮಗೆನುತ ತಲೆ |
ಯೊಡ್ಡಿದರು ಪಾದದೊಳು ಶಂಕರದಾಸಿಮಯ್ಯಗಳ || ೪ ||

ಹಸುಳ ಬೈದರೆ ಪಡೆದವರು ಲಾ |
ಲಿಸುವರಲ್ಲದೆ ಕೋಪಿಸುತ ಜೀ |
ವಿಸುವರೇ ನಾ ನಿಮ್ಮ ಮಗನಲ್ಲವೆ ಅಕಟ ನಾನು ||
ಉಸುರಿದೊಡೆ ನಿಮಗೇಂ ಕೊರತೆ ಮ |
ನ್ನಿಸು ಕೃಪಾಂಬುಧಿಯೆಂದು ನೆಲದೊಳು |
ಪಸರಿಸಿದರಂಗಗಳ ದಂಪತಿಗಳು ಸುಭಕ್ತಿಯೊಳು || ೫ ||

ಮಳಲ ಪುಗ್ಗಿಯೊಳರಸುವರೆ ಕ |
ಲ್ಗಳನು ನಿಂಬೆಯ ಪಣ್ಣಿನೊಳು ಕಡು |
ಪುಳಿಯ ನೋಳ್ಪರೆ ಬೇವಿನೊಳು ಕಹಿಯಂ ವಿಚಾರಿಪರೆ ||
ಪುಲು ಮನುಜರೊಳು ನೀವು ದೋಷಂ |
ಗಳ ವಿಚಾರಿಸಬೇಡವೆನುತಾ |
ಕೆಳದಿಸಹಿತೆರಗಿದನು ದೇವರದಾಸಿಮಯ್ಯಗಳು || ೬ ||

ಅರಿಯದಾದೆನು ನಿಮ್ಮ ಪಾದದ |
ಗುರುತನೆಲೆ ಕರುಣಾಂಬುನಿಧಿ ಕೇಳ್ |
ಕಿರುಕುಳರಿಗುಂಟಾಗಿಹುದು ಲಘುಮಾರ್ಗವದ ನೀವು ||
ಮರೆಯಬೇಕೆಲೆ ಜೀಯ ನಾವತಿ |
ಪರೆಗಳ[1]ಮ್ಮೊಳಗೇಕೆ[2] ದೋಷಮ |
ನರಸುವಿರಿ ನಿಮಗೀಡೆ ನಾನೆನುತಡ್ಡ ಬಿದ್ದಿರಲು || ೭ ||

ಅರರೆ ಶಂಕರದಾಸಿಯಂತಃ |
ಕರಣ ತೊಪ್ಪನೆ ತೋದುದಾಗಳೆ |
ಕರುಣರಸದಿಂ ಮರುಕಮಂಕುರವಾದುದಂಗದೊಳು ||
ಭರದೊಳೆದ್ದಾ ಗಂಡಪೆಂಡಿರ |
ಸಿರಗಳಂ ಪಿಡಿದೆತ್ತಿ ವಂದಿಸಿ |
ಹರುಷದಿಂ ಗದ್ದುಗೆಯೊಳವರನು ಮೂರ್ತಗೊಳಿಸಿದನು || ೮ ||

---
೧ ಮರುಳ ನ (ಇ.) ೨ ಮರುಳುಗಳು ನಮ್ಮೊಳಗೆ (ಉ.)

ಶಶಿವದನೆ ಶಿವದಾಸಿ ಭೋಂಕನೆ |
ಭಸಿತವಿತ್ತೆರಗಿದಳು ಕೈಮುಗಿ |
ದುಸುರಿದಳು ನೀವಿಲ್ಲಿಯೇ ಲಿಂಗಪ್ರಸಾದವನು ||
ಒಸೆದು ಕೊಂಡೊಕ್ಕುದನೆಮಗೆ ಪಾ |
ಲಿಸಲು ಬೇಕೆನಲಾಗ ದುಗ್ಗಳೆ |
ನಸು ನಗುತ ಬಿನ್ನೈಸಿದಳು ಕೈಮುಗಿದು ಕೋಮಲೆಗೆ || ೯ ||

ನಿಮ್ಮ ಶೇಷವ ಸ್ವೀಕರಿಸುವುದು |
ನಮ್ಮ ಭಾಗ್ಯಮದಲ್ಲವೇ ಕೇ |
ಳಮ್ಮ ನೀವು ಮಹಾ ಮಹಿಮರೆಂಬುದನರಿಯದಾವು ||
ಹೆಮ್ಮನಾಡಲು ಬರತು ಪೋದಿ |
ತ್ತೆಮ್ಮ ತವನಿಧಿ ಭಕ್ತರೊಡೆಯರು |
ಸುಮ್ಮನುಪವಾಸದೊಳಗಿರ್ದಪರಾವು ಸಲಿಸುವುದು || ೧೦ ||

ಮತವೆ ಕೇಳಬುಜಾಕ್ಷಿ ಶಿವಗಣ |
ತತಿಗೆ ನೀಡದೆ ತಮ್ಮ ಹೊಟ್ಟೆಯ |
ತತಿಯ ಹೊರೆವಾ ಲಿಂಗಮುದ್ರೆಯ ಪಸುಗಳೆನಿಪರಿಗೆ ||
ಅತಿಶಯದ ಪಾತಕವು ಮೋಕ್ಷದ |
ಗತಿಯವರಿಗಿನಿತಿಲ್ಲ ಭವದೊಳು |
ಪತಿತರಾಗುತೆ ಬಳಲುತಿರ್ಪರು ದುರ್ಗತಿಗಳಿಂದೆ || ೧೧ ||

ಪಂಚಮುದ್ರಾಂಕಿತರಿಗನ್ನವ |
ವಂಚಿಸದೆ ನೀಡಿದೊಡೆ ವಂದಿಸಿ[೧] |
ಮುಂಚುವರು ಸದ್ಗತಿಗೆ ಸಕಲ ಪದಾರ್ಥಮುಂಟಾಗಿ ||
ವಂಚನೆಯ ಮಾಡಿದೊಡೆ ಪಾಪದ |
ಪಂಚೆಯೊಳಗಾಳುತ್ತಿಹರು ನಿ |
ರ್ವಂಚನೆಯೊಳಿರ್ದಾತನೇ ಶಿವಶರಣಮಣಿಯೆನಿಪ || ೧೨ ||

ಸತಿಗೆ ಸಂಗಡಿಗಂಗೆ ದಾಸಿಗೆ |
ಸುತರಿಗಾಗಲೆನುತ್ತಲನ್ನವ |
ನೆತಿಗಳಿಗೆ ಸನ್ಮಾರ್ಗಿಗನ್ನವನಿಕ್ಕದುಂಬಶನ ||
ವ್ರತಿಗಳಿಗೆ ಪಥ್ಯವ ತಿರಿದು ತಂ |
ದತನು ಬೋನದೊಳರ್ಥಮಂ ಕೇ |
ಳತಿಥಿಗಿಕ್ಕದೆ ಕೊಂಬಶನ ಕ್ರಿಮಿಯೆನಿಪುದೆಲೆ ರಮಣಿ || ೧೩ ||

೧ ದೊಡವಂದಿರು (ಇ, ಉ.)

ಮುಂಚೆ ತನಗೆಂದುಳ್ಳಶನಮಂ |
ವಾಂಚೆಯಿಂದುಂಡುಳಿದಶನಮಂ |
ಹಿಂಚೆ ಮಾಹೇಶ್ವರರಿಗಿಕ್ಕುವ ಲಿಂಗವಂತರಿಗೆ ||
ಪಂಚ ಮಹಪಾತಕಮವರ ನಿ |
ರ್ವಂಚಕರು ನುಡಿಸಿದರೆ ಕೇಳರ |
ಸಂಚೆನಡೆಯುಳೆ ಅವರಿಗಿಂದತಿ ಪಾಪ ಪೊರ್ದುವುದು || ೧೪ ||

ಹಿಂದಣವರ ವಿಚಾರಿಸದೆ ತಾ |
ರೆಂದು ಸುರಿಯಿಸಿಕೊಂಡು ಭೋಂಕನೆ |
ತಿಂದು ಹೊಟ್ಟೆಯು ಹೊರೆವ ಪಾಪಾತ್ಮಕರ ಸಮವರ್ತಿ ||
ತಿಂದು ಡರ್‍ರನೆ ತೇಗುವನು ಪೂ |
ರ್ಣೇಂದುಮುಖಿ ಕೇಳವನು ಮಲದೊಳ |
ಗೊಂದಿ ವಶ[1]ವಾಗಿಹನು ಕಲ್ಪಾಂತರವಿದಾನ್ವಿತದಿ || ೧೫ ||

ಮನೆಯುವರಿಗೊಂದು ಪರಿಯಶನವು |
ತನಗೆ ಬೇರೊಂದು ಪರಿಯೂಟವು |
ಮನೆಗೆ ಬಂದ ಮಹೇಶ್ವರರಿಗೊಂದು ಪರಿ ಭಿಕ್ಷವನು ||
ಮನವೊಲಿದು ನೀಡುತ್ತಲುಂಬುವ |
ನನುದಿನಂ ದಾರಿದ್ರ ದೋಷದಿ |
ಜನಿಸುವಂ ಚಾಂಡಾಲಯೋನಿಯೊಳೆಲೆ ಸರೋಜಮುಖಿ || ೧೬ ||

ಪಂತಿಯಲ್ಲಿ ಪ್ರಪಂಚಮಾಡುವ |
ಭ್ರಾಂತನಿಳಿವನು ನರಕದೊಳು ಸದ |
ನಾಂತರದೊಳುತ್ಕೃಷ್ಟ ತಿನಿಯಂ ತಿನುತ ಪೊರಗುಂಬ ||
ಪಂತಿಯೊಳಗರೆಯೂಟಮಿಕ್ಕುವ |
ನಂತವನ[2] ಕಡಿಕಡಿದು ಸುಟ್ಟು ಕೃ |
ತಾಂತನಾರೋಗಣೆಗೆ ಬಡಿಸುವರೆಲೆ ಸರೋಜಮುಖಿ || ೧೭ ||

ಅಕ್ಷಯಾನ್ನವ ನೇಮವಿತ್ತು ಮು |
ಮುಕ್ಷುಗಳಿಗಿಕ್ಕಿದೊಡವಗೆ ನಿಟಿ |
ಲಾಕ್ಷಪದವಾ ಯಾಚಿತದೊಳಿಕ್ಕಿದೊಡೆ ವಿಷ್ಣುಪದಂ ||
ಭಿಕ್ಷಮಂ ನೀಡಿದೊಡೆ ಬ್ರಹ್ಮಪ |
ದಕ್ಷಯಂ ತಪ್ಪದು ವಲಂ ಚಕಿ |
ತಾಕ್ಷಿಯನ್ನವನೀವ ಮನೆ ತೋರಿದೊಡೆಯಿಂದ್ರಪದಂ || ೧೮ ||

---

೧ ತ್ರಸ (ಇ, ಉ.) ೨ ಹಂತೆಗನ (ಇ, ಉ.)

ಅನ್ನದಾನವೆ ಯುಕ್ತ ಕರ್ಮವ |
ಭಿನ್ನವಂ ಮಾಡುತ್ತಿಹುದು ಕೇ |
ಳನ್ನದಾನಪ್ರತಿಗ್ರಹಿಗಳಂ ತೃಪ್ತಿಬಡಿಸುವುದು ||
ಅನ್ನದಾನವೆ ಮುಕ್ತಿಸಂಪದ |
ಪನ್ನಗರಸನ ಮಾಡುವುದು ಕೇ |
ಳನ್ನದಾನಕ್ಕಧಿಕ ದಾನಗಳಿಲ್ಲವದರಿಂದೆ || ೧೯ ||

ನೀಡುವುದು ಜಂಗಮಕುಪಾಧಿಕೆ |
ಯಿಾಡಿರಿದು ಸವಿಯಾದ ದ್ರವ್ಯವ |
ಬೇಡಲುಂಟಾಗಿರ್ದ ದ್ರವ್ಯವ[೧]ವೊಳ್ಳಿತಾದುದನು ||
ಗೂಡಿನೊಳು ಬೈಚಿಟ್ಟು ಸ್ವಲ್ಪವ |
ಮಾಡಿ ನಿರುಪಾಧಿಕೆಯೊಳನ್ನವ |
ನೀಡುವುದು ಶರಣರಿಗೆ ಮತವಲ್ಲೆಲೆ ಶಕುಲನೇತ್ರೆ || ೨೦ ||

ಇಂದು ಸಲುವುದು[೨] ನಾಳಿಗಿರವೇ |
ಳ್ಕೆಂದು ಮನದೊಳು ಮರುಗವಕ್ಕರಿ |
ನಿಂದೆ ಮಾಹೇಶ್ವರರಿಗಿತ್ತರೆ ಸದ್ಭಕ್ತನಾತಾ ||
ಹಿಂದೆ ನೆನೆಯುತೆ ಮುಂದನೆಣಿಸುತೆ |
ಕುಂದು ಮನದೊಳಗಿರಿಸಿ ನೀಡ |
ಲ್ಕಿಂದುಧರಗರ್ಪಿತವಹುದೆ ಅವ ಭಕ್ತನೆನಿಸುವನೆ || ೨೧ ||

ಕೆಳದಿ ಕೇಳ್ ಶಿವಮುದ್ರೆಯುತರುಂ |
ಡುಳಿದುದುಂಬುದುವುತ್ತಮಂ ನಿ |
ಶ್ಚಳದಿ ಪಂಕ್ತಿಯೊಳುಂಬುದದು ಮಧ್ಯ ಗತಿ ತಾನುಂಡು ||
ಬಳಿಕಲಿಕ್ಕುವುದಧಮ ಶರಣರು |
ಗಳಿಗೆ ನೇಮಿಸಿ ಕರೆಯದುಂಡವ |
ರಿಳಿವರತಿ ರೌರವ ನರಕದೊಳಗಬಲೆ ನಿಮ್ಮಾಣೆ || ೨೨ ||

ತರುಣಿ ಕೇಳದು ಕಾರಣಂ ಶಿವ |
ಶರಣರತಿ ಹಸಿದಿರಲು ಹೊಟ್ಟೆಯ |
ಹೊರೆವುದುಚಿತವೆ ನಮಗೆನಲು ಶಿವದಾಸಿ ಕೈಮುಗಿದು ||
ಹರುಷದಿಂದುಸುರಿದಳು ಮಾಹೇ |
ಶ್ವರರನೆಲ್ಲರ ಬಿಜಯ ಮಾಡಿಸಿ |
ತರಿಸುವೆನು ನೀವೆನ್ನ ಬಿನ್ನಪವಂ ಸಲಿಸಬೇಕು || ೨೩ ||

---

೧ ಗಿದ್ದುದೆಲ್ಲವ (ಇ, ಉ.) ೨ ಸಾಲದು (ಇ, ಉ.)

ಆ ನುಡಿಯ ದಂಪತಿಗಳೊಪ್ಪಿ ನ |
ವೀನ ಸಂತೋಷದೊಳು ವಿವಿಧಭಿ |
ಮಾನಿ ಶಿವದಾಸಿಯರು ವಕ್ತ್ರಪದಂಗೆ ನೇಮಿಸಲು ||
ಏನು ಹೇಳುವೆ ಕರೆದು ತಂದನು |
ಹೀನ[1] ಶಿವಶರಣವ್ರಜವನನು |
ಮಾನಿಸದೆ ಗಂಗೆಯನು ಭಗಿರಥ ಕೊಂಡು ಬಂದಂತೆ || ೨೪ ||

ಬಂದ ಶರಣವ್ರಜಕೆ ಸಂತಸ |
ದಿಂದ ಶಂಕರದಾಸಿಮಯ್ಯಂ |
ವಂದಿಸಿದ ಶಿವದಾಸಿ ನೇಮಿಸಿ[2] ನಿರ್ಮಳೋದಕವ ||
ತಂದು ಪಾದಂಗಳ ತೊಳೆದು ಕರ |
ತಂದು ಗದ್ದುಗೆಯಿಟ್ಟು ಮೂರ್ತಿಗೊ |
ಳೆಂದು ಬಿನ್ನಯಿಸಲ್ಕೆ ಮೂರ್ತಂಗೊಂಡರೊಲವಿಂದೆ || ೨೫ ||

ಮನವೊಲಿದು ನೋಡಿದಳು ಶರಣರ |
ಘನವನಾ ಶಿವದಾಸಿ ಮಿಗೆ ಗಂ |
ಡನೊಳೊರೆದಳಿವರೆಲ್ಲರಿಗೆಯುಪಕರಣ ಬೇಕೆಂದು ||
ವನಿತೆ ನುಡಿದುದ ಕೇಳಿ ಭಕ್ತಾಂ |
ಬುನಿಧಿ ಶಂಕರದಾಸಿಮಯ್ಯಂ |
ಮನೆಯ ಮುಂದಗಿಯೆಂದು ವಕ್ತ್ರಪದಂಗೆ ನೇಮಿಸಿದ || ೨೬ ||

ಅಗಿದನಾ ವಕ್ತ್ರಪದ ಕುಳಿಯೊಳು |
ತೆಗೆದ ಸಂತಸದಿಂದ ಚಿನ್ನದ |
ಮಗಿಗಳಂ ಪರಿವಾಣಗಳ ತಟ್ಟೆಗಳ ಪಾತ್ರೆಗಳ ||
ಹೊಗರೊಗುವ ಹೊಸ ಹೇಮದಡ್ಡಣಿ |
ಗೆಗಳ ದೀಪಸ್ತಂಭಗಳ ರುಚಿ |
ಯೊಗುವ ಕನಕೋಪಕರಣಂಗಳ ಗಣಿಸಲರಿದೆನಿಸಿ || ೨೭ ||

ರಾಸಿಯೆಸೆದುದು ಕನಕಭೂಧರ |
ಮಾ ಶರಣನಿರ್ದೆಡೆಗೆ ಬಂದು ನಿ |
ವಾಸಮಾದೊಲು ಶಿವ ಶಿವಾ ಭಕ್ತರ ಮಹಿಮೆಯೆಂತೋ ||
ಆ ಸಕಲ ಸ್ವರ್ಣೋಪಕರಣಮ |
ನೀಶಭಕ್ತರ ಮುಂದೊಲಿದು ಶಿವ |
ದಾಸಿಯಡೆಮಾಡಿದಳು ತೆರಪಿನಿಸಿಲ್ಲದಂದದೊಳು || ೨೮ ||

---

೧ ದಾನಿ (ಇ, ಉ.) ೨ ಸೇವಿಸಿ (ಇ.)

ಏ ಪರಿಯ ಮಹಿಮೆಯೊ ಮಝುರೆ ಬಹು |
ರೂಪದಾಳ್ದವರವರಿಗಾ ವಿವಿ |
ಧೋಪಕರಣಂಗಳನು ಮಜ್ಜನಜಲವ ಪುಷ್ಪಗಳ ||
ಧೂಪಮಂ ಗಂಧಾಕ್ಷತೆಗಳಂ |
ದೀಪ ವೀಳ್ಯೆಯಗಳನಿರಿಸುತಂ |
ಚಾಪಲಾಂಬಿಕೆ ಲಿಂಗಪೂಜೆಯ ಮಾಡಿಸಿದಳವರ || ೨೯ ||

ಆಡಲಳವೇ ಹಸ್ತಪರುಷವ |
ಮಾಡಿಸಿಯೆ ಭಸಿತವನು ತಳಿದಳು |
ಗಾಡದೊಳು[೧] ಶಿವದಾಸಿ[೨]ಯೈಮಾನಕ್ಕೆಯಶನಕ್ಕೆ[೨] ||
ನೀಡುತಿರ್ದಳು ಶರಣನಿಕರಂ |
ಬೇಡಿ ಬೇಡಿದುದೆಲ್ಲಮಂ ಮಿಗೆ |
ಕೂಡಿ ತುಂಬಿಹವೆಂದಿನಂದದಿ ಭಾಂಡಗಳ ನೋಡೆ || ೩೦ ||

ಶಿವ ಶಿವಾ ಚೆನ್ನಾಗಿ ಶರಣರ |
ನಿವಹ ಸಲಿಸಿತು ಮಗುಳೆಯುಂ ನೆರೆ |
ಯವರ ಕರಕರತಂದು ನೀಡಿದರೇನ ಪೇಳುವೆನು ||
ಹವಣೆ ಬಣ್ಣಿಪರಿಚ್ಚೆಯೂಟದ |
ತವನಿಧಿಯ ಶಿವದಾಸಿ ಪಡೆದಳು |
ಭುವನದೊಳಗಚ್ಚರಿಯೆನುತೆ ಪೊಗಳಿದರು ಶರಣಜನ || ೩೧ ||

ವೀರಮಾಹೇಶ್ವರನಿಕರ ಸಂ |
ಪೂರಣದೊಳುಂಡುಳಿದ ಶೇಷವ |
ಚಾರುಹೃದಯ ವಿವೇಕಿ ಶಂಕರದಾಸಿಮಯ್ಯಗಳು ||
ಸಾರಗುಣಸಂಪನ್ನ ತತ್ವವಿ |
ಚಾರ ದೇವರದಾಸಿಮಯ್ಯಗ |
ಳೋರಣದಿ ಸ್ವೀಕರಿಸುತಿರ್ದರದೇನ ಬಣ್ಣಿಸುವೆ || ೩೨ ||

ಇನಿದು ಮಾವಿನ ಹಣ್ಣನರಗಿಳಿ |
ಯನುಭವಿಸುವೊಲು ಮಾಂದಳಿರುಗಳ |
ತನಿರಸವ ಕೋಗಿಲೆಗಳುಂಬೊಲು ಚಕ್ರವಾಕಗಳು ||
ವನಜದಕ್ಕಿಯ ಮೆಲ್ವವೊಲು ಮುಂ |
ಬನಿಯ ಚಾದಗೆ ಕೊಂಬವೊಲು ಚಂ |
ದ್ರನ ಸುಧಾಕಿರಣವ ಚಕೋರಿಗಳೊಲಿದು ಸವಿವಂತೆ || ೩೩ ||

---

೧ ಗಾಡಿಯೊಳು (ಇ, ಉ.) ೨-೨ ಹರುಷಂದಳೆದು ಭೋಕಂನೆಯು (ಇ.)

ಸ್ವೀಕರಿಸಿದರು ಸುಧೆಯ ಹಂಸಾ |
ನೀಕ ಸವಿವೊಲು ತುಂಬಿ ಕಂಪಂ |
ಸ್ವೀಕರಿಸುವೊಲು ಬಾಲಕರು ಸಿಹಿಯಾದ ಭಕ್ಷ್ಯಗಳ ||
ಸ್ವೀಕರಿಸುವಂತೊಬ್ಬರೊಬ್ಬರಿ |
ಗಾ ಕರುಣದಿಂದೂಡಿಸುತ್ತಂ |
ಸ್ವೀಕರಿಸಿದರು ಪರಮಪದಶೇಷಪ್ರಸಾದವನು || ೩೪ ||

ಅಂಗವಿದ್ದಿಲ್ಲೆನಿಸಿ ಮಹಿಮೋ |
ತ್ತುಂಗಮೇ ರೂಪಾಗಿ ಪರಮಪ |
ದಂಗನೆಯ ವಲ್ಲಭ ಸದಾಶಿವನೊಲಿದು ಲೀಲೆಯೊಳು[೧] ||
ಪೊಂಗಿ ಸಕಲಾಕಾರಯುತ ಚರ |
ಲಿಂಗ ಮೂರುತಿಯಾದವರವು |
ತ್ತುಂಗಶೇಷವಿದೆನುತೆ[೨] ದೇವರದಾಸಿಗೂಡಿಸಿದ || ೩೫ ||

ಆದಿಮಧ್ಯಾಂತಂಗಳಿಲ್ಲದ |
ನಾದಬಿಂದುಕಳೋತ್ತಮಾಂಗದ |
ವೇದಶಾಸ್ತ್ರಗಳರಸಿ ಕಾಣದ ಸಕಲ ನಿಃಕಲದ ||
ಭೇದಮಲ್ಲದ ವಿವಿಧ ತತ್ವಗ |
ಳಾದಿಯಾಗಿಹ ವಸ್ತು ಮೂರುತಿ |
ಯಾದ ಜಂಗಮ ಸುಪ್ರಸಾದವಿದೆನುತಲೂಡಿಸಿದ || ೩೬ ||

ಶಿವನು ಲೀಲೆಯೊಳೈದು ತತ್ವವ |
ನವಧರಿಸಿಯಾ ತತ್ವದಿಂದ್ರಿಯ |
ವ್ಯವಹರಣೆ ಮಾ[೩]ದವರ ವಿಷಯಾನಂದ ಸೌಖ್ಯಗಳ[೩] ||
ಸವಿವುದಕೆ ಚರಲಿಂಗರೂಪದೊ |
ಳವತರಿಸಿದಂ ಪರಮಲೀಲೆಯೊ |
ಳವರ ಶೇಷಮಿದೆನುತ ಶಂಕರದಾಸಿಯೂಡಿಸಿದ || ೩೭ ||

ಸಾಂಗ ನಿರ್ಮಳ ಚಿದ್ಭರಿತಮಯ |
ಲಿಂಗಮೇ ಮನಸಖಿಳ ಮಹಿಮೋ |
ತ್ತುಂಗ ಷಡುಸ್ಥಲಮಾರ್ಗಪೂರಣ ಸದ್ಗುರುವೆ ವಾಕ್ಯಂ ||
ರಂಗುವೆತ್ತಿಹ ಪಂಚಮುದ್ರಾ |
ಸಂಗಚರಮೇ ಕಾಯಮಾಗಿಹ |
ಜಂಗಮದ ಶೇಷಾನ ಮಿದ ಸಲಿಸೆನುತಲೂಡಿಸಿದ || ೩೮ ||

೧ ಲಕ್ಷಗಳು (ಇ, ಉ.) ೨ ವ ನೀಡಿ (ಉ.) ೩-೩ ದವನ ಶರಿರಗಳಾದ ಭಕ್ತರ್ಗೆ (ಇ, ಉ.)

ವೇದಶಾಸ್ತ್ರಾಗಮಶ್ರುತಿಸ್ಮೃತಿ |
ಯಾದಿಯಾದ ಪ್ರೋಕ್ತಗಳ ದಾ |
ಮೋದರಂಬುಜಜಾತನೀಶ್ವರ ಮುಖ್ಯ ನಿರ್ಜರರು ||
ಶ್ರೀಧರಾಖಿಳ ತೀರ್ಥಗಳ ಮಹಿ |
ಮೋದಯ ಕ್ಷೇತ್ರಂಗಳಿಹ ಶ್ರೀ |
ಪಾದದೆಸೆವ ಮಹಾತ್ಮರುಳಿದುದೆನುತ್ತಲೂಡಿಸಿದ || ೩೯ ||

ಜನನಮಂ ಕೆಡಿಸುವುದು ಜತ್ವಂ |
ಘನಪದವ ಸಾರ್ಚುವುದು ಗತ್ವಂ |
ಮನದ ರತಿಯಂ ಪಿಂಗಿಸುವುದಾ ಮತ್ವ ಜಂಗಮದ[೧] ||
ನೆನೆಯೆ ತ್ರಿಪದವನೀವ ನಾಮದ |
ಘನಮಹಿಮರುಂಡುಳಿದುದದ ಕೊ |
ಳ್ಳೆನುತ ಶಂಕರದಾಸಿ ದೇವರದಾಸಿಗೂಡಿಸಿದ || ೪೦ ||

ಜನನಗಿರಿಗಿದು ಕುಲಿಶ ಮರಣಾಂ |
ಬುನಿಧಿಬಾಡಬನಿದು ವಿಕಾರಗ |
ಹನಕುಠಾರಮಿದಗತಿಧಾನ್ಯಘರಟ್ಟಮಿದು ಪಾಪ ||
ಘನಸಮೀರಣಮಿದು ಪ್ರಕೃತಿನಿಶಿ |
ಗಿನನದತಿ ರೋಗಕ್ಕೆ ಸಂಜೀ |
ವನದ ಮೂಲಿಕೆಯೀ ಪ್ರಸಾದವೆನುತ್ತಲೂಡಿಸಿದ || ೪೧ ||

ಮತಿಯ ಕೊಡುವುದು ಶರಣ ಸಂಗದ |
ರತಿಯ ಹುಟ್ಟಿಸುತಿಹುದು ಮೋಕ್ಷದ |
ಗತಿಯ ತೋರಿಸುವುದು ಷಡೂರ್ಮಿಯ ಪಿಂಗಿಸುತ್ತಿಹುದು ||
ಹಿತವೆನಿಸುತಿಹುದಜ್ಞದೇಳ್ಗೆಯ |
ಹತವ ಮಾಳ್ಪುದು ವೀರಶೈವೋ |
ರ್ಜಿತಕೆ ಕಾರಣಮೀ ಪ್ರಸಾದವೆನುತ್ತಲೂಡಿಸಿದ || ೪೨ ||

ಪೊಂಗಿ ನೆನೆಯಲ್ಕೇಳಿ ಸ್ಮರಿಸೆ ತ |
ದಂಗರುಜೆಗಳ ನೋಡಿದೊಡೆ ಪಾ |
ಪಂಗಳಂ ಮುಟ್ಟಿದೊಡೆ ಭವವಂ ಗೆಡಿಪುದಿದ ಕೊಳಲು ||
ಅಂಗಬಂಧವ ಬಿಡಿಸಿ ಮಹಿಮೋ |
ತ್ತುಂಗ ಭೃಕುಟಿಸ್ಥಲವ ಮೀರಿದ |
ಲಿಂಗಮಂ ತೋರಿಸುವುದೀ ಶೇಷಪ್ರಸಾದಮಿದಂ || ೪೩ ||

೧ ಮೂಜಗದ (ಇ, ಉ.)

ಕೊಳ್ಳಬೇಕೆಲೆ ತುಷ್ಟಮಪ್ಪಂ |
ತೊಲ್ಲೆನೆನದೊಗಿಸದೆ ಮಹೇಶ್ವರ |
ರೆಲ್ಲರಿಗೆ ಹರುಷದೊಳಗೂಡಿಸುತುಳಿದ ವಸ್ತುವನು ||
ಚೆಲ್ಲಬಾರದು ದಿನಚರಿಯೊಳಿದ |
ನೆಲ್ಲಮಂ ಸ್ವೀಕರಿಸಬೇಕೆಂ |
ತಲ್ಲದೊಗಿದೊಡೆ ಪಾಪವೆನುತೂಡಿಸಿದನಾ ಮಹಿಮ || ೪೪ ||

ಸಾಕು ಸವಿಯಲ್ಲಿಂದು ಮನದೊಳ |
ಗೋಕರಿಸಿದಗೆಯೊಲ್ಲದವರಿಗೆ |
ಬೇಕೆ ಕೋಯೆಂದಿತ್ತವಗೆ ನಾಚುತ್ತ ಕೊಂಡವಗೆ |
ಏಕಿದರ ಘನವೇನೆನುತೆ ಬಹು |
ಕಾಕು ನುಡಿ ಗಳಹುವಗೆಯಿಹಪರ |
ಲೋಕವಿಲ್ಲವೆನುತ್ತ ಶಂಕರದಾಸಿಮಯ್ಯಗಳು || ೪೫ ||

ಊಡಿಸಿದನಾ ಶರಣ ತನಗೊಲಿ |
ದೂಡಿಸಲು ಸ್ವೀಕರಿಸುತಂಗದೊ |
ಳೀಡಿರಿದವೊಲು ಸಲಿಸಿ ಮಿಕ್ಕ ಮಹಾಪ್ರಸಾದವನು ||
ಗಾಡಿಯಿಂದಾ ವಕ್ತ್ರಪಾದನಿ |
ಗೂಡಿಸಿದರುಳಿದ ಪ್ರಸಾದವ |
ಕೂಡೆ ಸವಿದರು ದುಗ್ಗಳೆಯು ಶಿವದಾಸಿಯರು ಮುದದಿ || ೪೬ ||

ಶಿವ ಶಿವಾ ಇಂತಹ ಪ್ರಸಾದವ |
ಸವಿದು ದರ್ಶನೆ ತೀವಿ[೧] ಹರುಷಾ |
ರ್ಣವದಳೋಲಾಡುತ್ತಲಿಹ ಸಮಯದೊಳು ಹರಶರಣ ||
ನಿವಹವಾರಿಧಿಚಂದ್ರಮಂ ಶ್ರೀ |
ಭುವನ ದೇವರದಾಸಿಮ ಶ್ರೀ |
[೨]ಭವನಿವಾರಣ ಕರುಣಿ ಶಂಕರದಾಸಿಮಯ್ಯಗಳು[೨] || ೪೭ ||

ಹೀಗೆ ಸೌಭಾಗ್ಯಾನುಬಂಧಕ |
ರಾಗಿ ಜಂಗಮದ ಪ್ರಸಾದವ |
ಭೋಗಿ[೩]ಸದೆ ಸಂತಸದೊಳಾಗಿರಲೇಕೆ ನೀವೆನಲು ||
ಆಗ ಶಂಕರದಾಸಿ ಮಹದನು |
ರಾಗದೊಳು ನಸು ನಗುತ ಪೇಳಿದ |
ನಾಗಲಾ ಸದ್ಭಕ್ತ ದೇವರದಾಸಿಮಯ್ಯನೊಳು || ೪೮ ||

---
೧ ತೇಗಿ (ಉ.) ೨-೨ ಶಿವನ ಚಿತ್ಕಳೆ ಶಂಕರಾದಾಸ್ಮಯ್ಯನಂ ನುತಿಸಿ (ಇ, ಉ.) ೩ ಕ । ರಾಗಿ (ಇ. ಉ.)

ಆಲಿಸೈ ಸಿರಿ ಘೋರ ಪಾಪದ |
ಮೂಲವಿದ ನಂಬಿರ್ದ ಮಾನವ |
ಕಾಲನಾಜ್ಞೆಗೆ ಸಿಲುಕುವನು ಸಿರಿಯಿಂದ ಫಲವಿಲ್ಲ ||
ಕಾಳು ಮಾಡುವುದಂತರಂಗವ |
ಹಾಳು ಮಾಳ್ಪುದು ಕಡೆಯ ಕಾಲಕೆ |
ಶೂಲಮಪ್ಪುದು ಕೇಳಿದರ ವಿಸ್ತಾರಮಂ ಪೇಳ್ವೆ || ೪೯ ||

ಸಿರಿಯು ಬಯಸುವುದಧಿಕ ಕಾಮಂ |
ಸಿರಿಯನಪಹರಿಸುವುದು ಕ್ರೋಧಂ |
ಸಿರಿ ಬರಲು ಹಮ್ಮಂ ಕೊಡುವುದದು ಭೋಷವಂತರೊಳು ||
ಸಿರಿಯುತನು ಸೆಣಸುವುದು ಮತ್ಸರ |
ಸಿರಿಯು ಸಂಗ್ರಹಿಸುವುದು ಲೋಭಂ |
ಸಿರಿಗೆ ಮನಮಿಕ್ಕುವುದು ಮೋಹಂ ಸಿರಿಯೆ ಷಡ್ವರ್ಗ || ೫೦ ||

ಅಣ್ಣತಮ್ಮಗೆ ತಂದೆಮಗನಿಗೆ |
ಹಣ್ಣುವುದು ಮತ್ಸರವ ತನ್ನಯ |
ಕಣ್ಣ ಮುಂದೆ ಪರರ್ಗೆ ಪೋಪುದು ಸಿರಿ ಧನಿಕ ಪರರ ||
ಹೆಣ್ಣು ಬಯಸುವ ಹೊನ್ನು ಬಯಸುವ |
ಮಣ್ಣು ಬಯಸುವ ಪರರ ಭೋಗಕೆ |
ಕಣ್ಣಿಡುವ ಕಡೆಯಲ್ಲಿ ಮುಳುಗುವ ಮಲದ ಕೂಪದೊಳು || ೫೧ ||

ಧನವ ಗಳಿಸಿದವಂಗೆ ಕಳ್ಳರು |
ಮುನಿಯುತಿಹರರಸುಗಳವನ ತ |
ಪ್ಪನೆ ವಿಚಾರಿಸುತಿಹರು ನಂಟರು ಕೇಡನೆಣಿಸುವರು ||
ತನುಜನನುಜಾಗ್ರಜರವನ ಸಾ |
ವನೆ ಬಯಸುತಿಹರಿಚ್ಛೆ ವಸ್ತುವ |
ನೆನಗೆ ತನಗೀಯೆನುತ ಸತಿಯರು ಶಾಪಿಸುತ್ತಿಹರು || ೫೨ ||

ಗಾಡಿಕಾರ್ತಿಯರೊಡನೆ ಸಂಗವ |
ಮಾಡುವಿಚ್ಛೆ ಸಮಸ್ತ ದ್ರವ್ಯವ |
ಕೂಡಬೇಕೆಂಬಿಚ್ಛೆ ಸವಿಸವಿಯಾಗಿ ಭೋಜನವ ||
ಮಾಡಬೇಕೆಂಬಿಚ್ಛೆ ಮಕ್ಕಳ |
ನೋಡಲಿಚ್ಛೆಗಳಲ್ಲದಾತಗೆ |
ಕೂಡದದು ಚಿದ್ಭರಿತ ಲಿಂಗದೊಳಿಚ್ಛೆಯೆಳ್ಳನಿತು || ೫೩ ||

ಪರರ ಕೀರ್ತಿಗೆ ಮರಗುತಿರ್ಪುದು |
ಪರರ ಮಾರ್ಗವ ಜರಿಯುತಿರ್ಪುದು |
ಪರರ ಭೋಗಕೆ ಕರುಬುವುದು ಪರನಾರಿಗೆಳಸುವುದು ||
ಪರರ ದ್ರವ್ಯವನಪಹರಿಸುವುದು |
ಸಿರಿ ತನಗೆ ಹಿತವಲ್ಲದಿಚ್ಛೆಯು |
ಬೆರೆಯದಪವರ್ಗಕ್ಕೆ ಕಾರಣವಾದ ಲಿಂಗದೊಳು || ೫೪ ||

ಮಿತ್ರರಂ ಸತ್ಕರಿಪೆನೆಂಬುದು |
ಶತ್ರುಗಳ ಸಂಹರಿಪೆನೆಂಬುದು |
ಪುತ್ರರಿಗೆ ಧನಧಾನ್ಯಗಳನಾರ್ಜಿಸಿಕೊಡುವೆನೆಂದು ||
ಜ್ಞಾತೃವಾಗಿಹುದವನ ಮನದ ಚ |
ರಿತ್ರ ಕೇಳಿಲೆ ದೇವ ಪರಮ ಪ |
ವಿತ್ರ ಸದ್ಗತಿಯರಿಕೆಯುಂಟೇ ಭೋಷವಂತರಿಗೆ || ೫೫ ||

ಬಂದ[೧]ವರ ಬಗೆಗೊಳ್ಳ ಬಡವರ |
ನಿಂದು ನುಡಿಯಿಸ ಘನಕಿರಿದನೇ |
ನೆಂದರಿಯ ನುಡಿಯಿಸೆ ಪರಾಕವಗವಿಸಿ ಮಾತಾಡ ||
ವಂದಿಸನು ಯೋಗ್ಯರಿಗೆ ಪರರಂ |
ನಿಂದಿಸುತೆ ಸದ್ಗತಿಯ ಪ್ರಾಂತದ[೨] |
ಮುಂದುಗಾಣದೆ ಮತ್ತನಾಗಿಹ ಭಾಗ್ಯವಿಮ್ಮಡಿಸಿ || ೫೬ ||

ಸ್ಥಿರಮಿದಲ್ಲೆಂದರಿಯ ದ್ರವ್ಯಮೆ |
ಹರಣನೆಂದೇ ಭಾವಿಸುತ್ತಿಹ |
ಶರಿರಮಂ ಬಿಡುತಿರ್ಪ ಕೇಳದೆ ವೀಸ ಹೋಗಲೊಡಂ ||
ಗುರು ಪಿತಾಗ್ರಜನನುಜ ತಾಯಾ |
ದರು ಹುಲಿಸಮಂ ಸೊಲ್ಲದಿಹ ಪಗ |
ಲಿರುಳು ಕೊಳ್ಗುದಿಗೊಳ್ಳುತಿಹನಾರ್ಜನೆಯ ವಾಂಛೆಯೊಳು || ೫೭ ||

ಧನಮವಗೆ ಸಾಕ್ಷಾತ ಶಿವನಾ |
ರ್ಜನೆಯೆ ಸದ್ಗತಿ ಭೋಗಮೋ ಜೀ |
ವನ ಗಳಿಸಿ ತಂದೀವವರೆ ಗುರುವನೃತವೇ ಮಂತ್ರ ||
ವನಿತೆ ಸುತರತಿಥಿಗಳು ದುರ್ವ |
ರ್ತನೆಯೆ ವಿವಿಧಾಚಾರಮಾಗಿಹ |
ವಿನಿತರಿವು ನೆಲೆಗೊಳ್ಳದವನೊಳು ಜೀಯ ಕೇಳೆಂದ || ೫೮ ||

---

೧ ಬಾಂಧ (ಇ, ಉ.) ೨ ಪಂಥವ (ಇ, ಉ.)

ಪಾಂಥದೊಳು ಪೋಪಾಗ ಚೋರರ |
ಚಿಂತೆ ನಿಜ ಮಂದಿರದೊಳಿರ್ದೊಡೆ |
ಕಾಂತೆಯರು ಕೃತ್ರಿಮವ ಮಾಡುವರೆಂದು ಪಗಲಿರುಳು ||
ಚಿಂತೆ ನೃಪ ದಾಯಾದ್ಯ ಪಿಸುಣರ |
ಚಿಂತೆಯಲ್ಲದೆ ಮೋಕ್ಷಮಾರ್ಗದ |
ಚಿಂತೆಯುಂಟೇ ಭೋಷವುಳ್ಳವಗೆಲೆ ಮಹಾಶರಣ || ೫೯ ||

ಹಿಂದೆ ಮಾಡಿದ ವಿವಿಧ ಕರ್ಮಗ |
ಳಿಂದಲೀ ಜನ್ಮದೊಳಗೈಸಿರಿ |
ಬಂದು ಪೊರ್ದುದುಮದಕೆ ಹಿಗ್ಗದೆ ತನಗದೇ ನಿತ್ಯ ||
ವೆಂದು ಬಗೆಯದೆ ಕಮಲ ಜಲದೊಳ |
ಗೊಂದಿಯುಂ ವ್ಯೆನೆನೆಯದೆಸೆದಿ |
ರ್ಪಂದದೊಳಗಿರವೇಳ್ಕು ಭಾಗ್ಯವ ಬಯಸುವಣ್ಣಗಳು || ೬೦ ||

ಒರೆವೆ ಕೇಳಾನೊಂದು ಕಾಷ್ಠಾ |
ವರಣಮಾಗಿಹ ಪುಳುವಿನಂತೈ |
ಸಿರಿ ಮನವ ಬಂಧಿಸಿದ ಮಾನವ ಬಂಧನದೊಳಿಪ್ಪ ||
ತರಣಿಯುಳುವಿನೊಳಾಶ್ರಯುವ ಕ |
ತ್ತರಿಸಿ ಪೊರಡುವೊಲ್ಯೆಸಿರಿಯ ಕೋ |
ಟರವ ಖಂಡಿಸಿ ಪೊರಡೆ ಬಂಧನಮಿಲ್ಲವಾತಂಗೆ || ೬೧ ||

ಎಂದು ಬೋಧಿಸೆ ಕೇಳಿ ಸಂತಸ |
ದಿಂದೆ ಶಂಕರದಾಸಿಮಯ್ಯಗೆ |
ವಂದಿಸಿಯೆ ಬೀಳ್ಕೊಂಡು ದಂಪತಿಯರು ನಿಜಾಲಯಕೆ ||
ಬಂದರವರುನ್ನತಿಯ ಪೊಗಳುತೆ |
ನಿಂದು ಕಂಡರು ಪೋದ ತವನಿಧಿ |
ಬಂದು ತೆಕ್ಕನೆ ತೀವಿ ಪೊರಸೂಸುವ ಮಹತ್ವವನು || ೬೨ ||

ಮೇಘದೊಡ್ಡಣೆ ತೋರೆ ನರ್ತಿಪ |
ಸೋಗೆಗಳವೊಲು ಚೂತದೆಳೆದಳಿ |
ರಾಗೆ ಹರುಷಂಗೆಯ್ವ ಪಿಕಗಳೊಲರಲಿ ಕಂಪೊಗುವ ||
ಪೂಗಳಂ ಕಂಡಾರಡಿಗಳಂ |
ತಾಗರವ ಕಂಡರಗಿಳಿಯೊಲುಂ |
ರಾಗವಂತರು ದಂಪತಿಯರಾ ತವನಿಧಿಯ ಕಂಡು || ೬೩ ||

ಹಿಂದೆ ರಾಮೇಶ್ವರನು ಬಳಸಿದೊ |
ಡೆಂದಿನಂತಿಹ ತವನಿಧಿಯು ಕೃಪೆ |
ಯಿಂದೆಮಗೆಯೊಲಿದಿತ್ತನದರಿಂದೇಳು ಮಡಿಯಾಗಿ ||
ಇಂದು ಶಂಕರದಾಸಿಯಕ್ಷಯ |
ದಿಂದಲುಕ್ಕುವ ತವನಿಧಿಯ ದಯೆ |
ಯಿಂದೆ ಕೊಟ್ಟನಲಾ ಏನುತೆ ನಲಿದಾಡಿದರು ಮುದದಿ || ೬೪ ||

ಶಿವ ಶಿವಾ ಶ್ರೀರಾಮನಾಥನೆ |
ಯವನೆ ನಿಶ್ಚಯವೆನುತೆ ಹರುಷಾ |
ರ್ಣವದೊಳಗೆ ಮುಳುಗಾಡುತಿರ್ದರು ದಂಪತಿಗಳಿತ್ತ ||
ಶಿವಶರಣಕುಲತಿಲಕ ಭಕ್ತರ |
ತವರೆನಿಪ ಸಮರಸವಿಭಕ್ತ್ಯಾಂ |
ಗ ವರ ಶಂಕರದಾಸಿಮಯ್ಯಗಳಿರ್ದರತಿಶಯದಿ || ೬೫ ||

ನೆನೆದ ಕಾರ್ಯಂ ಸಿದ್ಧಿಸಲಿ ಯೌ |
ವನಮದಾಗಲಿ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿ ಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನ ಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೬೬ ||

ಅಂತು ಸಂಧಿ ೮ಕ್ಕಂ ಪದ ೫೮೪ಕ್ಕಂ ಮಂಗಳಂ



೯ನೆಯ ಸಂಧಿ

# ಶಂಕರದಾಸಿಮಯ್ಯನು ಜಯಸಿಂಹರಾಯನ ಕೊಟ್ಟಣವನ್ನು ಮಾರಿಯರಿಂದ ಕುಟ್ಟಿಸಿದ್ದು

**ಸೂಚನೆ**

ಸಿಟ್ಟಿಪತಿ ಜಯಸಿಂಹರಾಯನ |
ಕೊಟ್ಟಣವ ಮಾರಿಯರ ಕೈಯಲಿ |
ಕುಟ್ಟಿಸಿದನೊಲವಿಂದೆ ಶಂಕರದಾಸಿಮಯ್ಯಗಳು ||

ಆದಿವರಮಧ್ಯಾಂತರಹಿತಂ |
ವೇದಶಾಸ್ತ್ರಕ್ಕನುಪಮಂ ಪೃ |
ಥ್ವ್ಯಾದಿತತ್ವಾತೀತನಪ್ರಮೆಯಂ ನಿರಾಲಂಬಂ ||
ನಾದಬಿಂದುಕಳಾವಿರಕ್ತಂ |
ಮಾಧವಾದ್ಯಮರಾರ್ಚಿತಂ ಸಾ |
ಕ್ಷಾದಖಂಡಿತಮೂರ್ತಿ ಮಹಿಮಾಧಿಕ್ಯ ಶಿವ ಜಯತು || ೧ ||

ಇಂತು ಮಹಿಮಾಕಾರಮಿರಲ |
ತ್ಯಂತ ವಿಭವದೊಳೊಂದು ದಿನಮೋ |
ರಂತೆ ಶಂಕರದಾಸಿ ಮಾಹೇಶ್ವರರ ಗೋಷ್ಠಿಯೊಳು ||
ಸಂತಸದೊಳಿಹ ಸಮಯದೊಳು ಭವ |
ನಂತರಕೆ ಬಂದೊರ್ವ ಶರಣಂ |
ಪಾಂಥಚಿಹ್ನದಿ ವಂದಿಸಿದನಾ ದಾಸಿಮಯ್ಯಂಗೆ || ೨ ||

ಕರುಣದಿಂದಾ ಭಕ್ತನಂ ಸ |
ತ್ಕರಿಸಿ ಶಂಕರದಾಸಿಮಯ್ಯಂ |
ಹರುಷದಿಂ ಬೆಸಗೊಂಡು ಸುಮುಖತ್ವದೊಳು ನೀವಾವ ||
ಪುರದೊಳಿಹಿರಿಯದೇನು ಕಾರಣ |
ಭರದೊಳಿಲ್ಲಿಗೆ ಬಂದಿರೆನಲಾ |
ಶರಣ ಕೈಗಳ ಮುಗಿದು ಬಿನ್ನಯಿಸಿದನು ಭಕ್ತಿಯೊಳು || ೩ ||

ಬಂದೆನಾ ಕಲ್ಯಾಣ ಪಟ್ಟಣ |
ದಿಂದಲಲ್ಲಿಯ ಭಕ್ತರೊಡೆಯರ |
ಗೊಂದಣಂ ನಿಮ್ಮಂಘ್ರಿಯೊತ್ತಿಗೆ ಕಳುಹಿದರು ಎನ್ನ ||
ತಂದೆನವದಿರ ಬಿನ್ನಪವ ನಾ |
ನೆಂದು ರಾಯಸವೀಯೆ ಪರಮಾ |
ನಂದದೊಳು ಕಣ್ಗೊತ್ತಿ ಮಂಡೆಯೊಳಿರಿಸಿದಂ ಮಹಿಮ || ೪ ||

ಆದುದಿಂದೆಮಗಖಿಲವಹ ಸಘ |
ಲೋದಯಂ ಶಿವ ಶಿವ ಎನುತ ಮೋ |
ಕ್ಷಾಧಿಪತಿಯಹ ದಾಸಿಮಯ್ಯಗಳೊಲಿದು ರಾಯಸವ ||
ಆ ದಯಾಂಬುಧಿ ವಕ್ತ್ರಪಾದ ಗ |
ಣಾಧಿಪನ ಕರೆದಿತ್ತು ನೀಸಿದ |
ನೋದೆನಲು ಚಂದ್ರಿಕೆಯ ತೆಗೆದೋದಿದನದೇನೆಂಬೆ || ೫ ||

ಸ್ವಸ್ತಿ ಶ್ರೀಮದಮಲಚರಿತ ವಿ |
ನ್ಯಸ್ತಕರ್ಣಶ್ರಾವ್ಯಕೀರ್ತಿಗ |
ಭಸ್ತಿದಿಕ್ಪೂರಣ ಷಡುಸ್ಥಲಮಾರ್ಗದಾಚಾರ್ಯ ||
ಸುಸ್ಥಿರಾಧಿಕವೀರಶೈವಪ್ರ |
ಶಸ್ತ ಘನಶೈವಾಗಮಾಹ್ವಯ |
ವಿಸ್ತರಣ ಸುಜ್ಞಾನಿ ಶಂಕರದಾಸಿಮಯ್ಯಗಳ || ೬ ||

ಶ್ರೀಮದಮಲ ಪದಾಬ್ಜಗಳಿಗು |
ದ್ದಾಮ ಕಲ್ಯಾಣದ ಮಹೇಶ್ವರ |
ಸ್ತೋಮ ಸಾಸಿರ ದೀರ್ಘದಂಡನಮಸ್ಕರವ ಮಾಡಿ ||
ಪ್ರೇಮ ಬಿನ್ನಪ ನಿಮ್ಮ ಕೀರ್ತ್ಯು |
ದ್ದಾಮಮಂ ಕೇಳ್ದೆಮ್ಮ ನಗರ |
ಸ್ವಾಮಿಯಹ ಜಯಸಿಂಹ ಭೂಪತಿ ತಮ್ಮ ಬಳಿಗೆಮ್ಮ || ೭ ||

ಕರೆಯಿಸಿದನತಿಪ್ರಿಯ ಮುಖದಿಂ |
ದೊರೆದ ಮುದನೂರೊಳಗೆ ಮಹಿಮಾ |
ವರಣ ಶಂಕರದಾಸಿಮಯ್ಯಗಳೆಂಬ ಪೆಸರಾಂತ ||
ಶರಣನಿರ್ದಪನಂತೆಯಾತನ |
ಚರಣದರ್ಶನವಾಗಬೇಕೆಮ |
ಗರರೆ ನೀವಾ ಮಹಿಮನಂ ಬಿಜಯಂಗಯಿಸಿ ತಂದು || ೮ ||

ತನಗೆ ತೋರಿಸಬೇಕು ಶ್ರೀಘ್ರದೊ |
ಳೆನೆ ತಥಾಸ್ತುವೆನುತ್ತೆ ನಿಮ್ಮಡಿ |
ವನಜಕತಿ ಬಿನ್ನೈಸಿ ಕಳುಹಿದೆವೆಮ್ಮ ಬಿನ್ನಪವ ||
ಘನಮಹಿಮ ಪಾಲಿಪುದು ನೀವೆ |
ಮ್ಮನು ಕೃತಾರ್ಥರ ಮಾಡ ಬರಬೇ |
ಕೆನಿತು ಬಿನ್ನಪವೆನಲು ಶಂಕರದಾಸಿಮಯ್ಯಗಳು || ೯ ||

ಕೇಳಿ ಸಂತೋಷಾಂಬುನಿಧಿಯೊಳ |
ಗಾಳಿ ದೇವರದಾಸಿಮಯ್ಯಗೆ |
ಹೇಳಿ ವಂದಿಸಿ ದುಗ್ಗಳಮ್ಮನಿಗೆರಗಿ ಸದ್ಭಕ್ತ ||
ಜಾಳಕಾನತನಾಗಿಯವರನು |
ಬೀಳುಕೊಂಡು ಸಮಸ್ತ ಸುರಭೂ |
ತಾಳಿಸಹಿತಂ ತೆರಳಿದಂ ವಾದ್ಯಪ್ರಘೋಷಣದಿ || ೧೦ ||

ರೂಢಿಯೊಳಗಿರ್ದನ್ಯ ದೈವಗ |
ಳೋಡುವಂದದಿ ಪರಸಮಯಮುಖ |
ಬಾಡುವಂದದಿ ದೆಸೆ ಧರಣಿ ತೆರಪಿಲ್ಲವೆಂಬಂತೆ ||
ನೋಡುವರ ಕಣ್ಣೆವೆಗಳನಿತಲು |
ಗಾಡದಂದದಿ ಶಿವಸಮಯ ಕೊಂ |
ಡಾಡುವಂದದಿ ತೆರಳಿದನು ನವಿಲೆಯ ಪುರಾಧೀಶಂ || ೧೧ ||

ಬಡಿವ ಬಹುವಾದನ ರವಕೆ[೧] ದೆಸೆ |
ನಡುಗುವಂದದಿ ಸಕಲ ದೇವರ |
ಪಡೆಯ ಭಾರಕೆ ಧರಣಿ ಕುಸಿವಂತೈದಿದರು ಮುಂದೆ ||
ಎಡೆಯೊಳವೆ ಎಂಬಂತೆ ಗಗನದಿ |
ಜಡಿವ ಠಕ್ಕೆಯದೇಳ್ಗೆಗಿನ ವಿಧು |
ನಡೆಯುದಕೆ ಪಥವಿಲ್ಲವೆಂಬಂತೊಲಿದು ತೆರಳಿದರು || ೧೨ ||

ನಂದಿಮುಖದ ಮಹಾತ್ಮನನ್ವಯ |
ತಾಂಧಭಾಸ್ಕರ ಲಿಂಗಪೂಜಾ |
ನಂದ ಭಾಳಾಂಬಕದ ಬಲ್ಲಹ ವೇದಶಾಸ್ತ್ರಜ್ಞ ||
ಸ್ಕಂದಶಿಲೆಯ ಪುರಾಧಿನಾಯಕ |
ನಿಂದುಧರಪ್ರತಿಪಾದನಾರ್ಯಂ |
ಬಂದನಾ ಕಲ್ಯಾಣನಗರೇಶ್ವರನ ಸನ್ನಿಧಿಗೆ || ೧೩ ||

---

೧ ವಾದ್ಯದ ರಭಸದಲಿ (ಇ.)

ದಾರಿಯೊಳು ಕಂಗೆಸೆವ ಸಿಂಗರ |
ದೋರಣಂಗಳ ನೋಡುತಂ ವಿ |
ಸ್ತಾರ ಛಾಯಾವೃಕ್ಷ ಪದ್ಧತಿಗಳ ನಿರೀಕ್ಷಿಸುತ ||
ಸಾರಸಂಗ್ರಹದರವಟಗೆಗಳ |
ಸೇರುವೆಯನಾಲೋಕಿಸುತ್ತಂ |
ಚಾರು ಕೀರ್ತ್ಯಾವರಣ ಶಂಕರದಾಸಿ ನಡೆತಂದ || ೧೪ ||

ಬಂದ ಜಿನಮತನಳಿನವಾರಣ |
ಬಂದ ಬೌದ್ಧಾರಣ್ಯಪಾವಕ |
ಬಂದ ಚಾರ್ವಾಕಪ್ರದೊಡ್ಡಣೆಗತುಳಭಯವಾತ ||
ಬಂದ ಸೌರಮತಂಗಕೇಸರಿ |
ಬಂದ ಸಾಂಖ್ಯಕುರಂಗವ್ಯಾಘ್ರಂ |
ಬಂದ ಮೀಮಾಂಸಕತಿಮಿರಮಾರ್ತಂಡನುದ್ದಂಡ || ೧೫ ||

ಬಂದ ವೈಷ್ಣವಮತನಿವಾರಣ |
ಬಂದ ವೈಖಾನಸಭಯಂಕರ |
ಬಂದನನುಪಮ ಪಂಚರಾತ್ರಿಕಮತನಿವಾರಣನು ||
ಬಂದ ಪೌರಾಣಿಕರ ದಲ್ಲಣ |
ಬಂದ ಯಾಜ್ಞಿಕಮತಗೆಡುಕನಿದೆ |
ಬಂದನೆಂದೊದರಿದುವು ಬಿರುದಿನ ಕಹಳೆ ಘೋಷದೊಳು || ೧೬ ||

ಬಂದ ಶೈವಾಚಾರದೂಷಣ |
ಬಂದ ಶಾಕ್ತೇಯಪವನಫಣಿಪತಿ |
ಬಂದ ಗಾಣಾಪತ್ಯನಿಕರಪಿಪೀಲಿಭಲ್ಲೂಕ ||
ಬಂದ ಕಾಪಾಲಿಕರ ಖಂಡನ |
ಬಂದ ಭಾಟಘರಟ್ಟಮೂರುತಿ |
ಬಂದನೆಂದೊದರಿದುವು ಬಿರುದಿನ ಕಹಳೆ ಘೋಷದೊಳು || ೧೭ ||

ವಾದನಧ್ವನಿಗೇಳ್ದು ಕಲ್ಯಾ |
ಣಾಧಿಪತಿ ಜಯಸಿಂಹ ಭೂವರ |
ನಾದಿಯೊಳಗಿಲ್ಲದ ವಿಡಾಯದಿ ಬಂದಿದಿರ್ಗೊಂಡ ||
ಆ ದಯಾಂಬುಧಿ ದಾಸಿಮಯ್ಯನ |
ಪಾದಗಾಣಿಕೆಯಿಟ್ಟು ನಮಿಸಿ ಶು |
ಭೋದಯದಿ ನಿಜಪುರಕೆ ಬಿಜಯಂಗಯಿಸಿ ತಂದನಲಾ || ೧೮ ||

ಅಂಗ ಮಗಧ ಕರಾಳ ಸಿಂಧು ಕ |
ಳಿಂಗ ಕೇರಳ ತುಳುವ ಸಿಂಹಣ |
ವಂಗ ಬರ್ಬರ ಗೌಳ ಖರ್ಪರ ಚೋಳ ನೇಪಾಳ ||
ಕೊಂಗ ಪಾರಿಷ ತುರುಕುವಾಡ್ಯ ತೆ |
ಲುಂಗ ಗುರ್ಜರ ದೇಶನಾಥರ |
ಸಂಗಸಹಿತೋಲೈಸಿ ಬಂದ ನರೇಂದ್ರನತಿಶಯದಿ || ೧೯ ||

ಪಾರಿಯಾತ್ರ ಪುಳಿಂದ ಘನ ಗಾಂ |
ಧಾರ ಭೋಟ ಕರಾಟ ಶ್ರವಣಂ |
ಚಾರು ಮಾಳವ ಜಿನ್ನ ಬಾಲ್ಹಿಕ ಲಾಳ ಪಂಚಾಳ ||
ಧಾರುಣೀಪತಿಗಳ ವಿಡಾಯದಿ ಭೂ |
ರಮಣ ಜಯಸಿಂಹ ಮಹಿಮಾ |
ಪೂರ ಶಂಕರದಾಸಿಮಯ್ಯನನೋಲಯಿಸಿ ನಡೆದ || ೨೦ ||

ಲಲನೆಯರ ನಡೆ ಎನುತೆ ದಂತಾ |
ವಲಘಟೆಯೆ ಸಾರೆನುತೆ ತುರಗಾ |
ವಳಿಯ ಸಂದಣಿ ಬಿಡಿಸುತಂ ತೇರುಗಳ ಪೌಜುಗಳ ||
ತೊಲಗಿಸುತೆ ಪೊಯಿಪೊಯಿದು ನಿಜ ಪೆ |
ರ್ಬಲವನೊತ್ತರಿಸುತ್ತೆ ವಿಭವದಿ |
ನೆಲದೊಡೆಯ ಜಯಸಿಂಹ ಕಟ್ಟಿಗೆವಿಡಿದು ನಡೆತಂದ || ೨೧ ||

ಡಾಳಯಿಸುತಿಹ ಕನಕ ಚಾಮರ |
ದೋಳಿಯಿಂದೊಲಿದೊಲಿದು ಶೈತ್ಯದ |
ಗಾಳಿಯಿಂ ಕೊನರಿಸುವ ವ್ಯಜನಾಹ್ವಯದ ಪೊಸ ಮುತ್ತು ||
ಮೇಳಯಿಸಿ ರಾಜಿಸುವ ಸಿತ ಛ |
ತ್ರಾಳಿಯಿಂ ದಿಗಿಲಿಸುತಲೆರಪರ |
ಭಾಳಗಳ ಪಿಡಿದೆತ್ತುತೈದಿದ ದಾಸಿಮಯ್ಯಗಳು || ೨೨ ||

ವೀರಶೈವಾಚಾರ್ಯ ಪಾಪವಿ |
ದೂರ ಸಮರಸಭಕ್ತಿಪಾರಾ |
ವಾರನೆನಿಸುವ ಕರುಣಿಶಂಕರದಾಸಿಮಯ್ಯನಿಗೆ ||
ಧಾರುಣೀಪತಿ ಸಕಲಗುಣವಿ |
ಸ್ತಾರ ನೃಪ ಜಯಸಿಂಹ ನಗರದ |
ಕೇರಿಗಳ ತೋರಿಸುತೆ ನಡೆದನು ಭಕ್ತಿಭಾವದೊಳು || ೨೩ ||

ಚಾರುತರದೊಳಗೊಪ್ಪುತಿಹ ಮಣಿ |
ದೋರಣಗಳುಪ್ಪರ ಗುಡಿಯ ಕ |
ಸ್ತೂರಿಕಾ ಸಾರಣೆಯ ಮುತ್ತಿನ ರಂಗವಲ್ಲಿಗಳ ||
ತೋರಿಸುತೆ ನವರತ್ನರಂಜನ |
ದಾರತಿಯನೆತ್ತಿಸುತೆ ಹರುಷದಿ |
ಧಾರುಣೀಪತಿ ವಿಸ್ತರಿಸಿ ತೋರಿದನು ವೀದಿಗಳ || ೨೪ ||

ಜೀಯ ಚಿತ್ತೈಸೈ ಮಹಾಬಲ |
ನಾಯಕರ ಮನ್ನೆಯರ ರಾವುತ |
ಪಾಯಕರ ಮಾವುತರ ಜೋಧರ ರಥಿಕ ಸಾರತರ ||
ಗಾಯಕರ ಮಾಗಧರ ದೇಶದ |
ರಾಯರತುಳ ಪರಾಕ್ರಮಿಗಳ ವಿ |
ಡಾಯದಿಂದಿಹ ಕೇರಿಗಳುಮಿವೆಯೆಂದ ಭೂಪಾಲ || ೨೫ ||

ದ್ವಿಜರನಿನಚಂದ್ರಾನ್ವಯರ ಭಾ |
ನುಜರ ಶೂದ್ರರ ಶ್ರಾವಕರ ವಾ |
ಣಿಜರ ಮಧುಕರ್ಮರ ಕುಲಾಲರ ವಸ್ತ್ರಭಿನ್ನಕರ ||
ಧ್ವಜಕ ವಸ್ತ್ರಕ ಚರ್ಮಕಾರಕ |
ರಜಕ ನಂದಕ ನೇಣುಕೃತ ಸೂ |
ತಜರ ಕೇರಿಗಳನು ನೃಪತಿ ತೋರಿದ ಮಹಾತ್ಮನಿಗೆ || ೨೬ ||

ಸುಕವಿಗಳ ಶಾಸ್ತ್ರಾಗಮಿಕ ಭಾ |
ವಕ ಕಲಾವಿದ ಪೇರಣಿಗ ವಾ |
ದ್ಯಕರ ಶಿಲ್ಪಿಗ ಹೇಮತಾಟಕ ಕಾಂಸ್ಯಕೃತ್ಯಕರ ||
ವಿಕುಜ ಗಾರುಕ ವೈದ್ಯ ವಿಟ ಚಿ |
ತ್ರಕರ ಪೂವಡಿಗರ ಸುಗಂಧಾ |
ಧಿಕರ ಕೇರಿಗಳಿರವ ಚಿತ್ತೈಸೆನುತರಸ ನಡೆದ || ೨೭ ||

ಹೊಳೆವ ಮಣಿಮುಂಬಾಗಿಲಿಕ್ಕೆಲ |
ದೊಳಗೆ ಮಿರುಗುವ ಪಸೆಯ ಜಗುಲಿಯ |
ಕಳಕಳಿಪ ಕಂಬಗಳ ಗಾಜಿನ ಘಟ್ಟಣೆಯ ನೆಲದ ||
ಕಳಶದುಪ್ಪರಿಗೆಗಳ ಮಿಗೆ ಪ್ರ |
ಜ್ವಳಿಪ ಗುಡಿತೋರಣಗಳಿಂ ಕಂ |
ಗೊಳಿಸಿ ರಾಜಿಪ ಸೂಳೆಗೇರಿಯ ತೋರಿಸಿದ ನೃಪತಿ || ೨೮ ||

ಪೊಂಗ ಸದುಪ್ಪರಿಗೆ ರಾಜಿಸು |
ವಂಗಡಿಯ ಸಾಲುಗಳ ಮತ್ತಮು |
ತಂಗಸಾಲೆಯ ವಾಯುವೇಗ ತುರಂಗ ಮಂದಿರವ ||
ಸಿಂಗರದ ಚಾವಡಿಗಳಿಂದು[೧] |
ತ್ತುಂಗ ಗಾಡಿಯೊಳೊಪ್ಪುವರಮನೆ |
ಯಂಗಮಂ ತೋರಿಸುತೆ ಬಿಜಯಂಗೆಯಿಸಿದಂ ನೃಪತಿ || ೯ ||

ಮಣಿಮಯದ ಪೀಠದೊಳು ಶರಣಾ |
ಗ್ರಣಿಯ ಮೂರ್ತಂಗೊಳಿಸಿ ನೃಪಜನ |
ಮಣಿ ಹರುಷದಿಂದರ್ಘ್ಯಪಾದ್ಯಾಚಮನಮಂ ಮಾಡಿ ||
ಫಣಿಯನಂಘ್ರಿಗೆ ಚಾಚಿ ನಿಂದನು |
ಗಣಿಸಬಾರದ ಭಕ್ತಿಯಿಂ ಸ್ತ್ರೀ |
ಗಣವ ಕರೆಯಿಸೆ ಬಂದರೊಲವಿಂ ತಂಡತಂಡದೊಳು || ೧೦ ||

ಮುತ್ತುಮಾಣಿಕದಾರತಿಯ ತಂ |
ದೆತ್ತಿದರು ನೃಪನಾರಿ[೨]ಯರು ಶರ |
ಣೋತ್ತಮಗೆ ಶಿವದೇವಿಯರಿಗೊಲವಿಂದೆ ಕಾಣಿಕೆಯ ||
ನಿತ್ತು ವಂದಿಸಿ ದಾಸಿಮಯ್ಯಗ |
ಳಿತ್ತರದಿ ನಿಂದರು ನೃಪಾಲಕ |
ನೆತ್ತಿಮಣಿ ಜಯಸಿಂಹ ಕೈಮುಗಿದೆಂದನಿಂತೆಂದು || ೧೧ ||

ಶರಣಮಣಿ ನೀವೆನ್ನ ಮನೆಯೊಳು |
ಕರುಣದಿಂದಿರವೇಳ್ಕೆನಲು ಶಿವ |
ಶರಣತತಿ ನಾವಿರ್ದ ಬೀಡಾರಕ್ಕೆ ಸಂತಸದಿ ||
ಬರುತ ಪೋಗುತ್ತಿಹರು ನಮಗನು |
ಬರದು ನಿಮ್ಮರಮನೆಯೊಳಿಹುದೆಂ |
ದೊರೆಯಲಾ ಜಯಸಿಂಹ ನಗರದೊಳೊಂದು ಮಂದಿರವ || ೧೨ ||

ಸವನಿಸಿಯೆ ಸಿಂಗರಿಸಿ ಬೇಗದೊ |
ಳವರ ಬಿಜಯಂಗೈಸಿ ತಂದಾ |
ಭವನದೊಳಗಿಂಬಿಟ್ಟು ನಿಂದಿರೆ ಪೋಗು ನೀ ನಿನ್ನ ||
ಭವನಕೆಂದು ನಿರೂಪಿಸಲು ಭೂ |
ಧವನು ಶಂಕರದಾಸಿಮಯ್ಯನಿ |
ಗವನತಂಗೈದೊಲಿದು ಬೀಳ್ಕೊಂಡಂ ನಿಜಾಲಯಕೆ[೩] || ೧೩ ||

---

೧ ಚಾವಡಿಯ ಮಹಿಮೋ (ಇ, ಉ.) ೨ ನೀ (ಇ, ಉ.) ೩ ರಾಣಿ (ಇ, ಉ.)

ಶಿವ ಶಿವಾ ಕಲ್ಯಾಣಮೊಳಗಿಹ |
ಶಿವಶರಣತತಿ ದಾಸಿಮಯ್ಯನ |
ಭವನಕೈತಂದೊಲಿದು ಶರಣಾರ್ಥಿಯನೊರೆಯಲೊಡನೆ ||
ಅವನತಂಗೈದೊಲಿದು ಸುಪ್ರೀ |
ಮ ವಚನಂಗಳನಾಡಿ ಹರುಷದೊ |
ಳವರ ಮೂರ್ತಂಗೊಳಿಸಿ ಭಸಿತವನಿತ್ತರೇನೆಂಬೆ || ೩೪ ||

ಇಂತು ದಾಸ್ಮಯ್ಯನ ಬಳಿಯಲೋ |
ರಂತೆ ಮಾಹೇಶ್ವರನಿಕಾಯಂ |
ಸಂತಸದೊಳೆಸೆದಿರ್ಪ ಸಮಯದೊಳೊರ್ವ ಶಿವಶರಣ ||
ಚಿಂತಿಸುತ್ತಿರೆ ಕಂಡದೇತಕೆ |
ಮಂತಣಂ ನಿಮಗಾದುದೆಂದ |
ತ್ಯಂತ ಮರುಕದಿ ದಾಸಿಮಯ್ಯಂ ಕೇಳಲಾ ಶರಣ || ೩೫ ||

ಕರವ ಮುಗಿದಿಂತೆಂದನೀ ಪೊಳ |
ಲರಸನರಸಿಗೆಯೊಂದು ರುಜೆಯಂ |
ಕುರಿಸಿ ಮಾಣದೆ ಕಾಡುತಿರೆ ದುಃಖದೊಳು ಜಯಸಿಂಹ ||
ಧರಣಿಪಾಲಕನೊರ್ವ ಕಣಿಯಳ |
ಕರೆಸಿ ಕೇಳಲ್ಕವಳೊರೆದಳೀ |
ಪುರದ ಮಾರಿಯು ಮಸಣಿಯುಂ ನೆರೆ ಪಿಡಿದರೆಂದೊಲಿದು || ೩೬ ||

ಬಿಡುವುದಕೆ ಬಗೆಯಾವುದೆಂದಾ |
ಪೊಡವಿಪತಿ ಜಯಸಿಂಹ ಕೇಳಲು |
ನುಡಿದಳಾ ಕಣಿಯುವಳು ಮಾರಿಗೆ ಮಸಣಿಗೊಲವಿಂದೆ ||
ಸಿಡಿಯು ಹಗ್ಗದ ಹುರಿಯು ಪಲ್ಲವ |
ದುಡಿಗೆಗಳನುಟ್ಟಾಗ ಬಾಯೊಳ |
ಗಿಡಿದ ಬೀಗಗಳಿಂದ ಪೋಗಿಯು ದೇವಿಯರ ಮುಂದೆ || ೩೭ ||

ಮುಂದಲೆಯ ಮುಡುಹಿನ ತೊವಲ ಕೊಯಿ |
ತಂದಿರಿಸಿ ಕುರಿಕೋಣಕುಕ್ಕುಟ |
ಹಂದಿಗಳ ಶಿರವರಿದು ರಕ್ತದ ಕೂಳರಾಸಿಯನು ||
ತಂದು ಸುರಿಯಿಸಿ ಕಳ್ಳೊಡಂಗಳ |
ಗೊಂದಣವ ಸಾಲಾಗಿರಿಸಿ ನೀ |
ವಂದಿಸಾ ದಿನವರಸಿಯನು ಪಿಡಿದಿರ್ದ ಬಲುರೋಗ || ೩೮ ||

ಮಾಣಬೇಕೆರಕಾಟ ಭೈರವ |
ನಾಣೆ ನಂಬೀ ಮಾತನಾಕೆಗೆ |
ಮಾಣದೊಡೆ ಹೊತ್ತವು ಜಡೆಯೆ ಪಿಡಿದಿಹುದು ಕೊಡೆಯಲ್ಲ ||
ಮಾಣುವೆನು ನಾ ಕಣೆಯ ಪೇಳ್ವುದ |
ಊಣೆಯಲ ಮಾತಿನ ನಿಜವ ನೀ |
ಕಾಣಬೇಕಾದೊಡೆಯೊಲಿದು ಬಹ ಮಂಗಳೋರಕ್ಕೆ || ೩೯ ||

ಮಾಡಿಸೆನೆ ನರಸಿಂಹ ನೃಪತಿನಿ |
ಬೀಡಿಲಿದ್ದವರೆಲ್ಲರಕ್ಕಿಯ |
ಮಾಡಿ ಬೇಗದೊಳೆನುತೆ ಕೊಟ್ಟಣವೀಯುತೆಮಗೈದು ||
ಗೂಡೆ ಬತ್ತವನಿತ್ತರಕ್ಕಿಯ |
ಮಾಡಲಾರದೆ ಬಸುರ ಹೆಂಡತಿ |
ಬಾಡುತ್ತೈದಳೆಯಿದಕೆ ಬಗೆಯೇನೆಂದು ಚಿಂತಿಸಿದೆ || ೪೦ ||

ಎಂದು ಬಿನ್ನೈಸಲ್ಕೆ ನಸು ನಗೆ |
ಯಿಂದ ಶಂಕರದಾಸಿಮಯ್ಯಾಗ |
ಳೆಂದರಾ ಕೊಟ್ಟಣದ ನೆಲ್ಲೋಗರದ ರಾಸಿಗಳ ||
ತಿಂದು ತೇಗುವ ಮಾರಿಮುಸಣಿಯ |
ಮುಂದೆ ನಿಮಗಿತ್ತೈಸು ಬತ್ತವ |
ತಂದು ಸುರಿದೊಡೆ ತಾವೆಯಕ್ಕಿಯ ಮಾಡಿ ತಂದಪರು || ೪೧ ||

ನಾವು ಕಳುಹಿದೆವೆಂದು ಪೇಳಾ |
ದೇವತಿಯರಿಗೆ ಬೇಗ ಬತ್ತವ |
ನೀವು ಕೊಂಡೊಯ್ದುವರ ಗುಡಿಯೊಳು ಸುರಿದು ಬಾಯೆನಲು ||
ತೀವಿದಾನಂದದೊಳಗೆದ್ದು ಶು |
ಭಾವರಣ ದಾಸಯ್ಯಗಳ ಪದ |
ದಾವರೆಗೆ ವಂದಿಸಿ ಭರದಿ ಬೀಳ್ಕೊಂಡನಾ ಶರಣ || ೪೨ ||

ಬೇಗ ಬತ್ತವ ಹೇರಿಕೊಂಡತಿ |
ಪೋಗಿ ಮಾರಿಯ ಮುಸಣಿಯರ ಮುಂ |
ಬಾಗಿಲೊಳು ಸುರಿದೆಂದ ಶಂಕರದಾಸಿಮಯ್ಯಗಳು ||
ಈಗಲಕ್ಕಿಯ ಮಾಡಿ ನಿಮ್ಮನೆ |
ಬೇಗ ತರಹೇಳಿದರೆನಲ್ಕನು |
ರಾಗದಿಂದಾ ಮಾರಿಮುಸಣಿಯರೆಂದರಾತನೊಳು || ೪೩ ||

ಬದುಕಿದೆವು ನಾವಿನ್ನು ಮಿಗೆ ಕರು |
ಣದೊಳು ನಮಗೊಂದೂಳಿಗವನಿ |
ತ್ತುದೆ ಮಹಾ ಮನ್ನಣೆಯದಲ್ಲದೆ ನಮಗೆ ಬತ್ತವನು ||
ಮಿದಿವೆವಿರುಳಿಗೆ ತಳಿಸಿದಕ್ಕಿಯ |
ನುದಯದೊಳು ತಂದೊಪ್ಪಿಸುವೆವಿಂ |
ತು ದಯದಿಂ ಶಿವಶರಣಗಪ್ಪುದು ನಮ್ಮ ಭಾಗ್ಯವಲಾ || ೪೪ ||

ಆ ಶರಣನಂ ಕಳುಪಿ ಬತ್ತದ |
ರಾಸಿಯೊಳಗರೆ ಸೆರೆಯು ಧಾನ್ಯವು |
ಸೂಸಿದೊಡೆಯುಪರಾಧ ಬಂದಪುದೆಂದು ಭೀತಿಯೊಳು ||
ಸೂಸದಂದದಿ ಜೊಳ್ಳ ಮೊರದೊಳು |
ಬೀಸಿ ಕಲ್ಮಣ್ಣಿಲ್ಲದಂದದೊ |
ಳೈಸು ಬತ್ತವ ಕೇರಿದರು ಹೆಮ್ಮಾರಿ ಮಸಣಿಯರು || ೪೫ ||

ಕರದ ಶೂಲದೊಳಗಿದು ಮಾಡಿದ |
ವೊರಳ ಪಿಡಿದಿಹ ಡಮರುಗವನೇ |
ಪಿರಿಯ ಕುಂದಣಿ ಮಾಡಿ ಖಡ್ಗದೊಳರಳಿಯಾಲಗಳ ||
ಮರನ ತರಿದೊನಕೆಗಳ ಮಾಡತಿ |
ಹರುಷದಿಂ ಬತ್ತವ ಮಿದಿದರಾ |
ಶರಣ ಶಂಕರದಾಸಿಮಯ್ಯನ ಪಾಡುತೊಲವಿಂದೆ || ೪೬ ||

ಸುವ್ವಿ ಶಿವಭಕ್ತಾಗ್ರಗಣ್ಯಂ |
ಸುವ್ವಿ ಭಾಳಾಂಬಕದ ದೇವಂ |
ಸುವ್ವಿ ವೃಷಭಾನನ ಮುಖಾಡದ ವದನ ಗುಣಸದನ ||
ಸುವ್ವಿ ಶಿಖಿಪುರದಾದಿನಾಯಕ |
ಸುವ್ವಿ ಜಂಗುಳಿದೈವದೊಡೆಯಂ |
ಸುವ್ವಿ ಶಂಕರದಾಸಿಮಯ್ಯಾ ಎಂದು ಪಾಡಿದರು || ೪೭ ||

ಬಾಳು ಬಾಳೆನ್ನೊಡೆಯ ನೀ ಸುಖ |
ಬಾಳು ಪರಸಮಯಾರ್ಣವಾನಲ |
ಬಾಳು ಮರೆಯೊಕ್ಕವರ ರಕ್ಷಿಸಿ ಮಲೆತ ದೈವಗಳ ||
ಹಾಳು ಮಾಡುವ ಕಿಚ್ಚುಮುಖ ಸುಖ |
ಬಾಳು ಶಿವಸಮಯಾಬ್ಧಿಚಂದ್ರಮ |
ಬಾಳು ಶಂಕರದಾಸಿಮಯ್ಯಾ ಎನುತ ಪಾಡಿದರು || ೪೮ ||

ಎಮ್ಮ ರಕ್ಷಿಸು ಒಡತಿ ಶಿವದಾ |
ಸಮ್ಮ ನೆರೆ ಮುತ್ತೈದೆಯಾಗಿರು |
ಎಮ್ಮ ಸಾಕುವ ವಕ್ತ್ರಪಾದಮುನೀಂದ್ರ ಸುಖಬಾಳು ||
ಎಮ್ಮ ದಹಿಸದೆ ಪಾಲಿಸಿದ ನೆರೆ |
ಧರ್ಮಿ ಶಂಕರದಾಸಿ ಬಾಳೆನು |
ತುಂ ಮಿದಿದರಾ ಬತ್ತವೆಲ್ಲವ ಮಾರಿಮುಸಣಿಯರು || ೪೯ ||

ಕೇರಿದರು ತಲೆ ವ್ಯೆ ಮೊಗಂ ತವು |
ಡೇರುವಂದದಿ ಪೊಳ್ಳು ಪೋಪೊಲು |
ತೂರಿ ನಿರಿಯೋಳೊನೆದು ತೆಗೆದರು ನೆಲ್ಲಹೊಟ್ಟುಗಳ ||
ಕೋರೆದಾಡಿಯ ಬೆಳಗಿನೊಳು ಭರ |
ವೇರಿ ನಿಂದಕ್ಕಿಯ ತಳಿಸಿಯೆದೆ |
ಯಾರಿ ಬಳಲುತೆ ರಾಸಿ ಮಾಡಿದರುಗ್ರದೇವಿಯರು || ೫೦ ||

ಕತ್ತಲೆಗೆ ತಾರಕೆಗಳಲ್ಲದೆ |
ಪೊತ್ತರೆಗೆ ತಾರಕೆಗಳೇ ಬಲು |
ಮಿತ್ತೆನಿಸುವರು ಲೋಕದವರಿಗೆ ಮಾರಿ ಮುಸಣಿಯರು ||
ತೊತ್ತಿರಂದದಿ ಶಿವಶರಣರೊಲಿ |
ದಿತ್ತ ಕೆಲಸವ ಮಿರಿದರೆ ತಲೆ |
ಯೊತ್ತು ಮಾಡಿದರೆಂತುಟೋ ಮಾಹೇಶ್ವರರ ಮಹಿಮೆ || ೫೧ ||

ಥಳಸಿದಕ್ಕಿಯನಿಬ್ಬರುಂ ಕಂ |
ಬಳಿಯೊಳೊಗದೊಲು[1] ಕಟ್ಟಿ ಶಿರದೊಳು |
ತಳೆದು ಮರುದಿನದುದಯಕಾಲದಿ ಬಂದರೇನೆಂಬೆ ||
ಪೊಳೆವ ದಾಡೆಯ ಜುಂಜುದಲೆ ಬ |
ಕ್ಕಳಿಸಿದೊಡಲ್ಗಳ ಜೋಲು ಮೊಲೆಗಳ |
ಬಳಲುಗಾಲ್ಗಳ ಬಿಟ್ಟ ಬಾಯ್ಗಳ ನೀಳ ನಾಲಗೆಯ || ೫೨ ||

ಕಾಳ ಮೋರೆಯ ಲಂಬಕರ್ಣದ |
ಭಾಳದೊಳು ಪೊಸ ರುಧಿರ ತಿಲಕದ |
ತೋಳುಗಳ ಸುತ್ತಿದ ಕರುಳ ಕಾಳಿಜದ ಭೂಷಣದ ||
ಹೇಳಲೇಂ ತಲೆಮಾಲೆಗೊರಳಿನ |
ಭಾಳಬಟ್ಟಲ ರಕ್ತಗಂಗಳ |
ಮೇಳದಿಂ ನಡೆತಂದರೊಲಿದಾ ಮಾರಿಮುಸಣಿಯರು || ೫೩ ||

---

೧ ಳಗೆ ಪೊರೆ (ಇ.)

ನಗುತಲಾಗುಳಿಸುತ್ತಲಳುತಂ |
ಮೊಗವನೊಲೆಯುತೆ ತೋಳ ಬೀಸುತೆ |
ನೆಗೆಯುತೆಡವುತೆ ತಟತಟಿಸಿ[೧] ಕುಳ್ಳಿರುತಲವ್ವಳಿಸಿ ||
ಹೊಗರೆಸೆವ ಕೆಂಬಲ್ಲ ಮುಚ್ಚುತೆ |
ತೆಗೆಯುತಾ ದೈತೆಯರು ಬಂದರು |
ನಗರದೊಳಯಿಕೆ ಕಂಡು ಮುರಿದೋಡಿದುದು[೨] ಪೌರಜನ || ೫೪ ||

ಬಂದು ಶಂಕರದಾಸಿಮಯ್ಯನ |
ಮಂದಿರದ ಮುಂಬಾಗಿಲಿದಿರೊಳು |
ನಿಂದರಕ್ಕಿಯ ಹೊರೆಸಹಿತ ಕೈಗಳ ಮುಗಿದುಕೊಂಡು ||
ತಂದರಕ್ಕಿಯ ಮಾರಿಮಸಣಿಯ |
ರೆಂದು ಶಂಕರದಾಸಿಗೊರ್ವಂ |
ಬಂದು ಪೇಳಲು ನಗುತಲಾ ಶಿವಶರಣಮಣಿ ನುಡಿದ || ೫೫ ||

ಇಲ್ಲಿಗೇತಕೆ ತಂದರಾ ದಿನ |
ನೆಲ್ಲ ತಮಗಿತ್ತವನ ತೋರಿಸು |
ಅಲ್ಲಿಗವನೊಯ್ಯೆಂದು ಪೇಳವನೀಶಗೊಪ್ಪಿಸಲು ||
ಸೊಲ್ಲಿಸೆನಲವ ಪೋಗಿಯವರೊಳು |
ಸೊಲ್ಲಿಸಿದನಿಂತೆಂದು ಕೇಳುತ |
ಮೆಲ್ಲನೈದಿದರರಮನೆಗೆ ಪೆರ್ಮಿತ್ತು ದೇವಿಯರು || ೫೬ ||

ಓಡಿದರು ಕಂಗೆಟ್ಟು ಬಾಗಿಲ |
ನಾಡದೊಳಗಿರ್ದತುಳ ಮೋಹರ |
ನಾಡೆರೆಯುಗರುಪಲ್ಕೆ ಕೇಳ್ದತಿ ಬೆದರುತ್ತೈತಂದು ||
ನೋಡಿ ಸೀವರಿಸುತ್ತೆ ಬಾಗಿಲ |
ಹೂಡಿಸಿದನದ ಕಂಡು ಮಿಗೆ ಮಾ |
ತಾಡಿದರು ನಸು ನಗುತರಸನೊಳು ಮಾರಿಮಸಣಿಯರು || ೫೭ ||

ಹೆದರದಿರು ಭೂಪಾಲ ನಿನ್ನಯ |
ವಧುವ ಸೋಂಕಿದ ದೇವಿಯರು ನಾ |
ವದುಭುತವ ಮಾಡೆವು ಸಹಜ ನಂಬೆಂದು ನಂಬುಗೆಯ ||
ಮುದದೊಳಿತ್ತರು ಮಗುಳೆ ಮಾತಾ |
ಡಿದರು ಶಿವಭಕ್ತನಿಗೆ ನೀ ಹಾ |
ಕಿದ ಬಿಳಿಯ ನೆಲ್ಲಕ್ಕಿಯಿವೆಯೆಂದಾಗ ಮೋಳಿಗೆಯ || ೫೮ ||

---

೧ ತರತರಿಸಿ (ಇ, ಉ.) ೨ ಕೆಟ್ಟೋಡಿದರು (ಇ, ಉ.)

ಸುರಿದು ರಾಸಿಯ ಮಾಡಿಯೊಪ್ಪಿಸಿ |
ತಿರುಗಿ ಪೋದರು ತಮ್ಮ ನಿಜ ಮಂ |
ದಿರಗಳಿಗೆ ಪೋಣಿತ್ತಲಾ ಜಯಸಿಂಹ ಭೂಪಾಲ ||
ಪಿರಿದು ಮಂತಣಗೊಂಡು ಮಹಿಮಾ |
ಕರಣ ಶಂಕರದಾಸಿಮಯ್ಯಗ |
ಳುರು ಮಹತ್ವವಲಾ ಇದೆನುತವರಲ್ಲಿಗೈತಂದ || ೫೯ ||

ಬಂದು ಶಂಕರದಾಸಿಮಯ್ಯಗೆ |
ವಂದಿಸುತೆ ಸರ್ವಾಪರಾಧಮಿ |
ದೊಂದು ಬಾರಿಗೆ ತಾಳಬೇಕೆನೆ ನಗುತ ಶಿವಶರಣ ||
ಎಂದನೀಶ್ವರ ಭಕ್ತರಿಗೆ ನೀ |
ತಂದು ಕೊಡುವರೆ ಕೊಟ್ಟಣವನಾ |
ರೆಂದರಿಯೆ ಶಿವಭಕ್ತರವರ ಮಹತ್ವಮಂ ಕೇಳು || ೬೦ ||

ಮೃಡನ ಶರಣರು ನೋಡುವವರಿಗೆ |
ಬಡವರಾಗಿಹರರಸ ಮುನಿದೊಡೆ |
ಸುಡುವರೀ ಭುವನಂಗಳಂ ಮೆಚ್ಚಿದೊಡೆ ಬೇಡಿದುದ ||
ಕೊಡುವರಧಿಕ ಮಹತ್ವಮಂ ತ |
ಮ್ಮಡಿಯೊಳಗೆ ತೋರುವರು ಜಗದೊಳ |
ಗಡಗುವರೆ ಕೇಳ್ ಸಾಸುವೆಯೊಳಂಬುಧಿಯನಿಡ[1]ಬಹುದೇ || ೬೧ ||

ಹರಿಯೆದೆಯನೊದೆವರು ವಿಧಾತ್ರನ |
ಶಿರವ ತರಿವರು ಪಾಕಶಾಸನ |
ನುರವ ಕೋಪ್ತವ ಮಾಳ್ಪರುಳಿದಾದವರ ಲೆಕ್ಕಿಪರೇ ||
ಪಿರಿದು ಮುನಿದೊಡೆ ಭಕ್ತರಿದಿರೊಳು |
ಹರಿ ಹರ ಬ್ರಹ್ಮಾದಿಗಳು ನಿಲ |
ಲರಿದವರ ಬಡ ಮನುಜರೆಂದಿರಬೇಡವೆಲೆ ಭೂಪಾ || ೬೨ ||

ಒಲ್ಲರಾಡಂಬರಗಳನು ತ |
ಪ್ಪಿಲ್ಲದೆಯು ಕೋಪಿಸರು ತಪ್ಪಿರೆ |
ಹಲ್ಲ ಮುರಿವರು ಲೋಕಲೋಚನನಾದರೆಯು ತಂದು[3] ||
ಕೊಲ್ಲಬಂದರೆ ತಲೆಯನರಿದುರಿ |
ಯಲ್ಲಿಡುವರಾ ದಕ್ಷನಾದರು |
ಬಲ್ಲಿದತನಂ ಮೆರೆಯದಿರು ಗಡ ಈಶಭಕ್ತರೊಳು || ೬೩ ||

---

೧ ಭ (ಇ, ಉ.) ೨ ಯಡಗ (ಉ.) ೩ ಮ್ಮ (ಇ, ಉ.)

ಕಾಳುಗೆಡೆದರೆಯುಗ್ನಿಯಾದರು |
ಕೀಳುವರು ನಾಲಿಗೆಯ ಕೃತಕವ |
ಮೇಳಯಿಸಿದರೆ ಸುರಪನಾದರು ಕಣ್ಣ ತೊಳಸುವರು ||
ಹೊಳಿದರೆ ವಿಧಿಯರಸಿಯಾದರು |
ಕೇಳು ಕೊಯಿವರು ಮೂಗನವದಿರ |
ನಾಳವಾಡುವದರಿದು ಲೋಕದ ನರರಿಗೆಲೆ ರಾಯ || ೬೪ ||

ವಾದಿಸಿದೊಡಿದಿರಾಗಿ ನಾಲುಕು |
ವೇದ ಮೂರ್ತಿಯ ಶುನಿಯ[೧] ಮಾಳ್ಪರು |
ಭೇದಮಂ ಮಾಡಿದೊಡೆ ಚರ್ಮವ ಸುಲಿವರತುಳ ಗಜ ||
ವಾದಡೂ ಸೆಣಸಿದೊಡೆ ಯಮ ತಾ |
ನಾದರೂ ಸುಡುವರು ವಿಭವದಿಂ |
ಭೂಧವಾ ನೀನರಿಯೆ ಶಿವಭಕ್ತರ ಮಹತ್ವವನು || ೬೫ ||

ವಾಸಿಯಾದೊಡೆ ಸತ್ವದಿಂ ಕೈ |
ಲಾಸಮಂ ಕೀಳುವರು ಪನ್ನಗ |
ಭೂಷಣನ ಯುದ್ಧಕ್ಕೆ ಕರೆವರು ಭಾಸ್ಕರನ ಮೆಯ್ಯ ||
ಭಾಸಗಳ ಪರಿಹರಿಪರಂಭೋ |
ರಾಸಿಯಂ ಕೆಯ್ಯುಗ್ಗಡುತೆಯೊಳಗಾ |
ಪೋಷಣಂಗೊಂಬರು ಮಹಾಮಂದರವನೆತ್ತುವರು || ೬೬ ||

ವ್ಯಾಧಿಗಳುಕರು ಘೋರ ಪಾಪದ |
ಹಾದಿಹೊಲಬರಿಯರು ಗಿರೀಶನ |
ಪಾದವಲ್ಲದೆ ಬಿನುಗುದೈವವನರಿಯರೆಂದೆಂದು ||
ಹಾದಿಗರ ಪಿಡಿದುಂಬ ದೈವಾ |
ರಾಧನೆಯ ಮಾಡರು ಜಗದಿ ನಿರು |
ಪಾಧಿಯಾಗಿಹರೀಶಭಕ್ತರು ಭೂಪ ಕೇಳೆಂದ || ೬೭ ||

ನಡೆದುದೇ ಸನ್ಮಾರ್ಗ ಭಕ್ತರು |
ನುಡಿದುದೇ ವೇದಾರ್ಥ ಮುದದಿಂ |
ಪಿಡಿದುದೇ ಸದ್ಧರ್ಮ ಶರಣರು ಬಿಟ್ಟುದೇ ಪಾಪಂ ||
ಪಡೆದುದೇ ಸಂಪದ ಮಹೇಶ್ವರ |
ರುಡುಗಿಕೊಂಡಿರ್ದೊಡೆಯವರ ನೀಂ |
ಬಡವರೆಂದಿರಬೇಡ ಶಿವ ತಾನೆಂದು ಬಗೆ ಮಗನೇ || ೬೮ ||

೧ ನಾಯ (ಇ, ಉ.)

ಶಿರದೊಳಗೆ ಜಡೆ ಭಾಳಮಧ್ಯದೊ |
ಳುರು ಭಸಿತ ಮುಖದೊಳಗೆ ಷಂಚಾ |
ಕ್ಷರಿ ಗಳದಿ ರುದ್ರಾಕ್ಷಮಾಲಿಕೆ ಹಸ್ತದೊಳು ಲಿಂಗಂ ||
ಇರಲವನೆ ಸಾಕ್ಷಾತ ಶಿವನೆಂ |
ದೊರೆವುದಾಮ್ನಾಯೆಯು ಮಹಾ ಭ |
ಕ್ತರ ಮಹಾತ್ಮ್ಯವನರಿದರಿದು ನೀನಿಂತು ಮಾಡುವರೇ || ೧೯ ||

ಚಾರು ಶಂಕರ ಭಕ್ತರಿಹ ಬೀ |
ಡಾರವಾ ಬೀಡಾರಮೆಸೆದಿಹ |
ಕೇರಿಕೇರಿಗಳನ್ನು ತಾಳಿದ ಪಟ್ಟಣದ ತಡಿಯು ||
ಊರನಾಳುವ ನೃಪತಿ ಮುಕ್ತಿಯ |
ಸಾರುವಂ ನಿಜವೆಂಬ ಶಾಸ್ತ್ರವಿ |
ಚಾರವರಿದಿರ್ದಿಂತು ಮಾಡುವುದುಚಿತವೇ ಭೂಪಾ || ೨೦ ||

ಭಕ್ತನೇ ಸಾಕ್ಷಾತ ರುದ್ರಂ |
ಭಕ್ತನಿಹ ಮನೆ ಮೃಡಸದನ ಶಿವ |
ಭಕ್ತನಂಗಣ ಸಾಂಬವಕ್ಷೇತ್ರಂ ಧರಾಕಾಂತಾ ||
ಭಕ್ತನಿಹ ಪುರ ರಜತಗಿರಿ ಸ |
ದ್ಭಕ್ತನಿಹ ಧರೆ ದೇವಲೋಕಂ |
ಭಕ್ತನಿಂದ ವಿಶೇಷಮೊಳವೇ[1] ಕೇಳು ಭೂಪಾಲಾ || ೨೧ ||

ತೇಜಮನ್ನಣೆಯೊಳಗೆ ಶ್ರೀ ಶಿವ |
ಪೂಜಕರನೊಲಿದಿರಿಸಿಕೊಂಡಿಹ |
ರಾಜನೈದುವ ವಿಷ್ಣುಪದವಂ[2] ಮೇಲಣಾಶ್ರಯುವ ||
ರಾಜನಕ್ಷತ್ರಾದಿಭಾಸ್ಕರ |
ತೇಜಮಯದೊಡಲಾಂತು ಸುಖದಿ ಸು |
[3]ತೇಜಮಯದೊಳಗೆಸೆದಿಹನು ನಿರುಪಾಧಿಕವನರಸಿ[3] || ೨೨ ||

ಈಶಪದ ಸೇವಕನನಾಮಿಕ |
ವಾಸದೊಳಗಿರಲಾ ಸದನ ಕೈ |
ಲಾಸವಾ ಶ್ವಪಚರೆ ಗಣೇಶ್ವರರವರ ಕೃತ್ಯಗಳೇ ||
ಈಶಪೂಜಾಕೃತ್ಯದಿಂದೆ ವಿ |
ಶೇಷಮೆಂದುದು ವೇದವೆಲೆ ಧರ |
ಣೀಶ ನೀನಿದನರಿಯದಿಹುದುಚಿತವೆ ಮಹಾದೇವಾ || ೨೩ ||

---

೧ ಮಿಲ್ಲಂ (ಇ.) ೨ ದಿಂ (ಇ, ಉ.) ೩-೩ ತೇಜದೊಳಗೆಸೆದಿಹನಧಿಕ ನಿರುಪಾಧಿಕವ ಧರಿಸಿ (ಇ, ಉ.)

ಶಿವಶರಣರಿಗೆ ಮನೆಯನಿತ್ತವ |
ನವನಿಗೀಶ್ವರನಾಗಿ ಜನಿಸುವ |
ಶಿವಶರಣರಿಗೆ ಕ್ಷೇತ್ರವಿತ್ತವ ಪಂಚ ಸುರಕುಜಕೆ ||
ಧವನೆನಿಪ ಶಿವಭಕ್ತರಿಗೆ ದ್ರ |
ವ್ಯವನೊಲಿದು ಕೊಟ್ಟಾತ ಕಿನ್ನರ |
ನಿವಹಪತಿಯಹನೆಂಬ ಶ್ರುತಿಯುಂಟಲೆ ಮಹೀಪಾಲಾ || ೭೪ ||

ಕೋಟಿ ಗೋದಾನಂಗಳಿಂದಂ |
ಕೋಟಿ ಭೂದಾನಂಗಳಿಂದಂ |
ಕೋಟಿ ಕನ್ಯಾದಾನವಸ್ತ್ರಸುವರ್ಣದಾನಗಳಿಂ ||
ಕೋಟಿ ದೇವದ್ವಾರದಿಂದಂ |
ಕೋಟಿ ಯಾಜ್ಞಿಕಕೃತ್ಯದಿಂದಂ |
ಕೋಟಿ ಮಡಿ ಫಲವಿಾಶಭಕ್ತರ ಸಲಹಿದಾತಂಗೆ || ೭೫ ||

ಶಿವಶರಣರಂ ನೆನೆದವಂ ಸುರ |
ಭುವನದೊಳು ನೃಪನಾಗಿ ಜನಿಸುವ |
ಶಿವಶರಣರಂ ಪೊಗಳಿದವನಜಲೋಕಪತಿಯಪ್ಪ ||
ಶಿವಶರಣರಂ ಕಂಡವಂ ಮಾ |
ಧವನೆ ತಾನಾಗಿಪ್ಪ ಕೇಳಾ |
ಶಿವಶರಣರಿಗೆ ನಮಿಸಿದವ ಶಿವನಪ್ಪನೆಲೆ ಭೂಪಾ || ೭೬ ||

ಹಿಂದಕಾದುದು ಪೋಗಲರಸಾ |
ಮುಂದಕೀಶ್ವರ ಭಕ್ತರಂ ಕಂ |
ಡೆಂದಿನಂತಿರಬೇಡ ಕಂಡಾಕ್ಷಣವೆ ಭಕ್ತಿಯೊಳು ||
ವಂದಿಸುತೆ ಬಾಳ್ವೈ ನೃಪಾಲಕ |
ಎಂದು ಭೂವಲ್ಲಭನ ಪರಮಾ |
ನಂದ ಶಂಕರದಾಸಿಮಯ್ಯಗಳೊಲಿದು ಬೀಳ್ಕೊಡಲು || ೭೭ ||

ಬಂದನಾ ಜಯಸಿಂಹರಾಯ ವ |
ಸುಂಧರೀಲಕ್ಷ್ಮೀತಿಲಕ ಖಂ |
ಡೇಂದುಶೇಖರ ಕಿಂಕರನ ಮಹಿಮೆಗಳ ಪೊಗಳುತ್ತೆ ||
ಇಂದು ಮೊದಲಾಗೀಶನೇ ತಾ |
ನೆಂದು ಬಗೆದಪೆನೀಶಭಕ್ತರ |
ನೆಂದು ಮನದೊಳು ನಿಶ್ಚಯಿಸುತಂ ತನ್ನ ಮಂದಿರಕೆ || ೭೮ ||

ನೆನೆದ ಕಾರ್ಯ್ಯಂ ಸಿದ್ಧಿಸಲಿ ಯೌ |
ವನಮುದಾಗಲಿ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿ ಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನ ಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೭೯ ||

ಅಂತು ಸಂಧಿ ೯ಕ್ಕಂ ಪದ ೬೬೩ಕ್ಕಂ ಮಂಗಳಂ

## ೧೦ನೆಯ ಸಂಧಿ

# ವಕ್ರಪಾದಮುನಿಯು ಜಯಸಿಂಹನ ಆಸ್ಥಾನಕ್ಕೆ ವಿದ್ವಾಂಸರ ಕೂಡ ವಾದಕ್ಕೆ ಬಂದದ್ದು

**ಸೂಚನೆ**

ಧರಣಿಪಾಲನ ಬಳಿಯ ವಿದ್ವಾಂ |
ಸರು ವಿವಾದವ[೧] ಮಾಡಬೇಕೆನೆ |
ಹರುಷದಿಂದಾಸ್ಥಾನಕೈದಿದ ವಕ್ರಪಾದಮುನಿ ||

ಫಣಿವಿಭೂಷಣ ಸಕಲದೇವಾ |
ಗ್ರಣಿ ಸಮಸ್ತಜಗದ್ಭರಿತ ಕಿಂ |
ಕಿಣಿಯೆ ವೇದಗಳಾಗಿ ಬಳಸಿದ ವಿಮಲಪಾದಾಬ್ಜ ||
ತ್ರಿಣಯ ಭಾಸ್ವಾ[೨]ಕಾರ ಸಾಕ್ಷಾತ್ |
ಪ್ರಣಮ ಮೂರುತಿ ನಿತ್ಯಮಾ ಕುಂ |
ತಣಲಲಾಮಂ ಶ್ರೀಕರಂ ನಮಗೀಗೆ ಸಂತಸವ[೩] || ೧ ||

ಪೋದುದಾ ದಿನ ಮರುದಿವಸ ಶುಭ |
ಸಾಧನಂ ಸಮರಂಗಜಯುಲ |
ಕ್ಷ್ಮೀಧವಂ ದಶದಿಗ್ಭರಿತ ಕೀರ್ತ್ಯಂಗನಾಕಾಂತಂ ||
ಭೂಧವಾಹ್ವಯಮಣಿಮುಕುಟನತ |
ವಾದ ಜಯಸಿಂಹಂ ನೃಪತಿ ಹರು |
ಷೋದಯದೊಳೈತಂದು ಮಂಡಿಸಿದಂ ಹಜಾರದೊಳು || ೨ ||

ರುಚಿ ಮಿರುಗುವಾ ಮಣಿಕಿರೀಟದ |
ರಚನೆಯಿಂ ಮುಕ್ತಾಕಲಾಪದ |
ನಿಚಯಸಂಯುತ ಗಾತ್ರದಿಂದೆಸೆಯುತ್ತೆ ನವರತ್ನ ||
ಖಚಿತ ಸಿಂಹಾಸನದಿ ಲೋಕ |
ಪ್ರಚುರ ಕರ್ಣಶ್ರಾವ್ಯವಹ ಚಾ |
ರುಚರಿತಂ ಜಯಸಿಂಹ ಭೂನಾರೀಶನೊಪ್ಪಿರ್ದ || ೩ ||

---

೧ ವಿಚಾರವ (ಉ.) ೨ ಭಕ್ತಾ (ಇ.); ಭಸ್ಮಾ (ಉ.) ೩ ಶಿವನೀಗೆ ನಮಗೊಲವ (ಇ, ಉ.)

ಚಾರು ವೀಜನ ಚಾಮರಂ ಕುಡಿ |
ನೀರಸಗ್ಗಳೆ ಹಡಪ ಗಿಂಡಿ ಕ |
ಠಾರಿ ಸೀಗುರಿ ಡವಕೆ ವಸ್ತ್ರಾಭರಣ ಲೇಪನದ ||
ಧಾರಣದಿ ಕಂಗೆಸೆಯುತಿಹ ಪರಿ |
ಚಾರಕರ ಗಡಣದೊಳಗೊಪ್ಪಿದ |
ಧಾರುಣೀಪತಿಯೆರಡನೆಯ ಸುರರಾಜನೆಂಬಂತೆ || ೪ ||

ದಂಡನಾಥರ ಮಂತ್ರಿಗಳನು |
ದ್ದಂಡ ಸೇನಾಧಿಪರ ಮನ್ನೆಯ |
ಮಂಡಲೀಕರ ದೇಶದೇಶದ ಮಕುಟವರ್ಧನರ ||
ತಂಡವಿಕ್ರಮರೆನಿಪ ಸುಭಟರ |
ತಂಡಗಳ ಗಡಣದೊಳು ಕೀರ್ತಿಕ |
ರಂಡನಾ ಜಯಸಿಂಹ ರಿಪುಗಜಸಿಂಹನೊಪ್ಪಿರ್ದ || ೫ ||

ವಿತತ ದೇಶಾಧಿಪರ ಸ್ಥಾನಾ |
ಪತಿಗಳಿಂ ಸಾವಂತರಿಂ ಮಾ |
ಗತ ಪುರಾಣಿಕನಕ್ಷರಿಕ ನಾಗರಿಕ ಮಂತ್ರಿಕರಿಂ ||
ನುತಿಪ ಪಡೆಯರ ದಂಡಧಾರಕ |
ರತುಳ ಭುಜಬಲಮಲ್ಲರಿಂ ಬಹು |
ಮತಗಳಾರಾಧ್ಯಾಯರಿಂ ಕಂಗೆಸೆದ ಭೂಪಾಲ || ೬ ||

ಚಾರು ವೈದ್ಯರ ಜೋಯಿಸರ ಪೊಂ |
ಗಾರುಕರ ಪರಿಹಾಸಕರ ಚರ |
ದ್ವಾರಕರ ಚಕ್ರಿಕರ ಚಿಪ್ಪಿಗ ರತ್ನಗಾರಕರ ||
ದ್ವಾರಪಾಲರ ಸಂಧಿವಿಗ್ರಹಿ |
ತೀರುಗರ ವಾಹಕರ ಜೋದರ |
ಸೇರುವೆಯ ಸಂಭ್ರಮದೊಳೆಸೆದಿರ್ದಂ ಧರಾಕಾಂತ || ೭ ||

ಸುಕವಿ ಗಮಕಿಪ್ರತತಿ ವಾದಿ |
ಪ್ರಕರ ವಾಙ್ಮಿನಿಕಾಯ ವಿದ್ಯಾ |
ಧಿಕ ಸಮೂಹಂ ಲಂಬಿಕಾಹ್ವಯ ಕೋವಿದರ ತಂಡ ||
ಸಕಲ ವಿದ್ವಾಂಸವ್ರಜದಿ ರಂ |
ಜಕದಿ ಕಂಗೆಸೆದಿರ್ದನಾ ನಿ |
ಶ್ಚಕಿತಹೃದಯಂ ನವರಸಮಯಂ ಸೌಂದರಿಯ ಕಾಯಂ || ೮ ||

ಪೊಗಳಲಳವೇ ಶಿವ ಶಿವಾ ನಳ |
ಸಗರ ದಶರಥ ಮುಖ್ಯ ನೃಪಗೋ |
ರಗೆಯೊ ಮಿಗಿಲೋ ಎಂಬಿನಂ ಜಯಸಿಂಹ ಭೂಪಾಲ ||
ಮೃಗಧರಂ ನಕ್ಷತ್ರಮಧ್ಯದಿ |
ಮಿಗೆ ವಿರಾಜಿಸುವಂತೆ ಗಗನದಿ |
ಖಗಲೊಡೆಯನಿಪ್ಪಂತೆ ಸಭೆಯೊಳಗೆಸೆದ ತೇಜದೊಳು || ೯ ||

ಇಂತೆಸೆವ ಜಯಸಿಂಹ ವಸುಧಾ |
ಕಾಂತ ಸುಮುಖದೊಳೊಲಿದು ಸಕಲ ಮ |
ತಾಂತರವನರಿದಿರ್ದ ವಿದ್ವಾಂಸರೊಳು ಪೇಳಿದನು ||
ಕಂತುಹರಪದಸೇವಕನನ |
ತ್ಯಂತ ಮಹಿಮನ ಲಿಂಗನಿಷ್ಠಾ |
ಭ್ರಾಂತ ಶಂಕರದಾಸಿಮಯ್ಯನ ಸಚ್ಚರಿತ್ರವನು || ೧೦ ||

ಕಂಡಿರೇ ನಿನ್ನಿನ ಪಗಲು ನಮ[೧] |
ದಂಡಿಸಿದವತಿ ಮಾರಿಮಸಣಿಯ |
ಕಂಡು ಶಿವ ಶಿವ ಅಭಯರೂಪಾದಂತೆ ಬಂದರಲಾ ||
ಕಂಡುದಿಲ್ಲೀ ಶರಣನೊಲು ಭೂ |
ಮಂಡಲದಿ ಬಲ್ಲಿದರು ಸರ್ವರು |
ದಂಡಮಂ ನತಗೆಯ್ಯರೇ ಈ ಮಹಿಮೆಂಯುಳ್ಳವಗೆ || ೧೧ ||

ನರರೊಳಗೆ ಧೂರ್ಜಟಿಯ ಮಚ್ಚಿಸಿ |
ಯುರಿನಯನಮಂ ಪಡೆದರೊಳರೇ |
ಧರೆಯನಗಿಯಿಸಿ ಕನಕ ಭಾಂಡಗಳಂ ತೆಗೆದರೊಳರೇ ||
ಹರನು ಕೊಟ್ಟುದ ಬಯಲು ಮಾಡಿದ |
ಗರುವರಾರೀ ಮಹಿಮನೊಲು ಷಡ್ |
ದರುಶನಂಗಳ ಭಂಗಮಾಡಿದರಾರು ಪೇಳೆಂದ || ೧೨ ||

ಮಾರಿಮಸಣಿಯ ತೊತ್ತ ಮಾಡಿದ |
ರಾರು ಭಾಗ್ಯವನೊಲ್ಲದಿಪ್ಪವ |
ರಾರು ದೇವಗಣಕ್ಕೆ ಮೊದಲಿಗನಾದ ನರನಾರು ||
ಪೂರಮಾಗಿಹ ತೊರೆಯ ಪಾಯ್ದವ |
ರಾರು ಕೇಳ್ಪೆಮಾನದಶನದೊ |
ಘೋರನಾಡನೆ ದಣಿಸಿದವರಾರೀ ನಗರದೊಳಗೆ || ೧೩ ||

---

೧ ನಿನ್ನಾದ ಪರಿಯನು (ಇ.)

ಈ ಶರಣಶಿರರತ್ನ ಶಂಕರ |
ದಾಸಿಮಯ್ಯಗಳಲ್ಲದಿಲ್ಲಿನ |
ಲಾ ಸಮಸ್ತ ಮತಜ್ಞರೊಮ್ಮತವಾಗಿ ನುಡಿದರತಿ ||
ದೇಶವಲ್ಲಭ ಲಾಲಿಸವರ ವಿ |
ಶೇಷವಾವುದು ಜೀಯ ಕುಟಿಲದ |
ವೇಷಮಲ್ಲದೆ ಸಹಜಮಲ್ಲೆಂದರು ಕೃತಕದಿಂದೆ || ೧೪ ||

ನೊಸಲಕಣ್ಣಂ ತೋರಿಸಿದೊಡೀ |
ವಸುಧೆಯುರಿದಪುದಲ್ಲದಾಗಾ |
ಪಸರಿಸುವ ಭಾಳಾಕ್ಷಿಯಂ ತೋರೆಂದು ಕೇಳಿದೊಡೆ ||
ನೊಸಲಕಣ್ಣಿಪ್ಪುದು ನಿಜವೆಯುದು |
ಪುಸಿ ಸುವರ್ಣದ ಭಾಂಡಗಳನಗಿ |
ಯಿಸಿ ತೆಗೆದುದೆಲೆ ರಾಯ ಕನ್ಯಾವಾದಮೆಂದರಿಯಾ || ೧೫ ||

ತೋರಿಕೆಗಳಂ ಬಯಲು ಮಾಡಿಯೆ |
ತೋರಿದುದು ಗೋವಿಂದಗತಿಯದು |
ಪಾರಿಪೋದುದೆ ಎಂದಿನಂತಾಯ್ತದಕದೇ ಸಾಕ್ಷಿ ||
ಆರು ಮತಗಳ ಭಂಗ ಬಡಿಸಿಯೆ |
ತೋರುವುದು ಬಾಯ್ಕಟ್ಟು ನಿನಗತಿ |
ಸಾರಿ ಪೇಳ್ವೆವು ನಿಶ್ಚಯಿಸದಿರು ಮಹಿಮರವರೆಂದು || ೧೬ ||

ಮಸಣಿ ಮಾರಿಯು ಕರೆದು ಕೆಲಸವ |
ಬೆಸಸುವುದು ಕೇಳ್ ಮಂತ್ರಸತ್ವಂ |
ಮಿಸುಪ ಭಾಗ್ಯವನೊಲ್ಲದಿಲ್ಲದೊಡದಕದೇ ಸಾಕ್ಷಿ ||
ಅಸುರಸುರಭೂತವ್ರಜವ ತೋ |
ರಿಸುವುದೀಗ ಮಹೀಂದ್ರಜಾಲಂ |
ಪಸರಿಸಿದ ತುಂಬಿದ ತೊರೆಯ ಪಾಯ್ವುದೆ ಜಲಸ್ತಂಭಂ || ೧೭ ||

ಐದುಪಡಿ ತಂಡುಲವನೆಲ್ಲರಿ |
ಗೈದಿಸಿಹುದದು ಯಕ್ಷಿಣಿಯರಾ |
ರಾಧನೆಯ ಸತ್ವಂ ಮಹೀಪತಿ ಕೇಳು ನೀನವರ ||
ಭೇದಗಳನು ಪರೀಕ್ಷಿಸದೆಯೆ |
ತ್ರೀದುದೆಂದೆನಲೊಳಗೆ ಕಟ್ಟಿದೊ |
ಲಾದುದರಸಾ ನಿಮ್ಮ ಪರಿಯೆನಲಾತನಿಂತೆಂದ || ೧೮ ||

ಅಮರರಾದರು ಜರಿದು ನುಡಿವುದು |
ನಿಮಗೆ ಸಹಜಂ ನಿಮ್ಮ ಮನಸಿನ |
ಭ್ರಮಣೆ ನುಡಿಗಳು ಸರಸವಾಗಿರವೆಮ್ಮ ಕಿವಿಯೊಗವು ||
ಅಮಲ ಗಗನವ ಕೆಸರೊಳಿಟ್ಟವ |
ನ ಮೆಯಿ ಕೆಸರಹುದಲ್ಲದಾಗಸ |
ದಮಳ ಕೆಡುವುದೆ ಆ ಮಹಾಪುರುಷೋತ್ತಮನ ನೀವು || ೧೯ ||

ದೂಷಿಸಿದರಾ ದೂಷ್ಯವವರ ಪ್ರ |
ವೇಶಿಸದು ಅದು ನಿಮಗೆ ಸಲುವುದು |
ದೂಷಕಗೆ ಪರಲೋಕವಿಲ್ಲೆಂದೆಮಗೆ ಪೇಳುವಿರಿ ||
ಆ ಶಿವೈಕ್ಯನ ಸತ್ವಮರಿಯದೆ |
ದೂಷಿಸುವುದುಚಿತವೆ ನಿಮಗೆ ಪರ |
ದೂಷಕರ ನೋಡಿದರೆ ಪಾತಕವೆಂದ ನರನಾಥ || ೨೦ ||

ಖಗದೊಳಗೆ ಚಾಂಡಾಲ ಕಾಕಂ |
ಮೃಗದೊಳಗೆ ಚಾಂಡಾಲ ಗಾರ್ದಭ |
ಮಿಗಿಲೆನಿಪ ಚಾಂಡಾಲ ನರರೊಳು ಕ್ರೋಧಿಯಾದವನು ||
ಸುಗುಣರಂ ದೂಷಿಸುವರೆಲ್ಲಕೆ |
ಮಿಗಿಲೆನಿಪ ಚಾಂಡಾಲನಾತನ |
ಮೊಗವ ನೋಡಿದವಂಗೆ ಪಾತಕವೆಂದನವನೀಶ || ೨೧ ||

ವಸುಧೆಯೊಳಗತ್ಯಧಿಕ ಪಾಪಂ |
ಪುಸಿವುದದರಿಂ ಕೇಳಿರಡು ಮಡಿ |
ಪಸುವ ಕೊಲ್ಲುವುದದರ ಮೂರ್ಮಡಿಯಾದ ಪಾತಕವು ||
ಸಿಸುವ ಕೊಲ್ಲುವುದದಕೆ ನಾಲ್ಮಡಿ |
ಯೆಸಕ ಕಳವದರೈದು ಮಡಿ ಪಾ |
ಪ ಸುಜನರ ದೂಷಿಸುವಗೆಂದ ನೃಪಾಲಕುಲತಿಲಕ || ೨೨ ||

ಭೂಸುರೋತ್ತಮ ವೇದವಿತ್ತುಪ |
ವಾಸಿ ಸತ್ವವಿಹೀನ ಮುದಿ ಸ |
ನ್ಯಾಸಿಯಂ ದ್ವಾದಶಿಯುದಯದೊಳು ಗಂಗೆಯಮುನೆಯೊಳು ||
ಕಾಶಿಯಾ ಕ್ಷೇತ್ರದೊಳು ಕೊಂದವ |
ಗೇಸು ಪಾತಕವೈಸು ತಪ್ಪದು |
ದೂಷಕರಿಗೆಂದರಸು ಕಿವಿಗಳ ಮುಚ್ಚುತಿಂತೆಂದ || ೨೩ ||

ಕಿಡಿನಯನವಿಲ್ಲದೊಡೆ ದೇವರ |
ಗಡಣವಂ ಕೋಪದೊಳು ಭೋಂಕನೆ |
ಸುಡುವ ಪರಿಯೆಂತಕಟ ಕನ್ಯಾವಾದಿಗಳು ವಿಧಿಯ[೧] ||
ಕೊಡದೆ ತನ್ನಂಗಳದಿ ಪಗಲೇ |
ಪೊಡವಿಯಂ ಗುದ್ದಲಿಸಿ ಚಿನ್ನದ |
ಗಡಿಗೆ ಪರಿಯಣ ತಟ್ಟೆ ಬಟ್ಟಲ ತೆಗೆವನೇ ಹೇಳಾ || ೨೪ ||

ಎಂದನಾ ನೃಪ ಕೇಳಿರೈ ಗೋ |
ವಿಂದಗತಿಯವರಿವರವೊಲು ಮುದ |
ದಿಂದಧಿಕವಂ ಪಡೆದು ಕೊಡುವರೆ ಬಾಯ ಕಟ್ಟಿದೊಡೆ ||
ಒಂದೆರಡು ದಿನ ಸೆಣಸಿ ಸೋಲುವ |
ಬಂದು ಸೀವರಿಸುವರೆ ಜಿಹ್ವಾ |
ಬಂಧವಾಗಿಹರಲ್ಲದೇ ಷಡ್ದರ್ಶನಾಧಿಕರು || ೨೫ ||

ಕೇಳಿರೈ ಮಾಂತ್ರಿಕರು ಮನುಜರ |
ಮೇಲೆ ಗ್ರಹಗಳ ತೋರ್ಪರಲ್ಲದೆ |
ತಾಳಮರತು[೨]ದಿ ನಾಲ್ಕರುದ್ದದ ದೇವಿಯರ ಕೆಯ್ಯ ||
ಊಳಿಗವ ಮಾಡಿಸುವರೇ ಅದ |
ಹೇಳಸರಿ ಬೇಕೆಂದೊಡವರಿಗೆ |
ಹೂಳಿದರ್ಥವ ತೆಗೆವುದರಿದೇ ಸುಮ್ಮನಿರಿಯೆಂದ || ೨೬ ||

ಆಗಲೇ ಬಲಿದಂತೆ ತೋರಿಸಿ |
ಯಾಗಲಡಗುವುದಿಂದ್ರಜಾಲವು |
ದೀಗಲೆಲ್ಲರು ಕಾಂಬ ತೆರದೊಳು ಬಂದವರ ಬಂಟ ||
ರಾಗಿ ದೇಶದ ದೇವತೆಯರಾ |
ವಾಗಲಿಹರೇ ಶಿವ ಶಿವಾ ನೀ |
ವಾಗಿ ಬದುಕಿದಿರನ್ಯರಾದೊಡೆ ಬಾಯಿ ಸೀಳಿಸುವೆ || ೨೭ ||

ತುಂಬಿದುದುಕದ ಮೇಲೆಯಾಸನ |
ವಂ ಬಲಿದು ಕುಳಿತಿರ್ಪುದದು ಜಲ |
ಸ್ತಂಭವಲ್ಲದೆ ಪರಿವ ತೊರೆ ಹರಿಯಲ್ಕೆ ಹರಡುದ್ದ |
ಅಂಬುವಪ್ಪ ಮಹತ್ವವುದುಕ |
ಸ್ತಂಭವೇ ಯಕ್ಷಣಿಯದಾಗ |
ಲ್ಕಂಬರಿಗತಿ ಪ್ರೀತಿ[೩]ಯಪ್ಪುದೆ ನಾಲಿಗೆಗೆ ರುಚಿಯೇ || ೨೮ ||

---

೧ ಕರು ಬರಿಯ (ಇ, ಉ.)   ೨ ಪ (ಇ.)   ೩ ತೃಪ್ತಿ (ಇ, ಉ.)

ಪೇಳಿರೈ ಪಿರಿಯರೊಳು ದೋಷವ |
ಮೇಳಯಿಸುವರೆ ನೀವವರ ಮನ |
ದಾಳವರಿಯದೆ ನೀವವರ ಮುಂದಿಂತು ನುಡಿದಪಿರೇ ||
ಕಾಳು ಮಾತನೆನಲ್ಕೆ ದುಗುಡವ |
ತಾಳಿ ಭಯ ಪಾಂಗಿಯೊಳು ಸಕಲಮ |
ತಾಳಿ ಬಿನ್ನೈಸಿದುದು ಜಯಸಿಂಹನಿಗೆಯಿಂತೆಂದು || ೨೯ ||

ಹಡೆದ ತಾಯೇ ವಿಷವನಿಕ್ಕಲು |
ಬಿಡಿಸುವವರಾರ್ ತಂದೆ ಪರರಿಗೆ |
ಹಡೆದ ಮಕ್ಕಳ ಮಾರಿದರೆ ಬೇಡೆಂದರಾರರಸಾ ||
ಪೊಡವಿಪಾಲಕ ತನ್ನ ದೇಶವ |
ಕೆಡಿಸಿದೊಡೆ ಬೇಡೆಂಬರಾರೆ |
ಮ್ಮೊಡೆಯ ನೀವೆಮಗಿಂತು ಕೋಪಿ^೧ಸಲೆಂತು ನುಡಿದಪೆವು || ೩೦ ||

ಗುರುವಿನಿದಿರೊಳು ಶಿಷ್ಯ ತಂದೆಯಿ |
ದಿರೊಳು ಸುತನಗ್ರಜನಿದಿರೊಳನು |
ಜರು ನಿಗಮಶಾಸ್ತ್ರಜ್ಞರಿದಿರೊಳು ಮೂಢ ಮಾನವರು ||
ಅರಸನಿದಿರೊಳು ಕಾಂತೆ ಧಾತ್ರೀ |
ವರನಿದಿರೊಳಾಶ್ರಿತ ಪುರುಷರು |
ತ್ತರವ ಕುಡಬಹುದೇ ಅವರು ಜರಿದೊಡೆ ಮಹೀಪಾಲಾ || ೩೧ ||

ಪೊಡವಿಪತಿ ಚಿತ್ತೈಸು ನಿನ್ನೊಳು |
ನುಡಿಯಲವ್ಮೆವು ನಿಮ್ಮ ಜೀವಿತ |
ಪಡಿಯೆಮಗೆ ಗಾನವೆ ಪರಾಷ್ಟ್ರಕದಿಂದೆ ಬಂದೀತ ||
ಷಡು ದರುಶನಾಚಾರ್ಯನೆಂದತಿ |
ನುಡಿಸಬಹುದೇ ಕಹಳೆಗಳ ನ |
ಮ್ಮೊಡನೆ ವಾದವ ಮಾಡಲೆಂದೊದರಿದರು ತಮ ತಮಗೆ || ೩೨ ||

ಅರಸ ನೀ ರಕ್ಷಿಸಿದ ವಿದ್ವಾಂ |
ಸರ ಮಹತ್ವವ ನೋಡು ಬೂರುಗ |
ಮುರುಹುವಂದದೊಳುರುಹಿ ತೋರುವೆವೊಂದು ಮಾತಿನೊಳು ||
ಕರೆಯಿಸಾತನನೀಗಲೀಯು |
ತ್ತರದ ದೂಷಣೆಯಾದೊಡಾವೆ |
ಲ್ಲರು ಬಸಿದು ಶೂಲಗಳನೇರುವೆವೆಂದು ನುಡಿಯಲೊಡಂ || ೩೩ ||

೧ ಜಂಕಿ (ಇ.)

ರಾಯ ನಸು ನಗುತೆಂದ ನೀವವ |
ರಾಯವರಿಯದೆ ಸೆಣಸಿ ಕಡೆಯೊಳು |
ನೋಯಬೇಡಿರಿ ಪಾಪಿಗಳಿರಾ ಸಾರಿದೆನು ನಾನು ||
ಆಯತವೆ ಕರೆಯಿಸಲಿ ಪೇಳಿನ |
ಛಾಯತಂ ಕರೆಯಿಸೆನೆ ತನ್ನ ದ |
ಣಾಯಕನ ಕಳುಹಿದನು ಶಂಕರದಾಸಿಯಿದ್ದೆಡೆಗೆ || ೩೪ ||

ಪೋಗಿಯಾದಂಡೇಶನವನತ |
ನಾಗಿ ನಿಂದೀ ಸ್ಥಿತಿಯನೆಲ್ಲವ |
ನಾ ಗರುವನೊಳು ಬಿನ್ನವಿಸೆ ನಸು ನಗುತಲಿಂತೆಂದ ||
ಹೇಗಿದಕೆ ರಾಜಾಲಯುವ ಪೊಗ |
ಲಾಗದೊಂದುಜ್ಜುಗ ನಿಮಿತ್ತಂ |
ಪೋಗೆ ಪಾತಕ ಪೋಗದಿರ್ದೊಡೆ ಕೊರತೆಯಾದಪುದು || ೩೫ ||

ಹಾರುವನ ಹಸುಳೆಯ ಪಶುವ ಕೊಂ |
ದಾರವೆಯ ತರಿದು ಸುರೆ ಪಿಸಿತಾ |
ಹಾರಗಳ ಕೊಂಡನೃತ ಗುರುನಿಂದ್ಯಗಳನಾಡಿ ಪರ ||
ನಾರಿಗೆಳಸುತೆ ಕಳವಿಲಳಿದವಿ |
ಚಾರಿ ವಿಪ್ರನ ಪಾಪ ರಾಜ |
ದ್ವಾರಮಂ ಮೆಟ್ಟಿದ ಯತಿಗೆಯಹುದೆಂದನಾ ಮಹಿಮ || ೩೬ ||

ನೆಲೆಯೆನಿಸುವೈನೂರು ಯೋಜನ |
ವಲಯದುದ್ದದಿ ಮನುಜರ್ಕೈದಂ |
ಗುಲಿಯುಗಲ ಬಾಯೆಸೆವ ಕುಂಭದಿ ಪೂರ್ಣಮಾಗಿರ್ದ ||
ಮಲದೊಳಗೆ ಪುಳುವಾಗಿರುತೆ ಕೂ |
ದಲಿನ ಮಾತ್ರದೊಳಷ್ಟಮೇಧ್ಯವ |
ಮೆಲುವನರಮನೆಗೈದಿದೆತಿ ಸುರಕಲ್ಪಪರಿಯಂತ || ೩೭ ||

ಎಂದು ಶಂಕರದಾಸಿ ನುಡಿಯ |
ಲ್ಕೆಂದ ವಿಭವದಿ ವಕ್ತ್ರಪಾದಂ |
ಕುಂದು ಬಪ್ಪುದು ರಾಜ ಸದನವ ಮೆಟ್ಟಿದೊಡೆ ನೀವು ||
ಮಂದಿರದೊಳಿರಿ ನಾನು ಪೋದಪೆ |
ನೆಂದು ಕರಗಳ ಮುಗಿದು ಮುಗುಳಿಂ |
ತೆಂದ ಶಂಕರದಾಸಿಮಯ್ಯಗಳೊಡನೆ ಭಕ್ತಿಯೊಳು || ೩೮ ||

ವಾದವೆಂದೊಡೆ ರಾಜಮಂದಿರ |
ವಾದರೂ ಸೂಳೆಯರ ಮನೆ ತಾ |
ನಾದರೂ ಪೊಲಗೇರಿಯಾದರು ಪೋಗಿಯವರೊಡನೆ ||
ವಾದಮಂ ಮಾಡಲು ಬಹುದು ನಾಂ |
ಪೋದಪೆನು ಕಳುಪೆನುತ ಗುರುವಿನ |
ಪಾದಕಾನತನಾಗೆ ರಿಪುಗಳ ಜಯಿಸು ಹೋಗೆಂದ || ೩೯ ||

ಪೋಗು ಶಿವಪಂಚಾಕ್ಷರಿಯುನನು |
ರಾಗದಿಂ ಸ್ಮರಿಸುತ್ತಲದೆ ನಿನ |
ಗೀಗಲಹಿತೋಚ್ಚಾಟನದ ಮಂತ್ರಂ ಮಹಾತಂತ್ರಂ ||
ವೇದ ನಾಲ್ಕರ ಮಾತೆ ಮಿಥ್ಯಾ |
ವಾದಿಗಳ ಬಾಯ್ಕಟ್ಟು ನೀನೊಲಿ |
ದಾದರಿಸಿ ಕೇಳೀ ಪ್ರಣಮದುತ್ಪತ್ತಿಯಂ ಪೇಳ್ವೆ || ೪೦ ||

ಸದಮುಳಾಖಂಡಿತದಿ ನಾದಂ |
ಮೊದಲೆನಿಸಿದುದಕಾರಮದರೊಳು |
ವುದುಭವಿಸಿದುದಕಾರದೊಳಗತಿ ಬಿಂದುಮದರೊಳಗೆ ||
ಉದಯವಾಯ್ತು ಉಕಾರಮುತ್ಪದೊ |
ಳುದಯಿಸಿದುದಾ ಕಳೆ ಕಳೆಯೊಳಂ |
ತುದಯಿಸಿತು ಮತ್ತ ತ್ರಿಯಕ್ಷರ ಕೂಡಲೋಂಕಾರಂ || ೪೧ ||

ಆದುದಾ ಓಂಕಾರಮಾಪ್ರಣ |
ಮೋದಯದಿ ತಾರಕಮೆನಿಸಿತದ |
ರಾದಿಯೊಳು ದಂಡಕಮೆನಿಸಿತದರಾದಿ ಕುಂಡಲಿನಿ ||
ಆದುದದರಿಂದಾದಿಯೊಳಗರೆ |
ಯಾದುದದರಾದಿಯೊಳು ಶೂನ್ಯಂ |
ಭೇದಮಿಲ್ಲೆನಿಸಿರ್ಪುದಾ ಪಂಚಾಶ್ರಯಂಗಳೊಳು || ೪೨ ||

ಪಂಚ ರುದ್ರರ ಜನನಮವರೊಳು |
ಪಂಚ ಶಕ್ತಿಯರಾದರವರೊಳು |
ಪಂಚ ಕಲೆ ಜನಿಸಿದುವು ಕೇಳಾ ಕಲೆಯೊಳುದಿಸಿದುವು ||
ಪಂಚ ಸಾದಾಖ್ಯಂಗಳವರೊಳು |
ಪಂಚ ವರ್ಣದ ಮೂರ್ತಿಯಾದರು |
ಪಂಚ ವರ್ಣದ ತತ್ವಮಾದುವು ತತ್ವಮಧ್ಯದೊಳು || ೪೩ ||

ಪಂಚ ವಕ್ತ್ರಗಳೊಗೆದವವರೊಳು |
ಪಂಚ ವೇದಗಳಾದವವರೊಳು |
ಪಂಚ ಪಂಚಾಕ್ಷರಿಗಳುದುಭವಿಸಿದುವವರ ಮೌಳ್ಯಂ ||
ಪಂಚ ವರ್ಣಗಳೀ ಮಹಾಕ್ಷರ |
ಪಂಚಕಂಗಳು ಪ್ರಣವಮಧ್ಯದಿ |
ಮಿಂಚುತಿಹುದೋಂಕಾರ ಬೀಜದ ಚೇತನಗಳಾಗಿ || ೪೪ ||

ಪುಟ್ಟುವುದು ಕೇಳಿದರೊಳಗೆ ತಾ |
ಳೋಷ್ಟ ಸಂಯುತವಾಗಿ ಓಂ ಶ್ರುತಿ |
ಗೊಟ್ಟುದೊಲಿದು ತ್ರಿಮಾತ್ರಮಾದಪುದಾ ಪ್ರಮಾಣದೊಳು ||
ಇಟ್ಟಣಿಸುವ ಸಮಸ್ತ ಶಾಸ್ತ್ರವ |
ನಿಟ್ಟೆಹುದು ತನ್ನುದರದೊಳು ಪರ |
ಮೋಕ್ಷಿಯಚ್ಯುತ ರುದ್ರ ಮುಖ್ಯರ ಪಡೆದುದೀ ಪ್ರಣವಂ || ೪೫ ||

ಶಿವನೆನಿಸಿದುದು ಶೈವರಿಗೆ ವೈ |
ಷ್ಣವರಿಗಚ್ಯುತನೆನಿಸಿದುದು ಭೈ |
ರವನೆನಿಸಿದುದು ಜೋಗಿಗಳಗೀ ತೆರದೊಳೆಲ್ಲರಿಗೆ ||
ಅವರವರ ಮತದಾಧಿಪತ್ಯವ |
ನವಧರಿಸಿ ಸಾಕ್ಷಾತ್ಮಹತ್ವಾ |
ರ್ಣವಮೆನಿಸುತಿಹುದಣಿಮುಮುಖ ಚೌಪದದೊಳೀ ಪ್ರಣಮಂ ‡ || ೪೬ ||

ಕಂಗಳಂ ನಾಸಿಕವ ಕರ್ಣವ |
ನಂಗುಳಿಗಳಿಂ ಬಲಿಯೆ ತೇಜೋ |
ತ್ತುಂಗದಿಂ ರಾಜಿಸು[೧]ತಿಹುದು ಕಡಲಂತೆ ಶಿರದೊಳಗೆ ||
ಇಂಗಿತದಿ ನೋಡಿದೊಡೆ ದೇಹದ |
ಸಂಗವಾಗಿಹುದೀ ಪ್ರಣವು ಪಂ |
ಚಾಂಗ ವರ್ಣದ ಜಪದ ಫಲವಂ ಪೇಳ್ವೆ ಕೇಳೆಂದ || ೪೭ ||

ಉದಯದೊಳು ಸಂಜೆಯೊಳು ಮಧ್ಯಾ |
ಹ್ನದೊಳು ಗಂಗಾತೀರದೊಳು ಶಿವ |
ಸದನದೊಳು ಸುಕ್ಷೇತ್ರದೊಳಗೇಕಾಂತದೊಳು ಮಿಂದು ||
ಸದಮಳದ ರುದ್ರಾಕ್ಷ ಭಸಿತವ |
ನು ಧರಿಸಿಯೆ ಪದ್ಮಾಸನದಿ ಮೌ |
ನದೊಳು ಪೂರ್ವೋತ್ತರ ವರುಣನೀಶಾನ್ಯ ಮುಖವಾಗಿ || ೪೮ ||

---

೧ ಘೂರ್ಮಿಸು (ಇ, ಉ.) ‡ ಈ ಪದ್ಯವು ಅ, ಎ, ಪ್ರತಿಗಳಲ್ಲಿಲ್ಲ.

ಪಳುಕು ಮಾಣಿಕ ನೀಲ ಮುಕ್ತಾ |
ಫಳ ಸಕುಲಿಶಂ ಪುಷ್ಯರಾಗ ಪ |
ವಳ ಸುಗೋಮೇದಿಕ ಕಮಳ ರುದ್ರಾಕ್ಷಿಯೊಳ್ಮಣಿಯ ||
ತಳೆದು ನೂರೆಂಟಷ್ಟಪನ್ನಂ |
ಗಳನೊಲವಿನಿಂದಷ್ಟವಿಂಶತಿ |
ಗಳನೊಲಿದು ಪದಿನೆಂಟು ಷಟ್ತ್ರಿಂಶ ಪ್ರವಾಳದೊಳು || ೪೯ ||

ಅಕ್ಷಿಗೊಪ್ಪಂಬೆತ್ತು ರಾಜಿಸು |
ವಕ್ಷಮಾಲೆಯ ಮೇರುಮಣಿಯಂ |
ದಕ್ಷಿಣ ಕರದ ಮಧ್ಯಜೇಷ್ಠಾಂಗುಲಿಗಳೊಳು ಧರಿಸಿ ||
ಕುಕ್ಷಿ ವಕ್ಷಾಂತರದಿ ನಿಲಿಸಿ ಷ |
ಡಕ್ಷರಂಗಳಿವಂ ಸ್ಮರಿಸಿದರಿ |
ಗಕ್ಷಯದ ಪದಮಪ್ಪುದಿದ ವಿಸ್ತರಿಪೆ ಕೇಳೆಂದ || ೫೦ ||

ನತ್ವಮಂ ಸ್ಮರಿಸಿದೊಡೆ ದೇವೇಂ |
ದ್ರತ್ವಮಪ್ಪುದು ಮತ್ವದಿಂ ಬ್ರ |
ಹ್ಮತ್ವವಪ್ಪುದು ಶಿತ್ವದಿಂದಂ ವಿಷ್ಣುಪದಮಹುದು ||
ವಾತ್ವಮಂ ಜಪಿಸಿದೊಡೆ ಶ್ರೀರು |
ದ್ರತ್ವಮಪ್ಪುದು ಯತ್ವದಿಂದೀ |
ಶತ್ವವಹುದೋಂಕಾರಮಂ ಸ್ಮರಿಸಲ್ ಮಹೇಶಪದಂ || ೫೧ ||

ಮೋಕ್ಷನಾಯಕ ಶಿವನ ಪದವಿ ಷ |
ಡಕ್ಷರಂಗಳ ಸ್ಮರಿಸಿದವರಿಗೆ |
ಕುಕ್ಷಿಯೊಳು ಶಿವಲಿಂಗ ಜನಿಸುವುದಂತ್ಯಕಾಲದೊಳು ||
ಚಕ್ಷುವಿಗೆ ಕಾಣಿಸುವುವೀ ಪಂ |
ಚಾಕ್ಷರಿಯೆ ಕೊಂಡೆಯ್ದಿಯಾತ್ಮನ |
ರಕ್ಷಿಸುವವಪವರ್ಗ ಮಂಗಳ ಮಂದಿರದೊಳಿರಿಸಿ || ೫೨ ||

ತೀಡುವುದು ಜ್ಞಾನಾನಿಲಂ ಬಿ |
ಟ್ಟೋಡುವುದು ಭವಮೇಘ ಮಿಗೆ ತುಳು |
ಕಾಡುವುದು ಸಂಸಾರಸಾಗರ ತೂರುವುದು ವಿಘ್ನಂ ||
ಪಾಡಳಿವುದತಿ ಪಾತಕಗಳ |
ಲ್ಲಾಡುವುದು ರೋಗಾವನಿಜ ಕೈ |
ಗೂಡವುದು ನೆನೆದಿಷ್ಟವೀ ಪಂಚಾಕ್ಷರಿಯ ಜಪದಿ || ೫೩ ||

ಗರುಡ ಪಂಚಾಕ್ಷರಿಯ ಜಪಿಸಲ್ |
ಗರಳಭಯುವಡಗುವುದು ಲಂಬೋ |
ದರನ ಪಂಚಾಕ್ಷರಿಯ ಜಪಿಸಲು ರುಜೆಗಳಡಗುವುವು ||
ಉರುನೃಸಿಂಹ ಸ್ಮರಣೆಯಿಂ ಗ್ರಹ |
ವಿರದೆ ತೊಲಗುವುದೀಶ ಪಂಚಾ |
ಕ್ಷರಗಳಂ ಜಪಿ[೨]ಸಲ್ಕೆ ವಿಷರುಜೆಗ್ರಹಗಳಡಗುವುವು || ೫೪ ||

ಚಾರು ಪಂಚಾಕ್ಷರಿಯ ಜಪಗಳ |
ನಾರು ಮಾಡುವರವರಳಿವಿನೊಳು |
ಮಾರಹರನೈತಂದು ಹರುಷದೊಳವರ ಕರ್ಣದೊಳು ||
ತಾರಕ ಬ್ರಹ್ಮವನು ಬೋಧಿಸಿ |
ಸೇರಿಸುವ ಸಂಪದವನವರಿಗೆ |
ಧಾರುಣಿಯ ಭಯಮಿಲ್ಲ ಮುಕ್ತರ ಗತಿಯನೈದುವನು || ೫೫ ||

ಹಿಂದೆ ಮಾಡಿದ ವಿವಿಧಪಾತಕ |
ವೊಂದುಳಿಯದೊಲು ಕೆಡಿಸುವುದು ಕೇಳ್ |
ಮುಂದೆ ಬಹ ಪಾಪಾಂಕುರದ ಮೂಲಗಳ ಕೀಳುವುದು ||
ಇಂದು ತೋರಿಸುವಖಿಳ ವಿಘ್ನವ |
ಕೊಂದು ಕೂಗುವುದೀ ಪ್ರಣವಜಪ |
ವೆಂದು ಶಂಕರದಾಸಿಮಯ್ಯಂ ವಕ್ತ್ರಪಾದನೊಳು || ೫೬ ||

ವೇದಶಾಸ್ತ್ರಶ್ರುತಿಸ್ಮೃತಿಪುರಾ |
ಣಾದಿ ನಿಗಮಾಗಮುಗಳಾತ್ಮನ |
ವೇದಿಸಿಯೆ ತತ್ಕಾಲದುಚಿತಕ್ಕೊದಗಿಪುವು ಕೇಳಾ ||
ವಾದಿಗಳು ಕಂಗೆಟ್ಟು ಮುಂದಣ |
ಹಾದಿಗಾಣದೆ ಸುಮ್ಮನಿಹರಿದ |
ವೇದವೆಂದೇ ತಿಳಿದು ಜಪಿಸುತ ಪೋಗು ನೀನೆಂದ || ೫೭ ||

ಎನೆ ಹಸಾದವೆನುತ್ತ ವಂದಿಸಿ |
ಜನನಿಗಾನತನಾಗೆ ಸತ್ಯಾಂ |
ಬುನಿಧಿ ಶಿವದೇವಿಯರು ಜಂಗಮಪಾದತೀರ್ಥವನು ||
ತನಯಗಿತ್ತಳು ಮಗನೆ ಕೇಳ್[೩] ಜೀ |
ವನಕೆ ಜೀವನ ನಿನಗೆ ಮುಕ್ತ್ಯಂ |
ಗನೆಯು [೪]ಕೈದೊರಕುವುದು ಪಾದೋದಕವನೀಂಟೆನುತೆ[೪] || ೫೮ ||

---

೧ ಸ್ಮರಿ (ಇ.) ೨ ಹೃದಯುದಿ (ಇ.) ೩ ಕೋ ಮಗನೆ (ಇ, ಉ.) ೪-೪ ಕೈದಾರೋದಕವ ಪಾದೋದಕವನೆನುತೆ (ಇ, ಉ.)

ಆರರೆ ಜಂಗಮ ಪಾದತೀರ್ಥಂ |
ಗುರುಪದಾದೀಶ್ವರನ ಮೂರ್ತಂ |
ಧರಣಿಮುಖತತ್ವಕ್ಕೆ ಕರ್ತಂ ಪರಹಿತ ಪದಾರ್ಥಂ ||
ತುರಿಯ ಶಿವಸಂಧಾನದರ್ಥಂ |
ಪರಮ ವೇದಶ್ರುತಿಗಳರ್ಥಂ |
ಗರುವಗುಣಸಂಪೂರ್ತವೆಂದೊಲಿದಿತ್ತಳಾ ಲಲನೆ || ೫೯ ||

ಅಖಿಳ ಸಂಪದಕ್ಷೇತ್ರರಕ್ಷೋ |
ದಕ ಮನಾಶ್ರಯವಿಮಲಧೌತೋ |
ದಕಮವಿದ್ಯ ಪಿಪಾಸೆ ಪರಿಹರ ನಿರ್ಮಲೋದಕವು ||
ಸಕಲಭೋಗಾಹುತಿಗೆ ಪೋಷೋ |
ದಕವೆನಿಪುದೀ ಪರಮಪಾದೋ |
ದಕಮಿದಂ ಕೊಳ್ಳೆನುತ ಕೊಟ್ಟಳು ವಕ್ತ್ರಪಾದನಿಗೆ || ೬೦ ||

ನೆನೆದವಂ ತೀರ್ಥವನು ಲೋಕದ |
ಜನಕನಹ ಸ್ಮರಿಸಿದವ ತ್ರೈಭೂ |
ವನ ಪಿತಾಮಹನಪ್ಪ ಪಾದೋದಕವ ಕೊಂಡಾತ ||
ಘನಜಗತ್ಪ್ರಪಿತಾಮಹಂ ತಾ |
ನೆನಿಸಿ ತೀರ್ಥವ ಸೋಂಕಿದವ ಕೇಳ್ |
ಮನುಜ ಜಗದಯ್ಯನ ಪಿತಾಮಹನಯ್ಯನೆನಿಸುವನು || ೬೧ ||

ಮನಮೊಲಿದು ಕೊಂಡಾತ ಪಂಚಾ |
ನನಜಟಾಶಿರಮುಕುಟಮಂಡಿತ |
ತ್ರಿನಯನ ಮಲಿನಕಂಠ ಭುಜಗಾಭರಣ ಪವಳದೊಲು ||
ಮಿನುಗುವಚ್ಛವಿ ದಶಭುಜಂ ಮಾ |
ನಿನಿಯುತಾರ್ಧಾಂಗವ ಪಡೆದು ಶಿವ |
ನೆನಸಿ ಶಾಂಭವ ಲೋಕದೊಳಗಿಹ ವೃಷಭಗತನಾಗಿ || ೬೨ ||

ಸಿದ್ಧಿಸುವುದು ಶರೀರ ಘುಟಿಕಾ |
ಸಿದ್ಧಿಯಂಜನವಶ್ಯ ವಾಚಾ |
ಸಿದ್ಧಿ ದೂರಣದೃಷ್ಟಿ ದೂರಣಶ್ರವಣಗಳ ದೃಶ್ಯ ||
ಸಿದ್ಧಿ ಮೊದಲಾದಷ್ಟಕ ಮಹಾ[೧] |
ಸಿದ್ಧಿಗಳು ಕೈಯೊಡನೆ ನೀನಿದ |
ನುದ್ಧರಿಸಿಕೊಳ್ಳೆಂದು ಕೊಟ್ಟಳು ಪಾದತೀರ್ಥವನು || ೬೩ ||

---

೧ ಮೊದಲಾದಸಮುವಹ ಮಹ (ಉ.)

ಕರಿದೆನಿಪ ಕಾರ್ಬೊನ್ನ ವೇಧಿಸಿ |
ವರ ಸುವರ್ಣಚ್ಛವಿಯ ಮಾಡುವ |
ಪರುಷರಸವೆಂತಂತೆ ದೇಹದೊಳಿರ್ದ ದೋಷಗಳ ||
ಒರಸಿ ಸುಜ್ಞಾನ ಪ್ರಭೆಯು ವಿ |
ಸ್ತರಿಸಿ ದಿವ್ಯಾಂಗವನೊಡರ್ಚುವು |
ದರರೆ ಜಂಗಮಪಾದತೀರ್ಥಂ ಪರದ ಪುರುಷಾರ್ಥಂ || ೬೪ ||

ಗಂಗೆ ಗೋದಾವರಿ ಯಮುನೆ ಹೇ |
ಮಾಂಗಿ ಭಾಗೀರಥಿ ಸರಸ್ವತಿ |
ತುಂಗಭದ್ರಾ ಜಾಹ್ನವೀ ಸ್ನಾನದಿ ಫಲದಿಯಧಿಕಂ ||
ಜಂಗಮದ ಶ್ರೀಪಾದತೀರ್ಥವ |
ನಂಗದೊಳಯಿಕೆ ಕೊಂಡು ವಿಕ್ಕಿದ |
ಕಂಗಳಿಗೆ ಪೇರುರಕೆ ಶಿರಸಿಗೆ ತೊಡೆದುಕೊಂಡ ಫಲಂ || ೬೫ ||

ಉರಗವಿಷದಿಂದಳಿದವಂ ಶ್ರೀ |
ಗರುಡಮಂತ್ರೋದಕವ ಕೊಳಲಾ |
ಗರಳ ಪರಿವಂದದೊಲು ಭವಬಂಧದೊಳು ನೋವಾತ ||
ಪರಮ ಪಂಚಾಕ್ಷರಿಯ ಮಂತ್ರವ |
ಸ್ಮರಿಸಿ ಪಾದೋದಕವ ಕೊಂಡರೆ |
ಪರಿವುದಾತಗೆ ಜನ್ಮಭಯವೆಂದಿತ್ತಳಾ ಲಲನೆ[1] || ೬೬ ||

ಶಿವನ ಮಂಡೆಯು ಸೋಂಕಿದುದಕಂ |
ದಿವಿಜನದಿಯಾಯಿತ್ತು ಗಿರಿಜಾ |
ಧವನ ಮುದ್ರಾಂಕಿತದ ಪಾದವ ಸೋಂಕಿದಮಳಾಂಬು ||
ಭವಕೆ ಭಯಮಂ ಬೀರುತಿಹ ತೀ |
ರ್ಥವೆನಿಸಿದುದಗಜೇಶನಿಂದಂ |
ಶಿವನ ಮುದ್ರಾಧರರೆ ಪೂಜ್ಯರಲಾ ಮಹಾದೇವಾ || ೬೭ ||

ಹರುಷದಿಂದಾ ಪಾದತೀರ್ಥವ |
ಕರದೊಳಾಂತೊಗಿಸಧೊಲು ಕೊಂಡಂ |
ಬುರುಹಪಾದಕ್ಕೆರಗೆ ವಾದವ ಜಯಿಸು ಹೋಗೆಂದು ||
ಪರಸಿ ಶಿವದಾಸಿಯರು ಬೀಳ್ಕೊಡೆ |
ಕರುಣಸಾಗರ ಶಾಂಭವಗಣೇ |
ಶ್ವರತಿಲಕ ಹೊರವಂಟ ಮಾಹೇಶ್ವರರ ಗಡಣದೊಳು || ೬೮ ||

---

೧ ಳಾತಂಗೆ (ಇ, ಉ.)

ಎಡಬಲದಿ ರಾಜಿ[೧]ಸುವ ಚಾಮರ |
ಪಿಡಿದ ಸೀಗುರಿಯಾತಪತ್ರಗ |
ಕಿಡಿವಿಡದೆ ಪರಿವೇಷ್ಟನದಿ ಬಹ ಶಾಸ್ತ್ರಕೋವಿದರ ||
ಜಡಿವ ವೃಷಭಧ್ವಜಪತಾಕೆಯ |
ನುಡಿವ ಕಹಳೆಯ ವಾಧ್ಯಘೋಷದ |
ಗಡಣದೊಳಗಾ ವಕ್ತ್ರಪಾದಗಣೇಶನೈತಂದ || ೬೯ ||

ತೊಲಗಿ ಜಿನಸಂಹಾರ ಬಂದಪ |
ತೊಲಗಿ ಬೌದ್ಧಘರಟ್ಟ ಬಂದಪ |
ತೊಲಗಿ ಚಾರ್ವಾಕವನಿಜಕುಠಾರಂ ಇದೇ ಬಂದ ||
ತೊಲಗಿ ಸೌರನಿಶಾಟ ಬಂದಪ |
ತೊಲಗಿ ಸಾಂಖ್ಯಕರಾಳ ಬಂದಪ |
ತೊಲಗಿ ವಾದಿಗಳೆಂಬ ಕಹಳಾರವದೊಳೈತಂದ || ೭೦ ||

ಶೌರ್ಯ ಬಂದಂ ಷಡ್ದರ್ಶನಾ |
ಚಾರ್ಯ ಬಂದಂ ಶ್ರೀಮತು ಮಹಾ |
ವೀರ್ಯ ಬಂದ ಮಿಮಾಂಸವೈಷ್ಣವಮತಮಥನ ಬಂದ ||
ಆರ್ಯ ಬಂದಂ ಪರಸಮಯನಿಶಿ |
ಸೂರ್ಯ ಬಂದಂ ವೀರಶೈವಾ |
ದಾರ್ಯ ಬಂದ ನರೇಂದ್ರಸ್ಥಾನಕ್ಕಾಗ ವೈಭವದಿ || ೭೧ ||

ಕಂಡನಾ ಧರಣೀಶ ಮುಕ್ತಿಕ |
ರಂಡನಂ ಪರಮತತಿಮಿರಮಾ |
ರ್ತಂಡನಂ ಶ್ರೀರುದ್ರಗಣನಾಯಕನನೆರಡನೆಯ ||
ಖಂಡಪರಶುವ ಸಕಲ ಮಹಿಮಾ |
ಮಂಡನನ ಶಾಸ್ತ್ರಾಗಮಶ್ರುತಿ |
ಮಂಡಿತನ ಶ್ರೀವಕ್ತ್ರಪಾದನ ದಿವ್ಯ ಮೂರುತಿಯ || ೭೨ ||

ಒಡಲ ಭಸಿತೋದ್ಧೂಳನದ ಕೆಂ |
ಜೆಡೆಯ ರುದ್ರಾಕ್ಷಾವಿಕಲ್ಪದ |
ಜಡಿವ ಮಣಿಕುಂಡಲದ ನಿಡುಗಡ್ಡದ ತಳಿರ್ಗಾಸೆ ||
ಉಡಿಗೆ ಬಹಿರ್ವಾಸದ ಶ[೨]ತಪ್ರಭೆ |
ಕುಡಿವರಿವ ಸುಲಿಪಲ್ಲ ಕೆಯ್ಯೊಳು |
ಪಿಡಿದ ಕಾಸಾದಂಡದಧಿಕ ಗಣೇಶನಂ ಕಂಡ || ೭೩ ||

---

೧ ಥಾಳಿ (ಇ, ಉ.) ೨ ಸಿ (ಇ, ಉ.)

ಅರಸನಾತನ ಕಾಣುತೆದ್ದತಿ |
ಹರುಷದಿಂದಿದಿರ್ಕೈದಿ ಚರಣಾಂ |
ಬುರುಹಕಾನತನಾಗಲಾಯುಷ್ಮಾನು ಪಡೆಯೆಂದು ||
ಪರಸಿ ತಜ್ಜಯಸಿಂಹರಾಯನ |
ಕರವಿಡಿದು ಬಿಜಯಂಗೆಯಿದು ಭಾ |
ಸ್ಫುರಣಮಣಿಗದ್ದುಗೆಯೊಳಗೆ ಮಂಡಿಸಿದ ಗಣನಾಥ || ೭೪ ||

ಬಿಸಿಗದಿರ ಮೂಡಲ್ಕೆ ತಾರಗೆ |
ಯೆಸಕಮುಡುಗಿದವೋಲು ವಾದಿ |
ಪ್ರಸರದುನ್ನತ ಗಾಡಿಯಾತನ ಕಂಡ ಮಾತ್ರದೊಳು ||
ಮಸುಳಿಸಿದುದಂ ಕಂಡು ಭೂಪತಿ |
ನಸು ನಗೆಯ ಸಾರಸಮುಖಾಬ್ಜದೊ |
ಳೆಸೆದ ಹರುಷದಿ ವಕ್ತ್ರಪಾದನ ಗದ್ದುಗೆಯ ಕೆಲದಿ || ೭೫ ||

ಇಂದ್ರನೋಲಗದೊಳು ವಸಿಷ್ಠಮು |
ನೀಂದ್ರ ಕಂಗೆಸೆವಂತೆ ಗಂಧ |
ರ್ವೇಂದ್ರನೋಲಗದೊಳಗೆ ನಾರದಮುನಿಪನೆಸೆವಂತೆ ||
ಚಂದ್ರನೋಲಗದೊಳಗೆಯಾಂಗಿರ |
ಸೇಂದ್ರನೆಸೆವಂತೆಸೆದನಾ ಧರ |
ಣೀಂದ್ರ ಜಯಸಿಂಹನ ಸಭೆಯೊಳಾ ವಕ್ತ್ರಪಾದಮುನಿ || ೭೬ ||

ನೆನೆದ ಕಾರ್ಯಂ ಸಿದ್ಧಿಸಲಿ ಯೌ |
ವನಮುದಾಗಲಿ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿ ಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನ ಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೭೭ ||

**ಅಂತು ಸಂಧಿ ೧ಂಕ್ಕಂ ಪದ ೭೪ಂಕ್ಕಂ ಮಂಗಳಂ**

## ೧೧ನೆಯ ಸಂಧಿ

# ವಕ್ರಪಾದಮುನಿಯು ಪರಸಮಯವನ್ನು ಜಯಿಸಿದ್ದು

**ಸೂಚನೆ**

ವಾದಿ ಕೋಳಾಹಳನು ಶಿವತ |
ತ್ವಾದಿ ಕೋವಿದ ವಕ್ರಪಾದಗ |
ಣಾಧಿನಾಯಕ ಜಯಿಸಿದಂ ಪರಸಮಯದುತ್ಕಟವ ||

ಧರೆ ಕಬಂಧಂ ಕೃಷ್ಣವರ್ತ್ಮ[೧]ಂ |
ಮರುತನಮಲಾಕಾಶನತಿ ಭಾ |
ಸ್ಕರ ಕಲಾನಿಧಿಯಾತ್ಮ ಮೊದಲಾದಷ್ಟ ಮೂರುತಿಯ ||
ವರ[೧]ನೆನಿಸುತಂ ತ್ರೈಜಗವ ತ್ರೈ |
ಕರಣದಿಂದವೊಡರ್ಚುತಿಹ ಶಂ |
ಕರನೊಲಿದು ನಮಗೀಗೆ ನಮ್ಮಿಷ್ಟಾರ್ಥಸಿದ್ಧಿಗಳ || ೧ ||

ನಸು ನಗುತಲಾ ವಕ್ರಪಾದಂ |
ವಸುಮತೀಶ್ವರ ನಮ್ಮ ನೀ ಕರೆ |
ಯಿಸಿದ ಕಾರಣವೇನು ಪೇಳೆನೆ ರಾಯನಿಂತೆಂದ ||
ವಿಷಮದಿಂದೀ ವಾದಿ[೨]ಗಳು ವಾ |
ದಿಸುವೆನೆಂದರು ನಿಮ್ಮೊಡನೆ ಕರೆ |
ಯಿಸಿದೆನದು ಕಾರಣವೆನಲು ಮುನಿರಾಯನಿಂತೆಂದ || ೨ ||

ಆದೊಡುತ್ತಮ ಶಾಸ್ತ್ರಗಳಿಗುಂ |
ಟಾದುದೈಸೇ ಪರಸಮಯದೊಳು |
ವಾದಿಸುವ ಸಾಮರ್ಥ್ಯಮಿಲ್ಲದೊಡಿವರು ನಮ್ಮೊಡನೆ ||
ವಾದಮಂ ಬಯಸುವರೆ ಅದಕೇ |
ನಾದುದಿವರ ಮತಂಗಳೇನೆಂ |
ದಾದರಿಸಿ ಕೇಳಲ್ಕೆ ಭೂಪತಿ ಪೇಳ್ದನಿಂತೆಂದು || ೩ ||

---

೧ ಧರ (ಉ.) ೨ ಶಾಸ್ತ್ರಿ (ಇ, ಉ.)

ಇವರು ವೈಷ್ಣವರಿವರು ಪಾಶ್ಪತ |
ರಿವರು ಗಾಣಾಪತ್ಯ ಶಾಕ್ತೆಯು |
ರಿವರು ಶೈವರು ಪಾಂಚರಾತ್ರಿಕರಿವರು ಶಂಕರರು ||
ಇವರು ಸಾಂಖ್ಯಕಣಾದಮತದವ |
ರಿವರು ಕಾಪಾಲಿಕರು ಜಿನಮತ |
ಮಿವರು ವೈಖಾನಸರು ಮೀಮಾಂಸಪ್ರಭಾಕರರು || ೪ ||

ಇವರು ಭಟ್ಟರು ಶೂನ್ಯವಾದಿಗ |
ಳಿವರು ನೈಯಾಯಿಕರು ಯೋಗಿಗ |
ಳಿವರು ವೇದಾಂತಿಗಳಿವರು ಸಿದ್ಧಾಂತಯುತರಿವರು ||
ಇವರು ಬೌದ್ಧರು ಕರ್ಮವಾದಿಗ |
ಳಿವರು ಚಾರ್ವಾಕರು ದಿಗಂಬರ |
ರಿವರು ಪೌರಾಣಿಕರು ಕಾಪಿಲ ಕಾಲವಾದಿಗಳು || ೫ ||

ಇವರು ಪಾತಂಜಲರು ಯಾಜ್ಞಿಕ |
ರಿವರು ವೈಶೇಷಿಕ ಶಿಲಾದಕ |
ರಿವರು ಕಾಳಾಮುಖಿವಿರಕ್ತರು ಗೌತಮಿಗಳೆಂದು ||
ಅವರವರ ಮತಗಳ ಧರಿತ್ರೀ |
ಧವನೊರೆಯಲಾ ವಕ್ರಪಾದಂ |
ಶಿವ ಶಿವಾ ಕೇಳಿದೆವೆ ದೋಷವನೆನುತಲಿಂತೆಂದ || ೬ ||

ವೇದಬಾಹಿರರಾದ ಜೈನರು |
ವೇದಮಾರ್ಗಾಚಾರ್ಯರೆನಿಸುವ |
ವೈದಿಕರು ಕೂಡಿಹುದು ಗಂಗೆಯು ಜನನ ವಿಷ್ಣುವಿನ ||
ಪಾದದೊಳು ದಿಟವೆಂಬ ವೈಷ್ಣವ |
ರಾದಿ ಶಿವನಂಘ್ರಿಯೊಳಿಹುದು ದಾ |
ಮೋದರನ ಕಣ್ಣೆಂಬ ಶೈವರು ಕೂಡಿಹುದು ಮತವೇ || ೭ ||

ರಾಜನೇ ಪ್ರತ್ಯಕ್ಷದೈವಂ |
ನೈಜಮೆನುತಿಹ ಚಾರುವಾಕರು |
ರಾಜಭವನವ ಪೊಗಲು ಪಾತಕವೆಂಬ ಸದೆಶಿಗಳು ||
ಭೋಜನವನೆಲ್ಲೆಡೆಯ ಮಾಡಿ ನಿ |
ತಾಜರೆನಿಪವಧೂತರಸ್ಥಳ |
ಭೋಜನವನುಳಿದಿರ್ದ ತತ್ವಾದಿಗಳು ಕೂಡಿಹರೇ || ೮ ||

ಕೊಲ್ಲಬಾರದು ತಿನಬಹುದು ನುಡಿ[1] |
ಸೊಲ್ಲಿಸುವ ಬೌದ್ಧರು ಪಿಸಿತಮಂ |
ಮೆಲ್ಲೆ ಪಾತಕವೆಂಬ ಸನ್ಯಾಸಿಗಳು ಪ್ರಾಣಿಗಳ ||
ಕೊಲ್ಲುತಿಹ ಕಾಳಾಮುಖಿಗಳದು |
ಸಲ್ಲದೆಂದಾಡುವ ಕುಟೀಚರು |
ಗಲ್ಲಿಸದೆ ಕೂಡಿಹುದುಚಿತವೇ ನೋಡು ಭೂಪಾಲ || ೯ ||

ಚರಮೆ ಮೋಕ್ಷಮದೆಂಬ ಕಾಪಾ |
ಲರು ಚರಮಗತಿಯೆಂಬ ಯೋಗೀ |
ಶ್ವರರು ಕರ್ಮವೆ ಕರ್ತುವೆನುತಿಹ ಕರ್ಮವಾದಿಗಳು ||
ಅರರೆ ಕರ್ಮವೆ ಭವದ ಬೇರೆಂ |
ದೊರೆಯುತಿರ್ಪ ವಿರಕ್ತರಳುಕದೆ |
ಬೆರೆದಿಹುದು ಸನ್ಮತವೆ ಕೇಳೆಂದರಸನೊಳು ಪೇಳ್ದ || ೧೦ ||

ವಸ್ತು ಬೇರುಂಟಾತ್ಮನಿಂದೆನು |
ತಂತಿರಸ್ಕರಿಸುವ ನಿಷಾದರ್ |
ವಸ್ತು ತಾನೆನಿಸುತ್ತಿಹರು[2] ವೇದಾಂತಿಗಳು ಭೂತ ||
ವಿಸ್ತರಣ ಗಾಣಾಪತಿಗಳದ |
ನಾಸ್ತಿ ಮಾಳ್ಪಾಗಮಿಕರೊಳು ಪರಿ |
ಯಸ್ತಮಾಗಿಹುದುಚಿತವೇ ಭೂನಾಥ ಪೇಳೆಂದ || ೧೧ ||

ಮುಕ್ತಿ ಮಧುವಿಂದೆಂದೊದರುತಿಹ |
ಶಾಕ್ತೆಯರು ಮಧುವಂ ನೆನೆಯೆ ನಿ |
ರ್ಮುಕ್ತಿಮಾರ್ಗಂ ಸಹಜಮೆನುತಿಹ ಪಾಂಚರಾತ್ರಿಕರು ||
ಯುಕ್ತಿಯಿಂ ಸ್ವರ್ಗಾಪವರ್ಗಾ |
ಶಕ್ತಿಯೆಂಬ ಪುರಾಣಿಕರು ಸಂ |
ಯುಕ್ತಿ ಹಿಂಗಿದ ಕಾಪಿಲರು ಕೂಡಿಹುದು ಸನ್ಮತವೇ || ೧೨ ||

ಕ್ರತುವ ಮಾಡಿದೊಡಿಂದ್ರಪದಮೆಂ |
ಬತಿಶಯದ ಯಾಜ್ಞಿಕರು ನಾನಾ |
ಕ್ರತುಗಳಿಂ ಗತಿಯಿಲ್ಲವೆಂದಾಡುವ ವಿಖಾನಸರು ||
ರತಿಯೆ ತೂರ್ಯಾನಂದ ಮೋಕ್ಷೋ |
ನ್ನತಿಯೆನಿಪ ವಾತ್ಸ್ಯಾಯನರು ಕೇಳ್ |
ಸತಿಯ ನೆನೆಯದ ಪರಮಹಂಸರು ಕೂಡಿಹುದು ಮತವೇ || ೧೩ ||

---

೧ ಬಹುದೆನುತ (ಉ.) ೨ ತಾನಾತ್ಮನೆನುತಿಹ (ಇ, ಉ.)

ಭೂನುತ ದ್ರವ್ಯಗಳ ಮಿಗೆಯನು |
ಮಾನಿಸುವ ಸಾಂಖ್ಯರು ವಿಚಾರೋ |
ಕ್ತಾನುಭವವಡಗಿದ ದಿಗಂಬರರಿಷ್ಟವುಂ ತೊರೆದ ||
ಮಾನನಷ್ಟರು ದಿವ್ಯಪದ[೧]ಮುಂ |
ಧ್ಯಾನಿಸುವ ಸವಿಕಲ್ಪಕರು ಸಂ |
ಧಾನವಾಗಿಹುದುಚಿತವೇ ನೋಡೆಂದ ಗಣನಾಥ || ೧೪ ||

ವಿತತ ಮಾಯಾಬಂಧ[೨]ನದ ಪಾ |
ಶ್ಪತಿಗಳುಂ ಜಗನ್ಮಾತ್ರ ಮಾಯೋ |
ನ್ನತಿ ಸಹಜವೆಂದೊರೆವ ಮಾಯಾವಾದಿಗಳು ಸರ್ವ ||
ಗತವೆ ವಸ್ತುವದೆಂಬ ಸಾಂಖ್ಯರ |
ಮತದವರು ನಿಸ್ಸೀಮ ನಾಮಾಂ |
ಕಿತಮೆ ನಿಜಮೆಂಬದ್ವತಿಗಳುಂ ಕೂಡಿಹುದು ಗುಣವೇ || ೧೫ ||

ಪಾಪಪುಣ್ಯಗಳಿಲ್ಲವೆಂದೇ |
ವ್ಯಾಪಿಸುತ್ತಿ[೩]ಹ ಶೂನ್ಯವಾದಿಗ |
ಳಾಪತಿತರಂ ನೋಡದಿರ್ಪ ಕಣಾದ ಮತದವರು ||
ದೀಪಿಕೆಯೆ ನಿಜಮೆಂಬ ಸೌರರು |
ಶ್ರೀಪದಾಂಧವಿತಂಡರೊಡನಿಹು |
ದೇ ಪರಿಯ ಚಾರಿತ್ರವೆಂದತಿ ಗಜರಿದೆ[೪]ಲ್ಲರನು || ೧೬ ||

ಸ್ವಮತದೂಷಕರೊಡನೆ ಮಿತ್ರಾ |
ಗಮದಿ ನಡೆವವರವರ್ಗಳಿದರ್ಿ |
ಶ್ರಮಕೆ ಪ್ರೇಮದಿ ಪೋದವಂ ನಿಂದಕಗೆ ಭಕ್ತಿಯೊಳು ||
ನಮಿಸಿದವನವನಿರ್ದ ಪುರದೊಳು |
ಸುಮನದಿಂದಿರ್ದಾತನಿಪ್ಪಂ |
ಹಿಮಕರಂ ಭಾಸ್ಕರರಿಹನ್ನಬರಂ ಮಲಾಶ್ರಯದಿ || ೧೭ ||

ಇವರಿಗಿಂದೆ ವಿಶೇಷಪಾತಕ |
ಮಿವರೊಡನೆ ಮಾತಾಡಿದರೆ ಕೇ |
ಳಿವರ ಮುಖಗಳ ನೋಡಬಹುದೇ ಯೋಗ್ಯರಾದವರು ||
ಶಿವ ಶಿವಾ ಪಾತಕಕೆ ಹೆದರದ |
ರಿವರು ವಾದಕ್ಕಳುಕುವರೆ ಭೂ |
ಭವ ಪರಾಮರಿಸಿವರ ಸತ್ವವನೆಂದ ಗಣನಾಥ || ೧೮ ||

---

೧ ಲಯ (ಉ.) ೨ ಖಂಡ (ಇ, ಉ.) ೩ ವ್ಯಾಪರಿಸುತಿಹ (ಇ, ಉ.) ೪ ಜರಿದನೆ (ಇ. ಉ.)

ಹೋಗಲದಕೇನಾದುದೆಮಗಿದಿ |
ರಾಗಿ ಮಾತಾಡುವ ಸಮರ್ಥಕ |
ರೀ ಗರುವರೊಳಗಾರು ಪೇಳೆನಲೊರ್ವ ವೈಷ್ಣವನು ||
ಆಗಲಾಡಿದ ನಿಮ್ಮೊಡನೆ ನಾ |
ನೀಗ ಮಾತಾಡುವೆನೆನಲ್ಕನು |
ರಾಗದಿಂದಾ ವಕ್ತ್ರಪಾದಗಣೇಶನಿಂತೆಂದ || ೧೯ ||

ನೀನು ವೈಷ್ಣವಮತದೊಳಗೆ ವೈ |
ಖಾನಸನೊ ಭಾಗವತನೋ ವಹ |
ಮಾನಮೋಕ್ಷನೊ ಪಾಂಚರಾತ್ರನೊ ವೀರವೈಷ್ಣವನೋ ||
ಹೀನ ಶ್ರೀವೈಷ್ಣವನೊ ನಿನ್ನಭಿ |
ಧಾನಮತ ಪೇಳೆನಲಿನಿತುಮಂ |
ನಾನೆ ಬಲ್ಲಾತಂ ಪರೀಕ್ಷಿಸಿ ನೋಡು ನೀನೆಂದ || ೨೦ ||

ಆತ ನಗುತಿಂತೆಂದ ನೀ ಬ |
ಲ್ಲಾತನಾದೊಡರಣ್ಯದೊಳಗೆ ಕು |
ಜಾತನಾಗಿರದಿಲ್ಲಿಗೇತಕೆ ಬಂದೆ ಪೇಳೆನಲು ||
ಆತನಾಡಿದ ಕೇಳ್ ಗಣೇಶ ಕು |
ಜಾತರಿಹರೇ ವನದೊಳಗೆ ಕೇಳ್ |
ವಾತಭುಕರಿಹರೆನಲು ನುಡಿದಂ ವಕ್ತ್ರಪಾದಮುನಿ || ೨೧ ||

ವಾತಭುಕು ವಾಲ್ಮಿಕದೊಳಿಪ್ಪುದು |
ನೀತಿ ಕೇಳ್ವೈ ವನದೊಳಿಹವೇ |
ಮಾತು ಹಿಂಚಿತು ವನದೊಳಗೆ ಜಲಜಾತವಿಹವೆನಲು ||
ಆತನಾಡಿದ ಕೇಳ್ ಮುನಿಪ ಜಲ |
ಜಾತಷಂಡಂ ವನದೊಳಿಹವೇ |
ರೀತಿವೆತ್ತಿರ್ಪುವು ಪಯೋಧರಮಧ್ಯದೊಳಗೆನಲು || ೨೨ ||

ನುಡಿದನಾ ಗಣಪತಿ ಪಯೋಧರ |
ದೆಡೆಯದೆತ್ತಂ ಷಂಡಮೆತ್ತಂ |
ಬಿಡು ಬಿಡೇತರ ಮಾತು ಮುಕ್ತಾಹಾರ ನೀ ಪೇಳ್ದ ||
ಎಡೆಯೊಳಿಹವೆನೆ ವೈಷ್ಣವಂ ಮಾ |
ರ್ನುಡಿದನೊಲವಿಂದಂ ಪಯೋಧರ |
ದೆಡೆಯ ಮುಕ್ತಾಹಾರರಿವರಿಹ[೧] ಠಾವ ಕೇಳೆಂದ || ೨೩ ||

---

೧ ರಿಹರೇ (ಇ, ಉ.)

ಪರಮ ಶೂನ್ಯಾಲಯಮೆನಲು ಕೇಳ್ |
ಮರುಳೆ ಶೂನ್ಯಾಲಯದೊಳುಣ್ಣದ |
ರಿರರು ನಿಶ್ಚಯ ರಾಜನಿಹನೆನಲಾತನಿಂತೆಂದ ||
ಅರರೆ ಕೇಳ್ ಶೂನ್ಯಾಲಯಂಗಳೊ |
ಳಿರನು ರಾಜಂ ವಿಭವದಿಂ ನಿಜ |
ಪುರದೊಳಿಹನೆನೆ ವಕ್ರಪಾದಗಣೇಶನಿಂತೆಂದ || ೨೪ ||

ಪುರದೊಳಿಹನೇ ರಾಜ ಪುಸಿಯದು |
ಪುರದೊಳಿಹ ಹರಿಯೆನಲು ವೈಷ್ಣವ |
ನೊರೆದನಾ ಹರಿಯೆತ್ತ ಪುರಮೆತ್ತಂ ಹರಿಗೆ ವಾಸ ||
ಗಿರಿಯೆನಲು ಹರಿಗಿರಿಗೆ ಯೋಗ್ಯಮೆ |
ಗಿರಿಯೊಳಿಹ ಕರಕಂಠನೆನಲು |
ತ್ತರವನಾ ವೈಷ್ಣವನ ವಾಕ್ಯಕೆ ನಿಗ್ರಹಂಗಳನು || ೨೫ ||

ಮಾಡಿದಂ ಶಿವಶರಣ ವಾದಿಯೊ |
ಳಾಡಿದಂ ಕೇಳ್ ನಿನಗೆ ವಾಕ್ಫಲ |
ಬೇಡ ನಿನ್ನಯ ಮೋಕ್ಷಮಂ ಪ್ರತಿಪಾದಿಸೆನಲಾತ ||
ಪಾಡಳಿದು ಮೇಣೆಂದ ಮೋಕ್ಷದ |
ಬೀಡು ನಾರಾಯಣನೆನಲ್ಕಂ |
ತಾಡದಿರು ಸರ್ವಜ್ಞನಲ್ಲದವಂ ಮುಮುಕ್ಷಕನೇ || ೨೬ ||

ಎಂದ ಮಾತನು ಕೇಳಿ ವೈಷ್ಣವ |
ನೆಂದ ಹರಿ ಸರ್ವಜ್ಞನಲ್ಲದೊ |
ಡಂದಜಾಮಿಳ ಮರಣಗಾಲದಿ ನಾರಿಗಾ ಬಾರೋ ||
ಎಂದು ತನ್ನಾತ್ಮಜನ ಕರೆದೊಡೆ |
ಬಂದು ಮೋಕ್ಷವನೀಯನೇ ಎನೆ |
ಮಂದ ಹಾಸದಿ ವಕ್ರಪಾದಗಣೇಶನಿಂತೆಂದ || ೨೭ ||

ಬಂಧಿಸಿದ ಮೋಹದೊಳು ತನ್ನಯ |
ನಂದನನ ಕರೆಯಲ್ಕೆ ಸಂತಸ |
ದಿಂದೆ ತನ್ನಂ ಕರೆದನೆಂದಳಲಹುದೆ[1] ಸರ್ವಜ್ಞ ||
ರಂದವೇ ಸರ್ವಜ್ಞನಾಮು |
ಕ್ಕಿಂದುಧರನರುಹನೆನೆ ವೈಷ್ಣವ |
ನೆಂದ ಲಿಂಗಾರ್ಚನೆನಿಮಿತ್ತಂ ಮಡುವಿಗೈತಂದು || ೨೮ ||

---
೧ ದೆಳ್ತಹುದೆ (ಇ.)

ಕುಸುಮಗಳನು ಗಜೇಂದ್ರ ತಿರಿವು |
ತ್ತೈಸೆದಿರಲು ಕಡುಗೋಪದಿಂದಂ |
ಮೊಸಳೆ ಪಿಡಿಯಲ್ಕಾದಿಮೂಲಾ ಎಂದು ಮೊರೆಯಿಡಲು ||
ಶಶಿಧರನು ಸರ್ವಜ್ಞನಾದೊಡೆ |
ಬೆಸನಗೈದನೆ ವಿಷ್ಣು ಬಂದದ |
ನೊಸೆದು ಸಲಹಿದುದಿಲ್ಲವೇ ಹರಿಯಿಂದಧಿಕರುಂಟೇ || ೨೯ ||

ಎಂದು ವೈಷ್ಣವನಾಡೆ ಗಣವರ |
ನೆಂದನೊಬ್ಬಾನೊಬ್ಬ ಮೊರೆಯೋ |
ಎಂದು ರಾಯಗೆ ದೂರಿಡಲು ಕೇಳೊಲಿದು ತಳವಾರ ||
ಪಿಂ೧ದವನ ಮೊರೆಯಂ ವಿಚಾರಿಸು |
ವಂದಮಲ್ಲದೆ ಶಿವಗೆ ಮೊರೆಯಿ೨ಡ |
ಲೆಂದ ಜಂಗಮ೨ ವಿಷ್ಣು ಸಲಹಿದುದೆಂತು ಕೇಳ್ ಮತ್ತೆ || ೩೦ ||

ನುಡಿದ ಶಿವನೇ ಕರ್ತೃ ಭೃತ್ಯನು |
ಪೊಡವಿಯೊಳು ಹರಿಯೆನುತ ಶಾಸ್ತ್ರಂ |
ನುಡಿವುದೇ ಹರಿಮಯ ಜಗಂ ಶ್ರೀರಾಮ ದಶಕಂಠ ||
ಪೊಡವಿಯೊಳು ಕಲಿ ಭೀಮ ಬಾಣಂ |
ಮೃಡಶರಣರಂತಲ್ಲದೊಡೆ ಶಿವ |
ನಡಿಗಳನು ನೇತ್ರಾಂಬುಜದಿ ಪೂಜಿಸುವನೇ ವಿಷ್ಣು || ೩೧ ||

ಎಂದ ನುಡಿಯಂ ಕೇಳಿ ಮನದೊಳು |
ನೊಂದು ವೈಷ್ಣವನಾಡಿದಂ ಬಾ |
ಲೇಂದುಧರನಂಘ್ರಿಗಳ ನಯನದಿ ಪೂಜಿಸಿದ ಭಕ್ತ ||
ಇಂದಿರಾವರನೇ ಅಕಟ ಹೀ |
ಗೆಂದು ತಿಳಿದಿರೆ ಪುಂಡರೀಕಾ |
ಖ್ಯಂ ದಳೆದ ಮುನಿ ಶಿವನ ಪೂಜಿಸಿದುದನೆನಲ್ಕೆಂದ || ೩೨ ||

ಹರನ ಪೂಜಿಸಲಿಲ್ಲವೇ ಶ್ರೀ |
ಹರಿ ಕೃತದೊಳಿರ್ದುದನನೃತಮೆಂ |
ದೊರೆದೆ ದೃಷ್ಟಂ ರಾಮಚಂದ್ರಂ ಪೂಜಿಸಿದ ಲಿಂಗಂ ||
ಧರೆಯೊಳಿಪ್ಪುದು ಪುಸಿಯೆ ಪೇಳೆನ |
ಲೊರೆದ ವೈಷ್ಣವ ತಮ್ಮ ಶಾಸ್ತ್ರದೊ |
ಳೆರಡು ತೆರದ ವಿಭೂತಿ ಲೀಲಾ ನಿತ್ಯನಾಮದೊಳು || ೩೩ ||

---

೧ ಬಂ (ಇ, ಉ.) ೨-೨ ಡೆ । ಬಂದು ಗಜಮಂ (ಇ, ಉ.)

ಒಳವು ಕೇಳು ದಶಾವತಾರಂ |
ಗಳೆ ಹರಿಯು ಲೀಲಾವಿಭೂತಿಯ |
ಬೆಳೆಯದಂ ಪೂರ್ವೋಕ್ತಮೆನಿಸುತೆ ಮೆರೆವುದುತ್ತರದಿ ||
ಬೆಳಗುತಿರ್ಪುದು ನಿತ್ಯ ತೇಜಂ |
ದಳೆದು ನಾರಾಯಣಪೆಸರನಾಂ |
ತಳಿಯದೊಗೆಯದೆ ನಿತ್ಯ ನಿರುಪಾಧಿಯೊಳಗಿಹುದೆನಲು || ೩೪ ||

ಗಣಪನುಸುರಿದನಾದಿನಾರಾ |
ಯಣನೆ ಸ್ತ್ರೀರೂಪಾಗಿ ನಾರಾ |
ಯಣಿಯೆನಿಸಿ ಶಿವಸಂಗದೊಳಗಿಹನೆಂಬ ಶ್ರುತಿಯುಂಟು ||
ತ್ರಿಣಯನೇ ಪತಿ ವಿಷ್ಣುವೇ ಸತಿ |
ಗಣಿತಮೆನಲಾ ವಿಷ್ಣುಕಿಂಕರ |
ನಣಕವಾಡುತೆ ನುಡಿದ ಶಿವಸಮಯಾಗ್ರಗಣ್ಯನೊಳು || ೩೫ ||

ನೆತ್ತಿಗಣ್ಣನನರ್ಧನಾರಿಯೆ |
ನುತ್ತಿಹರು ದಾಮೋದರನ ಪುರು |
ಷೋತ್ತಮಾ ಎನುತಿಹರು ನೋಡಾ ನಾಮಭೇದಗಳ[೧] ||
ಹೊತ್ತು ಹೋಗದ ಮಾತನಾಡದಿ |
ರೊತ್ತರಿಸಿ ಶಿವನರಸಿ ಹರಿಯೆಂ |
ಬುತ್ತರವನೆನಲಾ ಗಣೇಶ್ವರನೆಂದನವನೊಡನೆ || ೩೬ ||

ಅರ್ಧ ದೇಹದಿ ಸತಿಯ ಧರಿಸ |
ಲ್ಕರ್ಧನಾರಿಯೆನಿಸಿದ ಶಿವ ಮುರ |
ಮರ್ದನಂ ಪದಿನಾರು ಸಾವಿರ ಗೋಪಿಯರ ಕೂಡ ||
ಅರ್ಧ ಗಳಿಗೆಗೆ ಷೋಡಶಕಲಾ |
ವರ್ಧನೆಯರಂ ಮಾಳ್ಪ ಗುಣದಿಂ |
ನಿರ್ಧರಿಸು ಪುರುಷೋತ್ತಮಾಖ್ಯವ ಪಡೆದ ಲೋಕದೊಳು || ೩೭ ||

ಇದರ ಭೇದವನರಿಯದಿಂತಾ |
ಡಿದೆಯಿದೇತಕೆ ವೈಷ್ಣವಾ ಕೇಳ್ |
ವಿದಿತ ಪ್ರಕೃತಿರ್ವಿಷ್ಣು ಪುರುಷೋ ರುದ್ರ ಎಂಬ ಶ್ರುತಿ ||
ಒದರುತಿದೆಯೆನೆ ಕೇಳಿ ವೈಷ್ಣವ |
ನೊದರಿದಂ ಭಾಳಾಂಬಕಾರೂ |
ಢ ದನುಜಾಂತಕ ಸರ್ಪಭೂಷಣ ಗರುಡನೆಂಬ ಶ್ರುತಿ || || ೩೮ ||

೧ ದೊಳು (ಇ, ಉ.)

ಪೇಳುತಿಹುದೆನೆ ಶಿವಶರಣನದ |
ಕೇಳಿ ನಸು ನಗುತೆಂದ ಗರುಡಗೆ |
ಭಾಳಲೋಚನ ಸರ್ಪಭೂಷಣಮಿರ್ದ ಕಾರಣದಿ ||
ಭಾಳನಯನಾರೂಢ ಮುರರಿಪು |
ವ್ಯಾಳಭೂಷಣ ಗರುಡನೆಂದೇ |
ಪೇಳುವುದು ಶ್ರುತಿಯೇಕ ಶಬ್ದಕನೇಕ ಪರಿಯರ್ಥ || ೩೯ ||

ಉಂಟು ತೆಂಗಾಯಿಗೆ ತ್ರಿಯಂಬಕ |
ಮುಂಟು ಚಂದನಕಹಿವಿಭೂಷಣ |
ಮುಂಟವೆಲ್ಲಾ ಶಿವನೆ ಹರಿಯೆದೆಯೊಳಗೆ ಪಾದಾಂಕ ||
ಉಂಟು ಪಾದಂ ಗೊರವರೆದೆಯೊಳ |
ಗುಂಟವಂದಿರು ವಿಷ್ಣುವೇ ಪೇ |
ಳುಂಟೆ ನಿಮ್ಮಾಗಮದೊಳೆನಲಿಂತೆಂದ ವೈಷ್ಣವನು || ೪೦ ||

ಮಧುಹರನ ವಕ್ಷದೊಳಗೊಳವೇ |
ಪದದ ರೇಖೆಯೆನಲ್ಕೆಯುಂಟೆನೆ |
ಪದದ ರೇಖೆಯುದಾರವೆನೆ ಭೃಗುಮುನಿಯುವೆಂದೆನಲು ||
ಎದೆಗದೇಕೈತಂದುದೆನೆ ಬಂ |
ದೊದೆದನೆನಲೇಕೊದೆದನೆನೆ ಕೇಳ್ |
ಮದದೊಳಿರ್ದನೆನಲ್ಕದೇತರ ಮಾತು ಪುಸಿಯೆಂದ || ೪೧ ||

ಪರಮ ಶ್ರೀವತ್ಸಾಂಕಿತವ ಮುನಿ |
ವರನ ಪಾದಾಂಕಿತವನೆಂಬರೆ |
ಹರಿಯನೊದೆವ ಸಮರ್ಥರುಂಟೇ ಮೂರು ಲೋಕದೊಳು ||
ಹರಿಯ ಮಹಿಮೆಯ ಪೊಗಳುವರೆ ಹ |
ನ್ನೆರಡು ಸಾವಿರ ಜಿಹ್ವೆಗಳವೇ |
ಅರರೆ ಸರ್ವಂ ವಿಷ್ಣುಮಯ ಜಗವೆಂಬುದಾಮ್ನಾಯ || ೪೨ ||

ಆದೊಡೇತಕೆ ನಮ್ಮೊಡನೆ ನೀ |
ವಾದಿಸಿದೆ ತ್ರೈಜಗದೊಳಗೆ ಲ |
ಕ್ಷ್ಮೀಧವನು ಪರಿಪೂರ್ಣನೆಂದೇ ನುಡಿದೆ ನಮ್ಮೊಳಗೆ ||
ಮಾಧವಂ ಸಂಪೂರ್ಣನಲ್ಲದೆ[೧] |
ಭೇದವೇ ನಾವ್ ಜಗಕೆ ಪಾತಕ |
ವಾದುದಲ್ಲಾ ನಿನಿಗೆ ಕರ್ತುವಿನೊಡನೆ ಸೆಣಸುವರೆ || ೪೩ ||

---
೧ ವೆ (ಇ.)

ಎಂದು ಗಣವರ ನುಡಿಯೆ ವೈಷ್ಣವ |
ನೆಂದ ಕೇಳೀ ಜಗದೊಳಗೆ ಪೂ |
ರ್ಣೇಂದುಕಿರಣಂ ಭರಿತವಾಗಿಯೆ ತನ್ನ ನಿಜಯೋಗ ||
ಚಂದಕಾಂತದೊಳಾದವೊಲು ಕೇ |
ಳಿಂದಿರಾಪತಿ ಮೂಜಗಂಗಳೊ |
ಳೊಂದಿಹಂ ಚೈತನ್ಯ ವೈಷ್ಣವರೊಳಗೆ ಬೆರೆದಿಹುದು || ೪೪ ||

ಶ್ರೀಧರನ ಚೈತನ್ಯ ನಿಮ್ಮೊಳು |
ವೇಧಿಸಿಹುದಲ್ಲದೊಡೆ ಕಾಮ |
ಕ್ರೋಧ ಮದ ಮತ್ಸರಿಯು ಲೋಭಂ ಮೋಹ ಪಲ್ಲವಿತ ||
ವಾದುವೇ ಷಡುವರ್ಗರೂಪಂ |
ಶ್ರೀಧವಾ ಎಂದೆನುತಥರ್ವಣ |
ವೇದ ನುಡಿದುದೆನಲ್ಕೆ ವೈಷ್ಣವನೆಂದನಿಂತೆಂದು || ೪೫ ||

ವರ್ಗವಾತನ ಮಾಯೆ ಹರಿಯಪ |
ವರ್ಗರೂಪನೆನುತ್ತೆ ವೇದಂ |
ಭೋರ್ಗರೆವುದಾ ಪ್ರಕೃತಿಯೇ ತಮ ಪುರುಷ ಸತ್ವಗುಣಂ ||
ಭರ್ಗನೇ ತಾಮಸಗುಣಾನ್ವಿತ |
ಭಾರ್ಗವೀಪತಿಗಮಳ ಸತ್ವಾಂ |
ತರ್ಗತಮವಾಗಿಹುದೆನಲು ಗಣನಾಥನಿಂತೆಂದ || ೪೬ ||

ಒಳಗೆ ಸತ್ವಂ ಹೊರಗೆ ತಮ ಸಿತ |
ಗಳಗೆ ಕೃಷ್ಣಗೆ ಹೊರಗೆ ಸಾತ್ವಿಕ |
ವೊಳಗೆ ತಾಮಸವೊಳಹೊರಗೆ ರಾಜಸವಜಗೆ ತಾವ್ರು ||
ಕಳಸದೊಳು ಸಿಂದೂರವಿಪ್ಪೊಲು |
ನಳಿನಜಂ ಪೀಯೂಷ ನೀಲದ |
ಕಳಸದೊಳು ತೀವಿದೊಲು ಶಿವ ಕಜ್ಜಳವ ಸಿತ ಭಾಂಡ || ೪೭ ||

ದೆಡೆಯೊಳಿಪ್ಪೊಲು ವಿಷ್ಣುವೆನಲವ |
ನುಡಿದ ಸಾತ್ವಿಕ ರಕ್ಷಿಸುವ ಗುಣ |
ಕೆಡಿಸುವುದು ತಾಮಸಗುಣಂ ಸೃಜಿಸುವುದು ರಾಜಸವು ||
ಪಡೆವನಜ ರಕ್ಷಿಸುವ ಮಾಧವ |
[1]ಬಿಡದೆ ಸಂಹರಗೈವ ರುದ್ರಂ[1] |
ನುಡಿದುದು ಶ್ರುತಿಯೆನೆ ನಗುತ ಗಣನಾಥನಿಂತೆಂದ || ೪೮ ||

---

೧-೧ ಕೆಡಿಸುವಂ ಶ್ರೀರುದ್ರನೆಂದೇ (ಇ, ಉ.)

ರಾಜಸಂ ತಾಮಸವು ಸಾತ್ವಿಕ |
ರಾಜಿಪುವು ಪದ್ಧತಿಯೊಳಗೆಯಾ |
ರಾಜಸಾದಿ ಗುಣಂಗಳುತ್ಪತ್ಯಾದಿ ಸ್ಥಿತಿಲಯದಿ ||
ರಾಜಿಸುವುದಾ ಕ್ರಮದೊಳವರಧಿ |
ರಾಜರಜ ಹರಿ ರುದ್ರರಲ್ಲದೆ |
ವ್ಯಾಜವೇತಕೆ ಪುಸಿಯನಾಡದಿರೆನಲವಂ ನುಡಿದ || ೪೯ ||

ಆದಿಮಧ್ಯಾಂತಗಳ ತಮರಜ |
ಸಾದಿ ಸತ್ವಾಂತಗುಣದೊಳು ಮಿಗೆ |
ವೇದಿಸಿದರವರೋಹಣೋಕ್ತದಿ ಹರಿಹರಬ್ರಹ್ಮ ||
ರಾದಿಯಂತಾಂತರದಿ ಕ್ರಿಯೆಗಳು |
ಸಾಧಿಸಿಹವುತ್ಪತ್ತಿಸ್ಥಿತಿಲಯ |
ವೇದವೆನೆ ಗಣನಾಥನಾ ವೈಷ್ಣವನೊಳಿಂತೆಂದ || ೫೦ ||

ಯುಕ್ತಿಯೀ ನುಡಿ ಬಿಡು ಬಿಡೆಲೊ ವೇ |
ದೋಕ್ತಮಲ್ಲಂ ವಾಕ್ಛಲದಿ ಮಿಗೆ[೧] |
ಯುಕ್ತಿಯಿಲ್ಲದೆ ಸೋತೆ ಮೊದಲೇಕಿನ್ನು ನಮ್ಮೊಡನೆ ||
ಯುಕ್ತಿಗಳ ಪಸರಿಸದಿರಾವ್ನಾ |
ಯೋಕ್ತಮುಳ್ಳೊಡೆ ಪೇಳು ಗ್ರಾಹಕ |
ಶಕ್ತಿಯಿಲ್ಲದೊಡೇಳೆನುತೆ ಗಣನಾಥನಿಂತೆಂದ || ೫೧ ||

ಶ್ವೇತವರ್ಣಂ ಸತ್ವಗುಣ ಕೇಳ್ |
ಪೀತವರ್ಣಂ ರಾಜಸಗುಣಂ |
ರೀತಿವೆತ್ತುದು ಕೃಷ್ಣವರ್ಣದೊಳತಿ ತಮೋಗುಣವು ||
ಶ್ವೇತವರ್ಣಂ ಪಂಚವದನಂ |
ಪೀತವರ್ಣಂ ಪಿತಮಹ ಮುರಾ |
ರಾತಿ ನೀಲಮದಲ್ಲವೇ ನೋಡವರೊಳಗೆ ಗುಣವ || ೫೨ ||

ನಗುತಲೆಂದನು ವೈಷ್ಣವನು ಕೃತ |
ಯುಗದಿ ಹರಿ ಶ್ವೇತಾಂಗ ತ್ರೇತಾ |
ಯುಗದಿ ಹರಿ ಪೀತಾಂಗ ದ್ವಾಪರದೊಳಗೆ ರಕ್ತಾಂಗ ||
ನಗಧರಂ ಕೃಷ್ಣಾಂಗನೀ ಕಲಿ |
ಯುಗದೊಳಾಗಿಹನೆಂದು ವೇದಂ |
ಪೊಗಳುತಿರ್ಪುವು ಕೃಷ್ಣವರ್ಣವೆ ಸಹಜಮಲ್ಲೆಂದ || ೫೩ ||

---
೧ ಸಾಕು ಮಿಗೆ ನೀ (ಇ, ಉ.)

ಕೇಳಿದಂ ಗಣನಾಥನವನೊಳು |
ಪೇಳಿದಂ ನಾನಾ ವಿಕಾರವ |
ತಾಳಿದುದು ವಸ್ತುವೆ ಎನಲ್ಕವನೆಂದ ಖಾತಿಯೊಳು ||
ಕೇಳು ಜಗದುತ್ಪತ್ತಿಕಾರಣ |
ತಾಳಿದಂ ನಾನಾ ಪರಿಯನೀ |
ರೇಳು ಲೋಕಗಳಯ್ಯನಯ್ಯನ ತಂದೆಯಾದುದರಿಂ || ೫೪ ||

ಎಂದನಾ ಗಣನಾಥ ರುದ್ರನೆ |
ತಂದೆ ಗಂಗೆಯೆ ಮಾತೆ ತ್ರಿಜಗ |
ಕ್ಕೆಂದುದಲ್ಲದೆ ಲಕ್ಷ್ಮೀಯೇ ನಿಜ ಮಾತೆ ಮುರಹರನೇ ||
ತಂದೆಯೆಂದುದೆ ವೇದ ಬಾಯಿಗೆ |
ಬಂದ ಹಾಗಾಡುವರೆ ಕೇಳ |
ರ್ಧೇಂದುಶೇಖರನೇ ಜಗಂಗಳ ಪಡೆದ ಪಿತೃಪುರುಷ || ೫೫ ||

ಪಡೆದ ಜಗವಂ ಬ್ರಹ್ಮ ರಕ್ಷಿಸ |
ಕೆಡಿಸಲರಿಯಂ ವಿಷ್ಣು ಲೋಕವ |
ಪಡೆಯಬಲ್ಲಂ ಸಲಹಬಲ್ಲಂ ಕೆಡಿಸುವುದನರಿಯಂ ||
ಪಡೆಯಬಲ್ಲಂ ಸಲಹಬಲ್ಲಂ |
ಕೆಡಿಸಬಲ್ಲನು ರುದ್ರನೆಂದೇ |
ನುಡಿವುದೈ ಶ್ರುತಿಯದುನಿಮಿತ್ತಂ ಶಿವನೆ ಜಗದಯ್ಯಂ || ೫೬ ||

ಶಿವನೆಯಶ್ವತ್ಥಾಮನಾದವ |
ಶಿವನೆ ದೂರ್ವಾಸಮುನಿಯಾದವ |
ಶಿವನೆ ಕೇಳಾದಿಯೊಳು ಬ್ರಹ್ಮಜ ಬ್ರಹ್ಮನೇ ಲಕ್ಷ್ಮೀ ||
ಧವನ ಸುತನೆಂದೊಳವು ವೇದಂ |
ವಿವರವರಿಯದೆ ನುಡಿವರೇ ಎನೆ |
ಶಿವಶರಣ ಕೋಪದೊಳು ಘೂರ್ಮಿ[೧]ಸಿ ನುಡಿದನವನೊಡನೆ || ೫೭ ||

ಪರಮ ಮಾಂಗಲ್ಯಕ್ಕೆ ಸ್ವೇಚ್ಛಾ |
ಮರಣಿಗಳಿಗೆ ಮುಮುಕ್ಷಿಗಳಿಗು |
ತ್ತರ ಶಿವಾಖ್ಯ ಮುಮುಕ್ಷು ದೂರ್ವಾಸಮುನಿಯು ಸ್ವೇಚ್ಛಾ ||
ಮರಣಿಯಶ್ವತ್ಥಾಮ ಮಂಗಳ |
ಭರಿತನಾದ ಸನತ್ಕುಮಾರನ |
ಸರಸಿಜೋದ್ಭವ ಪಡೆದನಾತನ ಪಡೆದ ಶ್ರೀ ವಿಷ್ಣು || ೫೮ ||

---

೧ ಗರ್ಜಿ (ಇ, ಉ.)

ಪಡೆದ ವಿಷ್ಣುವ ರುದ್ರ ರುದ್ರನ |
ಪಡೆದನೀಶ್ವರನೀಶ್ವರನ ಮಿಗೆ |
ಪಡೆದ ಮಾಹೇಶ್ವರ ಮಹೇಶನ ಕೇಳ್ ಸದಾಶಿವನು ||
ಪಡೆದನೊಲಿದು ಸದಾಶಿವನ ನೆರೆ |
ಪಡೆದ ಶಿವ ಶಿವನೇ ಸ್ವಯಂಭುವ |
ನುಡಿಯಬಹುದೇ ವಿಷ್ಣುಸುತ ಶಿವನೆಂದೆಲವೊ ನೀನು || ೫೯ ||

ಎಂದ ಮಾತಂ ಕೇಳಿ ವೈಷ್ಣವ |
ನೆಂದ ಕರ್ಮವೆ ವಿಷ್ಣು ಕರ್ಮದೊ |
ಳೊಂದಿಹುದು ವಿಶ್ವಂಗಳಾ ಸೃಷ್ಟಿ ಸ್ಥಿತಿಯು ಲಯವು ||
ತಂದೆಯಲ್ಲದೆ ವಿಷ್ಣು ವಿಶ್ವಪ |
ಮಂದರಧರಂ ಸಹಜಮೆನಲಿಂ |
ತೆಂದ ಯಜ್ಞಂ ವಿಷ್ಣು ಯಜ್ಞೇಶ್ವರ ಮಹಾರುದ್ರ || ೬೦ ||

ಎಂದುದಾಮ್ನಾಯಂ ವಿದಿತ ಮ |
ತ್ತೊಂದು ಶ್ರುತಿ ಪೇಳಿದುದು ಕೇಳೆಲೆ |
ಮಂದಮತಿ ವಿಶ್ವಂ ಮುರಾಂತಕ ವಿಶ್ವಪತಿ ರುದ್ರಂ ||
ಎಂದು ನಿರುಪಾಧಿಕ ಮಹೇಶ್ವರ |
ನಿಂದಿರಾವಲ್ಲಭನುಪಾಧಿಕ |
ನೆಂದು ರುಗ್ವೇದಾದಿ ವೇದಗಳಂದೊರಲುತಿಹವು || ೬೧ ||

ಎನೆ ನಗುತಲಾ ವೈಷ್ಣವಂ ಶ್ರೀ |
ವನಿತೆಯರಸನುಪಾಧಿಕನೆ ರು |
ದ್ರ ನಿರುಪಾಧಿಕನಾದೊಡೇತಕೆ ವಿಷ್ಣುಪದದೊಳಗೆ ||
ಜನಿಸಿದುದಕವ ಶಿರದೊಳಾಂತಿಹ |
ನೆನೆ ಗಳಹದಿರು ವಿಷ್ಣುಪದವೆಸ |
ರನು ತಳೆದುದಾಕಾಶಮದರೊಳು ಗಂಗೆ ಜನಿಸಿದಳು || ೬೨ ||

ಈಶನಂಘ್ರಿಗಳೇ ಭುಜಂಗನಿ |
ವಾಸ ಶಿವನ ಕಿರೀಟಮೇಯಾ |
ಕಾಶಮಾದುದರಿಂದೆ ಗಂಗಾಮುಕುಟ ಬಾಲೇಂದು ||
ಭೂಷಣಾಖ್ಯ ಶಿವಂಗೆ ಸೌಂದರ |
ನಾಶೆಯಿಂ ಧರಿ[1]ಸಿದನೆ ಕೇಳ್ ಜಗ |
ದೀಶನಾದ್ಯಂತವನರಿವರುಂಟೇ ಮಹಾದೇವಾ || ೬೩ ||

---

೧ ದಿರಿ (ಇ, ಉ.)

ಹರಿಯಜರ ಮಧ್ಯದೊಳು ಜ್ಯೋತಿ |
ಸ್ಫುರಣಲಿಂಗಮದಾಗೆ ನಳಿನಜ |
ಶಿರವ ಕಂಡಪೆನೆಂದು ಪದ್ದಾಗೆಯ್ದೆ ಶ್ರೀ ವಿಷ್ಣು ||
ಚರಣಮಂ ಕಂಡಪೆನೆನುತೆ ಸೂ |
ಕರನ ರೂಪಾಗೆಯ್ದೆ ಕಂಡರೆ |
ಹರನ ಮುಗುಟವ ಪಾದಗಳನೆನಲಾತನಿಂತೆಂದ || ೬೪ ||

ಮಾಧವಂ ಪರಮೇಶ್ವರನ ಶ್ರೀ |
ಪಾದಮಂ ಕಾಂಬುದಕೆ ಸೂಕರ |
ನಾದುದಿಲ್ಲವಲಾ ಹಿರಣ್ಯಾಕ್ಷನ ವಧೆನಿಮಿತ್ತಂ ||
ಆದನಲ್ಲದೆ ನೀವು ಮಿಥ್ಯಾ |
ವಾದದಿಂದಾಡಿದೊಡೆ ಕೊರತೆಯೆ |
ಶ್ರೀಧರಂಗೆನುತಶ್ರು ನೇತ್ರದೊಳೊಗುತಲಿಂತೆಂದ || ೬೫ ||

ಹರಿಯ ಮಾಯಾಮೂರ್ತಿಯೇ ಕೇಳ್ |
ತರುಣಿರೂಪಂ ತಳೆದು ನಿಮ್ಮೀ |
ಶ್ವರನ ದೇಹಾರ್ಧದೊಳು ಮುಸುಕಿಹುದೆಮ್ಮ ವಿಷ್ಣುವಿಗೆ ||
ಸರಿಯೆ ನೋಡಾ ವಿಷ್ಣು ಮಾಯಾ |
ವರಣರಾಗದರೊಳರೆ ಪೇಳೆನೆ |
ಹರಶರಣ ನಸು ನಗುತಲಾ ವೈಷ್ಣವನೊಳಿಂತೆಂದ || ೬೬ ||

ಸ್ಮರಮದಾಂತಕಮೂರ್ತಿ ಕೇವಲ |
ಪುರುಷನಲ್ಲಂ ಕೇಳು ಕೇವಲ |
ತರುಣಿಯಲ್ಲಂ ಪುರುಷನರ್ಧಾಂಗಂ ಯುವತಿಯರ್ಧ ||
ಶರಿರಮಾಗಿ ನಪುಂಸಮಂ ಸ್ತ್ರೀ |
ಬೆರಕೆಯಾಗದ ಮೂರ್ತಿಯಾದೀ |
ಶ್ವರಗೆ ಮಾಯಾಸಂಗಮುಂಟೇ ಎಂದನಾ ಮುನಿಪ || ೬೭ ||

ತಾಮಸದ ನಿಜ ಮಾಯೆ ಸೂರ್ಯೋ |
ದ್ಧಾಮ ಶಿವನೆಂದೊದರುತಿರ್ಪುದು |
ಸಾಮ ಕೇಳಾದಿತ್ಯವರ್ಣಕ ಭಾಸ್ವರಾ[೧] ಎಂದು ||
ಶ್ರೀಮಹಾದೇವನ ಪೊಗಳುತಿಹು |
ದಾಮಲ ಶ್ರುತಿಗಳು ಪ್ರಕೃತಿಯೇ
ವಾಮದೇವನ ವೇದಿಸಿಹವೆನಲಾತನಿಂತೆಂದ || ೬೮ ||

---
೧ ದ ಈಶ್ವರಾ (ಇ. ಉ.)

ಧರೆಯರಿಯೆ ಶ್ರೀವಿಷ್ಣು ಭಸ್ಮಾ |
ಸುರನ ವಧೆಸನ್ಮೋಹನಾನ್ವಿತ |
ತರುಣಿಯಾಗಲೊಡಂ ಮಹೇಶ್ವರ ಕಂಡು ಭ್ರಮೆಗೊಂಡು ||
ವರಿಸಿತಿಲ್ಲವೆ ಪೇಳೆನಲು ಶಂ |
ಕರಶರಣನಿಂತೆಂದನಂದಾ |
ಸುರನು ಹರಿಹರರಿಂದೆ ಜನಿಸಿದ ಪುತ್ರನಿಂದಳಿವ || ೬೯ ||

ಶಾಪಮುಂಟಾಗಿರ್ದ ಕಾರಣ |
ಶ್ರೀಪತಿಯೊಳ್ರತಿ ಮಾಡೆ ಭೈರವ |
ರೂಪಮಂ ಪಡೆದಂ ಮಹೇಶ್ವರನೆಲವೊ ನೀನರಿಯ ||
ದೀಪಕ್ಕಿಯೊಳಾಡುವರೆ ಭ್ರಮೆ ಗಿರಿ |
ಜಾಪತಿಯೊಳುಂಟೇ ಸದೋಷಾ |
ರೋಪಣೆಯ ಮಾಡದಿರು ಶಂಕರಗೆಂದರವನೆಂದ || ೭೦ ||

ದೋಷಿಯಲ್ಲವೆ ರುದ್ರ ಮಾಡಿದ |
ದೋಷಗಳ ವಿಸ್ತರಿಪೆ ಕೇಳು ಗ |
ಣೇಶ ಯಾಗವ ಕೆಡಿಸಿದಂ ಬ್ರಹ್ಮನ ಶಿರವನರಿದ ||
ವಾಸುದೇವನ ಮಗನನುರುಹಿದ |
ದೇಶವರಿಯಲು ಕೃಷ್ಣ ಪಶುವ ಮ |
ಹಾ ಶರದೊಳೆಚ್ಚಂ ಶಿಶುಪಶುಬ್ರಹ್ಮಘಾತಕನು || ೭೧ ||

ಎಂದ ಮಾತಂ ಕೇಳಿ ಗಣವರ |
ನೆಂದ ಬಹು ಕ್ರತುಗಳ ಕೆಡಿಸಿದ ಪು |
ರಂದರನೆ ಪಶುವಧೆಯ ಮಾಡಿದ ಯಾಜ್ಞಿಕಾಹ್ವಯಗೆ ||
ಬಂದು ದೋಷಂ ಪೊರ್ದುವುದೆ ಕೇ |
ಳೊಂದು ಸುಪವಿತ್ರಾಂಗಿಗಳ ಸಂ |
ಬಂಧವಾಗದು ದೋಷವೆನಲಾ ವೈಷ್ಣವಂ ನುಡಿದ || ೭೨ ||

ಲಾಲಿಸವರಂತಾ ಪವಿತ್ರನೆ |
ಶೂಲಿ ಪೆಣನಂ ಪೊತ್ತು ಬ್ರಹ್ಮಕ |
ಪಾಲಗಳ ತಿರಿದುಂಡು ಸುಡುಗಾಡಿನೊಳಗಿಹನಸ್ಥಿ ||
ಮಾಲೆಯಂ ಧರಿಸಿರ್ಪ ತೊವಲಂ |
ಲೀಲೆಯಿಂ ಪೊದೆದಿರ್ಪ ಕೇಳು ಸ |
ಚೇಲಸ್ನಾನವದಲ್ಲವೇ ಇವ ಸೋಂಕಿದರಿಗೆಂದ || ೭೩ ||

ಅರರೆ ವಿಷ್ವಕ್ಸೇನನಾಹಂ |
ಕರಿಸಲೆದೆಯಂ ತುಳಿದು ಕೋಪದಿ |
ಕರದ ಶೂಲದಿ ತಿವಿದು ನೆಗಪಲ್ಕಾತನಿತೆಂದ[1] ||
ಹರಿಯಜರು ಕಾಣದ ಕಿರೀಟವ |
ಚರಣಕಮಲವ ಕಂಡೆನೆನೆ ಹರ |
ಕರುಣದಿಂ ಮೆಚ್ಚಿದೆನು ನಿನ್ನಿಷ್ಟವನು ಬೇಡೆನಲು || ೭೪ ||

ನಿನ್ನ ಶೂಲದೊಳಾವ ವೇಳೆಯೊ |
ಳೆನ್ನ ಪೊತ್ತಿರೆನಲ್ಕೆ ಧರಿಸಿದ |
ಪನ್ನಗಾಧರನವನ ಕಾಯುವ ಪೆಣನ ಪೊತ್ತಪನೇ ||
ತನ್ನ ತಾನರಿಯದೆ ಪಿತಾಮಹ |
ನುನ್ನತವನಾಡಲ್ಕವನ ತಲೆ |
ಯಂ ನಿಮಿಷದೊಳು ಕತ್ತರಿಸಲಾ ಶಿರಮೊಲಿದು ಪೊಗಳೆ || ೭೫ ||

ಕರುಣದಿಂ ಶಿವ ಮೆಚ್ಚಿ ನಿನ್ನು |
ತ್ತ[2]ರದಭೀಷ್ಟವ ಬೇಡೆನಲು ತಲೆ |
ಯೊರೆದುದಿಂದುರೆ ಶಚಿಯರುಂಧತಿ ಮೇನಕಾತ್ಮಜೆಯ ||
ಕರದ ಭಿಕ್ಷಮನುಣ್ಣಬೇಕೆನೆ |
ತಿರಿದದಕ್ಕೊಡಿಸಿದನಲ್ಲದೆ |
ಯುರು ಕಪಾಲದೊಳುಂಬನೇ ಪುಸಿಯೆಂದ ಗಣನಾಥ || ೭೬ ||

ಪ್ರೇತಭೂಮಿಯೊಳಿರೆ ಮಹೇಶಗೆ |
ಪಾತಕವೆ ಸುಡುಗಾಡಿನೊಳಗವ |
ಧೂತನಿರ್ದಪನಿರ್ದೊಡಾತನ ದೊಡ್ಡಿತಕೆ ಕುಂದೇ ||
ಜಾತಿಜಿತನಸ್ಥಿಗಳ ತೊಟ್ಟೊಡೆ |
ಬಾತೆಗೆಡುವನೆ ಎನಲು ಪಾಪಾ |
ರಾತಿ ಗಂಗೆಯೊಳಿಡಲು ಗಂಗೆಯಯೋಗ್ಯಮಾದಪುದೆ || ೭೭ ||

ಹಸಿಯ ತೊವಲ ಮಹೇಶ ಪೊದೆದೊಡೆ |
ಮುಸುಳಿಸುವುದೇ ಮಹಿಮೆ ಪುಲ್ಲೆಯ |
ಪಸಿಯ ಚರ್ಮವ ಯಾಜ್ಞಿಕರು ಪೊದೆದಿಹರವಂದಿರನು ||
ಮುಸುಕುವುದೆ ಪಾತಕಮಿದೆಂತುಟು |
ವುಸುರಿದೆ ಎಲೈ ವೈಷ್ಣವಾ ಕೇ |
ಳಸಮನೇತ್ರನ ಕೆಳಗಿಹಂ ಶ್ರೀ ವಿಷ್ಣುವೆನಲಾತಂ || ೭೮ ||

---

೧ ನೊಲವಿಂದೆ (ಇ, ಉ.)  ೨ ತ್ಕ (ಇ, ಉ.)

ನುಡಿದನುದಕ ಪ್ರಳಯದೊಳು ತ |
ನ್ನೊಡಲೊಳಿಹ ಭುವನಂಗಳಂ ಮಿಗೆ |
ಮಡಗಿ ವಟಪತ್ರದೊಳಗಿಹ ಹರಿ ಹರಿಗೆ ಮೇಲಾದ[೧] ||
ಮೃಡನಿಹುದು ಪುಸಿಯೆನಲು ಗಣವರ |
ನುಡಿದ ಹರಿಯಿದ್ದಾಲದೆಲೆ ಬೆ |
ಳ್ನೊಡಲನಲ್ಲವೆ ಕೇಳೊಡಂಬಡಿಸುವೆ ಶ್ರುತಿಗಳಿಂದೆ || ೭೯ ||

ಪ್ರಣವ ವಟಮೌಲ್ಯಂ ಪರಮ[೨] ಶಿವ |
ನೆನುತಿಹುದು ಶ್ರುತಿ ವಿಷ್ಣುವಿಂ ರು |
ದ್ರನೆಯುಪರಿಯೆಂಬುದಕೆ ತದ್ವಿಷ್ಣೋ ಪರಮ ಪದವಿ[೩] ||
ಎನುತಿಹುದು ಶ್ರುತಿ ಜಗಕೆ ಶಿವನೊ |
ಬ್ಬನೆಯದೆಂಬುದಕೇಕಮೇನಾ |
ಎನುತಲೇಕೋ ರುದ್ರನದ್ವಿತಿಯಾಯೆನುತ್ತಿಹುದು || ೮೦ ||

ದೇವನಲ್ಲೊದೊಡೇಕೆ ಭರ್ಗೋ |
ದೇವನೆಂದುದು ಸಕಲಜಪದಧಿ |
ದೇವರಹ ಗಾಯತ್ರಿಯದನರಿದಿರ್ದು ನೀ ಶಿವನ ||
ದೇವನಲ್ಲೆಂದೆಂಬರೇ ಮಾ |
ದೇವ ಪಾದಾರ್ಚಕಗೆ ಸರಿಯಹ |
ದೇವರುಂಟೇ ಶಿವ ಶಿವಾ ಎನಲೆಂದ ವೈಷ್ಣವನು || ೮೧ ||

ಹರಿಯ ದಾಸ[೪]ಗೆ ಶಿವನ ಭಕ್ತರು |
ಸರಿಯಹರೆ ಕೇಳ್ ಸಕಲ ಯಜ್ಞಾ |
ಚರಣೆಗಧಿಕಂ ತಪ್ತಮುದ್ರಾಂಕಿತದ್ವಿಜಂ ಎನುತೆ ||
ಒರೆದುದಾಮ್ನಾಯಂ ಶ್ವಪಚ ಹರಿ |
ಶರಣನಾದೊಡೆ ಸತ್ಕುಲಜನೆಂ |
ದೊರೆದುದೊಂದು ಶ್ರುತಿಯೆನಲು ಗಣನಾಥನಿಂತೆಂದು || ೮೨ ||

ನುಡಿದ ತಪ್ತಸುಮುದ್ರೆಯೆಂಬುದು |
ಸುಡುವ ಮುದ್ರೆಯದೆಂತು ತಿಳಿದೈ |
ಬಿಡು ಬಿಡೇತರ ಮಾತು ಭಸ್ಮಾಂಗದೊಳು ರುದ್ರಾಕ್ಷಿ ||
ತೊಡ ಜಟಾಂಕಿತದಿಂದೆ ತಪಮಂ |
ಬಿಡದೆ ಮಾಡಿದ ಭೂಸುರೋತ್ತಮ |
ಪೊಡವಿಯೊಳಗತಿ ತಪ್ತಮುದ್ರಾಂಕಿತನೆನಿಸುತಿರ್ಪಂ || ೮೩ ||

---

೧ ಗಿ (ಇ, ಉ.) ೨ ಸದಾ (ಇ, ಉ.) ೩ ದಿ (ಇ.) ೪ ಭಕ್ತ (ಇ, ಉ.)

ಆತನೇ ಕ್ರತುವಪ್ಪ ವೈಷ್ಣವ |
ರೀತಕರುಹರು ಶ್ವಪಚ ಕಂಸಾ |
ರಾತಿಯರ್ಚಕನಾದೊಡಾತನೆ ಸತ್ಕುಲಜನೆಂದ ||
ಮಾತು ಪುಸಿದುದು ಶ್ವಪಚ ವೈಷ್ಣವ |
ರೀತಿವೆತ್ತಿರೆ ಮನೆಯ ಕೂಡಿರ |
ದೇತಕಾ ವೈಷ್ಣವನ ಹೊಲೆದಾಸಾ ಎನುತ್ತಿಹಿರಿ || ೮೪ ||

ಎಂದ ಮಾತಿಗೆ ವಿಷ್ಣುಭಕ್ತಂ |
ಮುಂದುಗಾಣದೆ ಸುಮ್ಮನಿರೆ ಪೋ |
ಗೆಂದು ನಿಗ್ರಹವಿತ್ತನಾ ಮುನಿರಾಯನನಿತರೊಳು ||
ಎಂದರಾ ಸಾಮಾಧಿಕರು ಮೇ |
ಣೊಂದು ನಿಗ್ರಹವಾರಿಗಾದರು |
ಬಂದರವರಿಗೆ ಸೋಲು ಪಂತವೆನಲ್ಕೆ ಶಿವಶರಣ || ೮೫ ||

ಎಂದ ನಮ್ಮೊಳು ವೇದಶಾಸ್ತ್ರದಿ |
ನಿಂದು ನುಡಿವುದಕರಿದಿವನಿಗೊಂ |
ದೊಂದು ವಾಕ್ಯದಿ ಸೋಲಗೆಲವಂ ಕಟ್ಟಿ ನೀವೆನಲು ||
ಎಂದರಾ ಸಾಮಾಧಿಕರು ನೀ |
ವೊಂದು ವಾಕ್ಯವನಾಡಿ ನಿಗ್ರಹ |
ಬಂದೊಡೆ ನಿಮಗೆ ಸೋಲವಿಲ್ಲದೊಡಾತನಿಗೆ ಸೋಲಂ || ೮೬ ||

ಎನೆ ತಥಾಸ್ತು ಎನುತ್ತಲನುಭಾ |
ವನೆಯೊಳಿಹುದು ಸುವಸ್ತುವೆನೆ ಮೆ |
ಲ್ಲನೆ ನುಡಿದನಣುರೇಣುತೃಣಪರಿಪೂರ್ಣನೆಂದಾತಂ ||
ಅನುವ ದೆಂತೆನೆ ಪೇಳ್ದ ವೈಷ್ಣವ |
ದನುಜರಾಯ ಹಿರಣ್ಯ ತನ್ನಯ |
ತನುಜನಂ ಕೇಳಿದನು ಹರಿಯೆಲ್ಲಿರ್ದಪನೆನುತ್ತಂ || ೮೭ ||

ಕೇಳಿ ತ್ರಿಜಗದ್ಭರಿತನೆಂದವ |
ಪೇಳಲೀ ಕಂಭದೊಳಗೊಳನೇ |
ಪೇಳೆನಲ್ಕೊಳನೆನಲು ತೋರೆನೆ ತೋರಿಸಿದನೆನಲು ||
ಕೇಳಿ ಗಣವರನೆಂದ ದಾನವ |
ಹೇಳಿದೆಡೆಯಲ್ಲದೆ ಸಮಸ್ತರೊ |
ಳಿಲ್ಲದಾದನೆನಲ್ಕೆ ಪರಿಪೂರ್ಣತ್ವ ಪುಸಿಯೆಂದ || ೮೮ ||

ಆ ನುಡಿಯ ಲಾಲಿಸಿ ಸಮಾಧಿಕ |
ರೀನ ಪೊಗಳುವೆ ಮೆಚ್ಚಿದರು ಮಿಗೆ |
ಹೀನ ಬಂದುದು ವೈಷ್ಣವಗೆ ಗೆಲವಾದುದಾ ಮುನಿಗೆ ||
ಮಾನಹೋದುದು ಶ್ರುತದಿ ದೃಷ್ಟದಿ |
ನೀನು ಜಯಿಸಲು ಬಲ್ಲೆಯಾ ಎಂ |
ದಾ ನಗಧರಾರ್ಚಕನ ಕೇಳಿದರಾ ಸಮಾಧಿಕರು || ೮೯ ||

ಕೇಳಲಾ ವೈಷ್ಣವ ನುಡಿದ ಸಭೆ |
ಕೇಳುವಂದದಿ ನಿಮ್ಮ ಸದ್ಗುರು |
ಭಾಳನೇತ್ರಾಗ್ನಿಯೊಳು ದೇವತೆಗಳ ಸುಡುವನೆಂದು ||
ಹೇಳುತಿಹರೆಮ್ಮೊಡೆಯನಪ್ಪ ಕ |
ರಾಳವೈದಾರಣ ನೃಸಿಂಹನ |
ಭಾಳನೇತ್ರದಿ ಸುಟ್ಟುದುಂಟಾದೊಡೆ ಸುಭಕ್ತಿಯೊಳು || ೯೦ ||

ನಿಮ್ಮ ಗುರುವಿನ ಪಾದಕಮಲ |
ಕ್ಕೆಮ್ಮ ಭಾಳವ ಚಾಚುವೆವು ಕೇಳ್ |
ನಮ್ಮ ಗುರು ನರಸಿಂಹಮೂರ್ತಿಯನುರುಪಲರಿಯದೊಡೆ ||
ನಮ್ಮ ಚರಣಕೆ ವೀರಶೈವದ |
ರೊಮ್ಮತದಿ ಬಂದೆರಗುವರೆ ಎನೆ |
ಹೆಮ್ಮೆಯೊಳಗಾ ವಕ್ರಪಾದಗಣೇಶನಿಂತೆಂದ || ೯೧ ||

ರೂಢಿಸಿದ ಶಾಸ್ತ್ರದೊಳು ನೀ ಮಾ |
ತಾಡಲರಿಯದೆ ದೃಷ್ಟ ಬೇಕೆಂ |
ದಾಡಿದೆಯಲಾ ನಾಳೆ ಮದ್ಗುರು ಭಾಳಶಿಖಿಯಿಂದೆ ||
ಓಡಿಸುವೆ ನಿಮ್ಮೆಲ್ಲರಂ ಪುಡಿ |
ಮಾಡಿಸುವೆ ನಿಮ್ಮಯ ನೃಸಿಂಹನ |
ನೋಡದಿರಿಯಡಗದಿರಿಯೋಡಿದರಡಗಿದರೆ ಸೋಲಂ || ೯೨ ||

ಎಂದು ಸಾರಿ ಗಣೇಶ ಪರವಾ |
ದಾಂಧಕಾರೋದ್ದಂಡ ಭಾಸ್ಕರ |
ನಿಂದುಶೇಖರಮತಪ್ರತಿಷ್ಠಾಚಾರ್ಯ ತ್ರೈಲೋಕ ||
ವಂದಿತಾಂಘ್ರಿಸರೋಜ ಪರಮಾ |
ನಂದಪೂರಣ ವಕ್ರಪಾದ ವ |
ಸುಂಧರೀವಲ್ಲಭನ ಬೀಳ್ಕೊಂಡಂ ನಿಜಾಲಯಕೆ || ೯೩ ||

ಕರೆಕರೆದು ಜಯಸಿಂಹ ವಿದ್ವಾಂ |
ಸರನುದಾಸಿನ ಮಾಡಿ[೧] ಕಳುಹಿದ |
ದೊರೆಗಳಂ ಬೀಳ್ಕೊಟ್ಟು ಸಕಲ ಪ್ರಜೆಗಳಂ ಕಳುಹಿ ||
ಹರೆದುದೋಲಗವಾ ಕ್ಷಣದಿ ಭೂ |
ವರತಿಲಕ ಸಂತೋಷದೊಳು ಮಂ |
ದಿರಕೆ ಬಿಜಯಂಗೈದನಾಡಂಬರಭರಿತನಾಗಿ || ೯೪ ||

ನೆನೆದ ಕಾರ್ಯಂ ಸಿದ್ಧಿಸಲಿ ಯೌ |
ವನಮುದಾಗಲಿ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿ ಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನ ಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೯೫ ||

**ಅಂತು ಸಂಧಿ ೧೧ಕ್ಕಂ ಪದ ೮೩೫ಕ್ಕಂ ಮಂಗಳಂ**



---
೧ ನದಿಂದೆ (ಇ, ಊ.)

೧೨ನೆಯ ಸಂಧಿ

# ಶಂಕರದಾಸಿಮಯ್ಯನು ನರಹರಿಯ ಮೂರ್ತಿಯನ್ನು ಅಗ್ನಿನೇತ್ರದಿಂದ ಸುಟ್ಟಿದ್ದು

**ಸೂಚನೆ**

ಹರಶರಣ ಕುಲತಿಲಕಮಹಿಮಾ |
ಭರಣ ಶಂಕರದಾಸಿಮಯ್ಯಂ |
ನರಹರಿಯ ಮೂರ್ತಿಯನುವುರುಪಿದ ನಯನಶಿಖಿಯಿಂದೆ ||

ಭುಜಗಭೂಷಣ ಭೂಮಿ ಮುಖ್ಯ |
ತ್ರಿಜಗಭರಿತ ತ್ರಿಣೇತ್ರ ಹರ ಸಾ |
ಮಜಸುರಾಜಿನವಸನ ಶಾರ್ಙ್ಗಕಿರೀಟಯುತಚರಣ ||
ರಜತಗಿರಿಮಂದಿರ ಕೃಪಾಕರ |
ನಜಕಪಾಲತ್ರಿಶೂಲಧರನಂ |
ಗಜಮುಹಾವನದಾವ ಶಿಖಿಲೋಚನ ಜಯತು ಜಯತು || ೧ ||

ಹೋದುದಾ ದಿನ ಮರುದಿನಂ ದೇ |
ಶಾಧಿಪತಿಗಳ ಗಡಣದೊಳು ಶೌ |
ರ್ಯೋದಯಂ ಜಯಸಿಂಹನೊಡ್ಡೋಲಗದೊಳೆಸೆದಿರಲು ||
ಮಾಧವಾರ್ಚಕ ವೈಷ್ಣವಂ ತ |
ತ್ವಾದಿಗಳ ಗಡಣದೊಳಗೇಳ್ತಂ |
ದಾ ಧೊರೆಯ ಪರಸಿದನು ಮಂಡಿಸಿದನು ನೃಪನ ಕೆಲದಿ || ೨ ||

ನಸು ನಗುತ ಭೂಪಾಲನವನೊಡ |
ನುಸುರಿದಂ ನಿಮಗೂ ಗಣೇಶಗು |
ಮಸಗಿದುದು ಬಲು ವಾದ ನಿನ್ನಿನ ದಿವಸ ಕೇಳಿಂದು ||
ಅಸಮ ಶಂಕರದಾಸಿಮಯ್ಯನ |
ನೊಸಲಕಣ್ಣಿಗು ನಾರಸಿಂಹಗು |
ಮಸಗುತಿದೆಯಿದಕೇನುಪಾಯವ ಕಂಡಿರೆನಲವನು || ೩ ||

ಸುಡಿದನೊಲಿದು ಪತಂಗ |
ದೀಪವ ಕೆಡಿಪುದಲ್ಲದೆ ಕಾಡಕಿಚ್ಚಂ |
ಕೆಡಿಸುವುದೆ ಸಾರಂಗ ಸರ್ಪನ ಪಿಡಿವವೊಲು ಪುಲಿಯ ||
ಪಿಡಿವುದೇ ಕೇಳನ್ಯದೈವವ |
ಸುಡುವವೊಲು ಕಲಿ ನಾರಸಿಂಹನ |
ಸುಡಲು ಬಲ್ಲುದೆ ಪುಸಿಯೆನಲ್ಕೆ ನೃಪಾಲನಿಂತೆಂದ || ೪ ||

ಬೇಡ ಬೇಡಾ ಎನಲು ವಾದವ |
ಮಾಡಿ ಸೋತಿರಿಯವರ ಶಿಷ್ಯಗೆ |
ಕೂಡೆ ದೃಷ್ಟವನಿಕ್ಕಿಕೊಂಡಿರಿ ಮತ್ತೆ ಕೇಳದಲೆ ||
ನಾಡುಗರೆ ನಿಮ್ಮಿಂದೆಮಗೆ ನೆರೆ |
ಕೋಡಿ ಬಂದುದು ನೀವು ಬೀರವ[೧] |
ನಾಡದಿರಿ ನಮ್ಮೊಡನೆ ಕಂಡೆವು ನಿಮ್ಮ ಸತ್ವವನು || ೫ ||

ಅವರ ಶಿಷ್ಯಂ ನಿಮ್ಮ ತೇಜವ |
ತವಿಸಿದಂ ತರ್ಕದೊಳು ಕೇಳಿ |
ನ್ನವರು ಮುನಿದೊಡೆ ನೋಡಿದರೆ ನರಸಿಂಹ ಗಿರಸಿಂಹ ||
ಹವಣೆ ಸಾರಿದೆ ಪುಲ್ಪಿಡಿದು ನೀ |
ವವರಿಗಿನ್ನಂ ಸೋಲುವಿರಿ ಬೇ |
ಡವರ ಕೂಡೊಣ ಮಿಥ್ಯ ಬಲ್ಲರೆ[೨] ಸಂತವಾಗೆಂದ || ೬ ||

ವೇದಶಾಸ್ತ್ರಾಗಮದಿ ಪರಿಣತ |
ರಾದವರು ಮಾರ್ಗಿಗಳು ಜಗದಾ |
ಧಾರಕರು ಯೋಗ್ಯರುಗಳಾಗಿಯು ನೀವು ಮನದೊಳಗೆ ||
ಭೇದಮಂ ಬಿಡದಾರೊಳಾದರು |
ವಾದಿಸುತ್ತಿಹ ಖುಲ್ಲತನ ತ |
ತ್ವಾದಿಗಳಿಗುಂಟಾದುದೈಸೇ ಎಂದನಾ ನೃಪತಿ || ೭ ||

ಹಲವು ಶಾಸ್ತ್ರಾಗಮ ಪುರಾಣವ |
ಕಲಿತರೇನು ಪ್ರಯೋಜನಂ ನಿ |
ರ್ಮಳಮನವದಲ್ಲದೊಡೆ ಪರರಂ ಜಯಿಸಬೇಕೆಂದೇ ||
ಕಲಿತಿರಲ್ಲದೆ ನೀವು ಮುಕ್ತಿಗೆ |
ಕಲಿತುದಿಲ್ಲಂ ನಿಮಗೆ ಶಾಸ್ತ್ರದ |
ಬಲಿಕೆಯುಳ್ಳವರೆನಿಸಿಕೊಂಬುದೆ ಮುಕ್ತಿಯೆಂದಿಹಿರಿ || ೮ ||

---

೧ ಬಿರುದವ (ಇ, ಉ.) ೨ ವಾಗದೆ (ಇ.)

ತಾಯ ಮಾರಿಯೆ ತೊತ್ತ ಕೊಂಡಂ |
ತಾಯಿತಲ್ಲಾ ನಿಮ್ಮ ಪರಿ ಮೋ |
ಕ್ಷಾಯತಕ್ಕೆ ನಿಮಿತ್ತಮಾಗಿಹ ವೇದಶಾಸ್ತ್ರಗಳ ||
ಬೀಯಮಂ ಮಾಡಿದಿರಿ ಜೀವೋ |
ಪಾಯಕಲ್ಲದೊಡೀಗಳೀ ಸುರ |
ನಾಯಕತ್ವಮದಾಗದೋ ನಿಮಗೆಂದನುರ್ವೀಶ || ೯ ||

ನುಡಿದೊಡೇನೈ ಶ್ರುತಿಸ್ಮೃತಿಗಳಂ |
ನಡವಳಿತದೊಳು ಶುದ್ಧಮಿಲ್ಲದೆ |
ನುಡಿದವೊಲು ನಡೆವಾತನೇ ಸಾಕ್ಷಾತ ವಸ್ತುವಲಾ ||
ನುಡಿಯಬಹುದಲ್ಲದೆ ನುಡಿದವೊಲು |
ನಡೆಯಬಾರದು ಕೇಳು ದೀಪವ |
ಹಿಡಿದು ಗುಳಿಯೊಳು ಬಿದ್ದೊಲಾಯಿತು ನಿಮ್ಮ ಪರಿಯಾಯ || ೧೦ ||

ಆಗಮಪುರಾಣೋಕ್ತಗಳು ಬೇ |
ರಾಗಿ ತಮ್ಮ ಚರಿತ್ರ ಬೇರೊಂ |
ದಾಗೆ ಸದ್ಗತಿಯುಂಟೆ ಮುಕ್ತಿಯ ಬಯಸಲಿಕೆ ಕಲಿತ ||
ಆಗಮಪುರಾಣಶ್ರುತಿಗಳೊಡ |
ಲಾಗವೇಳ್ಕಲ್ಲದೊಡೆ ಸಾಧ್ಯಮ |
ದಾಗದೇತಕೆ ಕಲಿತಿರಯ್ಯಾ ಬಯಲ ಶಾಸ್ತ್ರಗಳ || ೧೧ ||

ಬಡಮತಿಗಳಜ್ಞಾನ ಮಾರ್ಗವ |
ಬಿಡಿಸಬಲ್ಲಿರಿ ಬೋಧೆಯಿಂದಂ |
ನಡೆಯಲರಿಯರಿ ನಿಮ್ಮ ಬೋಧಾಮಾರ್ಗವೆಂತಂತೆ ||
ನುಡಿ ಪುರಾತನರಂತೆ ತನ್ನಯ |
ನಡೆ ಕಿರಾತರೊಲೆಂಬ ಗಾದೆಯ |
ನುಡಿಯೆ ನಿಮ್ಮೊಳು ಕಂಡೆನೆಂದಾ ನೃಪತಿ ಪೇಳಿದನು || ೧೨ ||

ವೇದಶಾಸ್ತ್ರಾಗಮದಿ ಪರಿಣತ |
ನಾದುದೇ ಗೌರವಮೆ ಕಾಮ |
ಕ್ರೋಧ ಮದ ಮಾತ್ಸರ್ಯಮುಡುಗದೆ ಶಾಂತಿಯೆಡೆಗೊಳದೆ ||
ಮೋದಮಿಲ್ಲದೆ ಭ್ರಮೆಯಡಂಗದೆ |
ಆದಿಮಧ್ಯಾಂತಗಳ ತಿಳಿಯದೆ |
ಬೋಧಿಸಿದೊಡೇನರಸುಗಿಳಿ ಕಲಿತನಿತು ನುಡಿವಂತೆ || ೧೩ ||

ನಿಗಮಶಾಸ್ತ್ರಪುರಾಣಸ್ಮೃತ್ಯಾ |
ರ್ಥಗಳ ಸೊಗಸಂ ಪರರಿಗರುಪಿ ತ |
ಮಗೆಯವರ ಸಂಬಂಧವಿಲ್ಲದ ಮೂಢ ವಿದ್ವಾಂಸ ||
ಮಿಗಿಲೆನಿಸುವಮೃತಾನ್ನವಂ ನಾ |
ಲಿಗೆಗೆ ಸೋಂಕಿಸುತಾ ಪದಾರ್ಥ ರು |
ಚಿಗಳನರಿಯದ ಕೆಯ್ಯವೊಲು ಫಲವಿಲ್ಲ ಕೇಳೆಂದ || ೧೪ ||

ಪತಿವ್ರತಾಂಗನೆ ವರವಿವೇಕಾ
ನ್ವಿತ ನೃಪಂ ಕರೆದೀವ ಧನಿಕಂ |
ಖತಿಯಳಿದ ವಿದ್ವಾಂಸ ಘಾಯುಮದಾಗೆ ವಾಹಕನ ||
ಹತಿಸದ್ವೈತಹ ಹಯಮೆ ತಾ ಭೂ |
ಪತಿಗೆ ಪಂಚಾಭರಣಮಲ್ಲದೆ |
ಯತಿಗಳಿಗೆ ಕಿನಿಸೇತಕವರೊಳು ಸಂತವಾಗೆಂದ || ೧೫ ||

ಬಲ್ಲವರು ನೀವಿಂತು ಮನದೊಳು |
ಖುಲ್ಲಮಂ ತಾಳಿಹರೆ ನಿಮಗಿದು |
ಸಲ್ಲದಯ್ಯಾ ಬೇಡ ಶಂಕರದಾಸಿಮಯ್ಯನೊಳು ||
ಬಲ್ಲಿದತನಂ ನಿಮಗೆನುತ ಭೂ |
ವಲ್ಲಭಂ ಪೇಳಲ್ಕೆ ವೈಷ್ಣವ |
ಸೊಲ್ಲಿಸಿದ ಲಜ್ಜಾಮುಖದಿ ತಲೆಯಂ ತುರಿಸುತಾಗ || ೧೬ ||

ಸಂತವಾದೊಡೆ ನಿಮ್ಮ ಬಳಿಗಾ |
ವೆಂತು ಬಪ್ಪೆವು ಶಾಸ್ತ್ರಗಳ ಕೂ |
ಡೆಂತು ಮಾತಾಡುವೆವು ವಿದ್ವಾಂಸರೊಳು ತಲೆಯೆತ್ತಿ ||
ಎಂತು ನಡೆವೆವು ಶಿಷ್ಯರಿಗೆ ನಾ |
ವೆಂತು ದೀಕ್ಷೆಯನೀವೆವಕಟಾ |
ಎಂತು ಜಗದಾರಾಧ್ಯರೆಂದತಿ ಪೇಳಿಕೊಂಡಪೆವು || ೧೭ ||

ಒಡಲಳಿವುದಪಕೀರ್ತಿ ಕೀರ್ತಿಗ |
ಳುಡುಗವೆಂದೆಂದಿಗೆಯು ಮಾನವ |
ಕೆಡಿಸಿ ಬಾಳಲದೇಕೆ ಬಾಳ್ದೊಡೆ ದೇಹವಿರ್ದಪುದೆ ||
ಪೊಡವಿಯುಳ್ಳನ್ನಬರ ಹಾಸ್ಯ |
ಕ್ಕೆಡೆಯೆನಿಸದಿರಬೇಕು ಕಾಯವ |
ಪಿಡಿದಿಹನ್ನಬರಂ ವಿಚಾರದೊಳೆಂದ ವೈಷ್ಣವನು || ೧೮ ||

ಏನ ಹೇಳುವೆ ಯೋಗ್ಯರಿಗೆ ವಹ |
ಮಾನವೇ ಭೂಷಣವವರ ಸ |
ನ್ಮಾನವಿಲ್ಲದ ಠಾವಿಲಿರ್ದವ ಕಾಷ್ಠದಿಂ ಕ್ಷೀಣ ||
ಮಾನವಮಂ ನೀಗಾಡಿ ಬದುಕುವ |
ರೇನು ಯುತವಲ್ಲಲ್ಲ[೧] ಕೇಳಭಿ |
ಮಾನವಿಲ್ಲದ ಬಾಳು ಸುಡು ಘಟ ಮೇಲೆ ಬೆಳೆದಪುದೆ || ೧೯ ||

ಗಳಿಸುವುದು ದ್ರವ್ಯಂಗಳಂ ಕೇಳ್ |
ಗಳಿಸಿದರ್ಥಮನಿತ್ತು ವಿದ್ಯವ |
ಗಳಿಸುವುದು ವಿದ್ಯಾರ್ಥಮುಭಯಮನಿತ್ತು ದೇಹವನು ||
ಗಳಿಸುವುದು ವಿದ್ಯಾರ್ಥದೇಹಂ |
ಗಳನು ಕೊಟ್ಟಭಿಮಾನಮಂ ನೆರೆ |
ಗಳಿಸುವುದು ವಹಮಾನಗೆಟ್ಟಾರ್ಜಿಸಲು ಫಲವಿಲ್ಲ || ೨೦ ||

ಮಾನಿಯಾದ ಮಹಾತ್ಮರಿಗೆ ವಹ |
ಮಾನವೇ ಕೇಳ್ ಸಂಚಿತಾರ್ಥಂ |
ಮಾನವಿಾಗಳೆ ಪ್ರಾಣಮಿಹದೊಳು ಸುಖವ ಸಾರ್ಚುವುದು ||
ಮಾನಮಲ್ಲದೆ ಭೂಪ ಸೋಲದ |
ಹೀನ ನಮಗಾಗಿರ್ದು ನೆರೆ ಸಂ |
ಧಾನಮಾಗುವುದುಚಿತವೇ ಎನಲರಸನಿಂತೆಂದ || ೨೧ ||

ಹಾನಿಯಿಲ್ಲದೆ ಬಾಳ್ವರಾರೀ |
ಮಾನವರೊಳಿಲೆ ವಿಪ್ರ ವಾದದಿ |
ಹೀನಮಾದೊಡೆ ಕೊರತೆಯೇ ನಿಮ್ಮಮಳ ಚರಿತಕ್ಕೆ ||
ಹಾನಿಯಾದೊಡೆ ಕೊರತೆಯಲ್ಲದೆ |
ಹೀನ ನಿಮಗಿನಿತಿಲ್ಲವೆಂದೇ |
ನಾನೆಯಾಡಿದ ಬಳಿಕ ನಿಮಗಿನ್ನೇಕೆ[೨] ಸಂಕಲ್ಪ || ೨೨ ||

ಆದಿಯೊಳು ಕೆಲಬರಿಗೆ ಸೋಲಗ |
ಳಾದುದಿಲ್ಲವೆ ನಿಮ್ಮ ಪಾಡೇ |
ನಾದರಿಸು ವಿಸ್ತರಿಪೆನೆನುತವನೀಶನಿಂತೆಂದ ||
ಆದಿವಿಷ್ಣುಗೆ ಸೋತನಾ ವಾ |
ಣೀಧವಂ ವಾಶಿಷ್ಠನೊಳಗಣ |
ವಾದದಿಂದವೆ ಸೋತ ವಿಶ್ವಾಮಿತ್ರನೆಲೆ ವಿಪ್ರಾ || ೨೩ ||

---

೧ ಜ್ಞಾನಿಯಾತನುಮಲ್ಲ (ಇ.) ೨ ಗಿಂತೇಕೆ (ಇ, ಉ.)

ಸ್ತೋತ ಶ್ರೀಮದನಂಗೆಯಾಮುಹ |
ವ್ರಾತ ಕೌರವ ಭೂಮಿಪಾಲಗೆ |
ಸ್ತೋತ ಧರ್ಮಜನೆಂದು ಪೌರಾಣಗಳು ಪೇಳುತಿರೆ ||
ಏತಕಯ್ಯಾ ನಿಮಗೆ ವಾದದಿ |
ಸೊತೆನೆಂಬಭಿಮಾನ ಜಗದೊಳು |
ಖ್ಯಾತರಲ್ಲವೆ ನೀವು ನಿಮಗೆಣೆಯಾರು ಲೋಕದೊಳು || ೨೪ ||

ಅತುಳಬಲ ಕಲಿಪಾರ್ಥ ಗಿರಿಜಾ |
ಪತಿಗೆ ಯುದ್ಧದಿ ಸ್ತೋತನವಗೆ ಕೊ |
ರತೆಯೆ ಲೋಕದವರಿಗೆ ಬಡವನೆ ಅರ್ಜುನಂ ನೀವು ||
ನುತ ಗಣೇಶಗೆ ಸ್ತೋತೆನೆಂದೊಡೆ |
ಪೃಥಿವಿಯೊಳಗಿರ್ದಾಗಮಿಾಕರು |
ಪ್ರತಿಯೆ ನಿಮಗೆಲೆ ವಿಪ್ರ ಬಲ್ಲಡೆ ಸಂತವಾಗೆನಲು || ೨೫ ||

ಆದಿಯೊಳು ವೈಷ್ಣವರು ಶೈವರು |
ವಾದಿಸುತ್ತಿಹರೆಮ್ಮ ಕಾಲದೊ |
ಳಾದುದಿಲ್ಲಂ ನಮಗವರಿಗೇತಕ್ಕೆ ಸಂಧಾನ ||
ಭೂಧವಾ ಕೇಳೀತನೀಗಳೆ |
ಮಾಧವನ ಸುಡುವಾತನೇ ಪ್ರತಿ |
ವಾದಿಸುವರೇ ಚಿಪ್ಪಿಗರ ಕೌಟಿಲ್ಯಬುದ್ಧಿಯನು || ೨೬ ||

ಶಿವ ಶಿವಾ ಸಾಕ್ಷಾತ ರುದ್ರನೆ |
ಯವತರಿಸಿದಂ ವಸ್ತುವೇ ಸಂ |
ಭವಿಸಿದುದು ಕೇಳೀ ಮಹಿಮ ನಾಡಾಡಿ ಚಿಪ್ಪಿಗನೇ ||
ಹವಣನರಿಯದೆ ದೂಷಣೆಯ ಮಾ |
ಡುವುದು ಮತವೇ ನಿಮಗೆನುತ ಭೂ |
ಧವ ಮನದೊಳುರೆ ನೊಂದು ಮಗುಳಿಂತೆಂದನವನೊಡನೆ || ೨೭ ||

ಒಳ್ಳಿತೊಳ್ಳಿತು ನಿಮಗೆ ಸತ್ವಗ |
ಳಿಲ್ಲದೊಡೆಯಿಂತಾಡುವರೆ ನ |
ಮಲ್ಲಿ ತಪ್ಪಿಲ್ಲಿನ್ನು ನಿಮ್ಮಯ ಬುದ್ಧಿ ವಿಷ್ಣುಗೃಹ ||
ದಲ್ಲಿ ನೀವಿರಿ ನಾನು ನೀವಿ |
ರ್ದಲ್ಲಿಗವರನು ಕರೆದು ತಹೆನೆಂ |
ದೆಲ್ಲರನು ಬೀಳ್ಕೊಟ್ಟು ಬಂದನು ಮಹಿಮನಿರ್ದೆಡೆಗೆ || ೨೮ ||

ನರಹರಿಯ ಕಾಟಕ್ಕಲಸಿ ಬಹು |
ಸುರಸಮಿತಿ ಸಹವಾಗಿ ಪರಮೇ |
ಶ್ವರಗೆ ಮೊರೆಯಿಡ ಬಂದ ವಾಸವನಂತೆ ಬಹು ದೇಶಾ ||
ವರ ಕದಂಬವ ಕೂಡಿಕೊಂಡಾ |
ಶರಣ ಶಂಕರದಾಸಿಯಿದ್ದೆಡೆ |
ಗರಸನೈತಂದಾ ಮಹಿಮನಾಕಾರಮಂ ಕಂಡ || ೨೯ ||

ಜಡಿವ ಕುಂಡಲ ಭಾಳಮಧ್ಯದ |
ಕಿಡಿನಯನ ನಸುಗಾವಿಯಂಬರ |
ದುಡಿಗೆ ಷಡ್ದರ್ಶನದ ಗಂಡನೆನಿಪ್ಪ ಬಾವುಲಿಯ ||
ಎಡದ ಪಾದ ಸಮಸ್ತದೇವರ |
ಸುಡುವ ಬಿರುದಿನ ತೊಡರೆಸೆವ ಬಲ |
ದಡಿಯ ಮಿರುಗುತಲಿರ್ಪ ಶಂಕರದಾಸಿಯಂ ಕಂಡ || ೩೦ ||

ಕರದ ಶೂಲದ ಯೋಗದಂಡದ |
ಶಿರದ ಪಾಶ್ವತಿಚಕ್ರಮುಕುಟದ |
ಕೊರಲ ಪಳುಕ ಕಪಾಲ ರುದ್ರಾಕ್ಷಿಯ ವಿಭೂಷಣದ ||
ಮುರಿದ ಮೀಸೆಯ ನಿಮಿರ್ದ ಗಡ್ಡದ |
ವೊರೆದ ಭಸ್ಮದ ತೊಟ್ಟ ಕಂಥೆಯ |
ಗರುವ ಜಂಗಮ ತತಿಯೆಸೆದುದಾತನ ಬಲದ ದೆಸೆಯ || ೩೧ ||

ಬಿಟ್ಟ ಮಂಡೆಯ ಎಣ್ಣೆಗಂಟುಗ |
ಳುಟ್ಟ ಚಲ್ಲಣ ಕಚ್ಚುಟಂಗಳ |
ಕಟ್ಟಿದುಡಿನೂಲುಗಳ ಪೆಗಲೊಳು ಬಿಗಿದ ಮಿರುಪಾಂಗ ||
ತಟ್ಟುಗಳ ಚೆಳ್ಪುಗುರ ಭಸಿತದ |
ಬೊಟ್ಟುಗಳ ಚೆಲುವಿಂದೆ ಕಕ್ಷದೊ |
ಳಿಟ್ಟ ಸಂಪುಟಗಳ ವಿರಕ್ತರು ಪಿಂಗಡೆಯೊಳೆಸೆಗುಂ || ೩೨ ||

ಮೊಗದ ಬಳಸಿದ ಭಸಿತ ಬೆಳುವ |
ಲ್ಲುಗಳ ಮುಂಗೈ ತೋಳ ರುದ್ರಾ |
ಕ್ಷಿಗಳ ಕಕ್ಷದಿ ಲಿಂಗ[1] ಬೋಳಿಸಿದುತ್ತಮಾಂಗಗಳ ||
ಬಿಗಿದ ದಿಂಡುಡುಗೆಗಳ ಹರಿಗ |
ಡ್ಡಗಳ ಕಿವಿಯ ಕುಲಾಯವೆಸೆವ ವ್ರ |
ತಿಗಳು ಶಂಕರದಾಸಿಮಯ್ಯಗಳೆಡದೊಳೊಪ್ಪಿದರು || ೩೩ ||

---

೧ ಸಜ್ಜೆ (ಇ, ಉ.)

ವೇದಮಂ ಪಠಿಸುತ್ತೆ ಶಾಸ್ತ್ರಮ |
ನೋದುತಂ ಶೈವಾಗಮಂಗಳ |
ಭೇದಮಂ ಪೇಳುತ್ತ ಶಿವಮತವಾದ ಮಂತ್ರಗಳ ||
ಓದುತಂ ವ್ಯಾಕರಣ ತರ್ಕವ |
ನಾದರಿಸುತಂ ಪುಂಗವಾಹ್ವಯ |
ಮಾ ದಯಾಂಬುಧಿಯಿದಿರೊಳೆಸೆದಿರೆ ಕಂಡನಾ ನೃಪತಿ || ೩೪ ||

ಕೆಲರು ಜಪಮಂ ಮಾಡುತಿರ್ಪುದ |
ಕೆಲರು ಶಿವನಂ ಪೊಗಳುತಿರ್ಪುದ |
ಕೆಲರು ಶ್ರೀರುದ್ರಾಭಿಷೇಕವ ಶಿವಗೆ ಮಾಡುವುದ ||
ಕೆಲರು ಶಿವಪೂಜೆಗಳ ಮಾಳ್ಪುದ |
ಕೆಲರು ರುದ್ರಧ್ಯಾನಗೈವುದ |
ನೆಲದೆರೆಯನಾ ದಾಸಿಮಯ್ಯನ ಬಳಸಿನೊಳು ಕಂಡ || ೩೫ ||

ಅರಲ ಸೋದಿಸಿಕೊಳುತೆ ಗಂಧವ |
ನರೆಯುತಕ್ಷತೆಗಳನಿರಿಸುತಂ |
ಪರಿಪರಿಯ ದೀಪಾರತಿಯ ಬತ್ತಿಗಳ ಪೊಸೆಯುತ್ತಂ ||
ಕರವಿಡಿದು ಮಾಹೇಶ್ವರರ ಕು |
ಳ್ಳಿರಿಸುತಂ ಜಂಗಮದಸೋಹವ |
ಹರುಷದಿಂ ಮಾಡುತಿಹ ಗಣನಾಥನ ನೃಪತಿ ಕಂಡ || ೩೬ ||

ಗಾಡದೊಳು ಮಾಹೇಶ್ವರರಿಗೆಡೆ |
ಮಾಡಿಕೊಳುತಂ ರಂಗವಾಲೆಯ |
ನೀಡಿರಿಯುತುಪಕರಣಗಳ ಪಸರಿಸುತಲಾರತಿಯ ||
ನೀಡಿಕೊಡುತಂ ಮುದದಿ ಪರಿಪರಿ |
ದಾಡಿ ಮಾಹೇಶ್ವರರ ಸೇವೆಯ |
ಮಾಡುತಿಹ ಶಿವದಾಸಿಯರನೀಕ್ಷಿಸಿದ ಭೂಪಾಲ || ೩೭ ||

ಮಂದಿರಮೆ ಕೈಲಾಸ ಶರಣರ |
ವೃಂದವೇ ರುದ್ರಗಣ ಪರ್ವತ |
ನಂದನೆಯೆ ಶಿವದಾಸಿ ಗುಹನೇ ವಕ್ತ್ರಪಾದಮುನಿ ||
ಇಂದುಶೇಖರ ನೀನೆ[೧] ಪರಮಾ |
ನಂದ ಶಂಕರದಾಸಿಮಯ್ಯಗ |
ಳೆಂದು ಮನದೊಳು ನಿಶ್ಚಯಿಸಿದಂ ವೀರ ಜಯಸಿಂಹ || ೩೮ ||

---

೧ ನೀತ (ಇ.)

ಮಂಡಲಾಧಿಪ ದಾಸಿಮಯ್ಯನ |
ಕಂಡು ಕಾಣಿಕೆಯಿತ್ತು ಧರಣೀ |
ಮಂಡಲದಿ ಮೆಯ್ಯಿಕ್ಕಿ ಪೊಗಳುತಲೆದ್ದು ಕೈಮುಗಿದು ||
ಖಂಡಪರಶುವ ಶರಣ ಶಾಂತಿಕ |
ರಂಡ ಜಂಗುಳಿದೈವನಿಕರದ |
ಗಂಡ ನವಿಲೆಯ ಪುರವರಾಧೀಶ್ವರನೊಳಿಂತೆಂದ || ೩೯ ||

ಕೇಳು ದೇವಾ ವೈಷ್ಣವಗೆ ನಾ |
ಹೇಳಿದೆನು ಬುದ್ಧಿಗಳ ಮೂರ್ಖಂ |
ಕೇಳದಾದಂ ತನ್ನ ದೊಡ್ಡಿತ ಬಿಡಿಸಬೇಕೀಗ ||
ಏಳಿ ಚಿತ್ತೈಸಾ ನೃಸಿಂಹನ |
ಕಾಳಿಜವ ಮಜ್ಜಾಜ್ಯದೊಳು ನೀ |
ಬೇಳು ನಿಟಿಲಾಕ್ಷಾಧ್ವಕುಂಡ ಸ್ವಾಗ್ನಿ ಪುರುಷಂಗೆ || ೪೦ ||

ಎನೆ ನಗುತ ಶಿವಶರಣಮಣಿ ಭೋಂ |
ಕನೆ ವಿಲಾಸದೊಳೆದ್ದು ನಿಜವಾ |
ನಿಸಿಯ ಬೀಳ್ಕೊಂಡಖಿಳ ಮಾಹೇಶ್ವರರ ಗಡಣದೊಳು ||
ಜನಪತಿಯ ಕರವಿಡಿದು ಪೊರವಂ |
ಟನು ನಿಜಾಲಯಮಂ ಮನಸಿನೊಳು |
ಸೆನೆಯಲಾಕ್ಷಣ ಬಂದುದೊಲವಿಂ ಸಕಲ ಭೂತಗಣ || ೪೧ ||

ವಂದಿಸುತೆ ದಾಸ್ಮಯ್ಯನಿದಿರೊಳು |
ನಿಂದು ನುಡಿದುವು ದೇವ ನೀನೀ |
ಮಂದಿರದೊಳಿರಿ ನಾವು ಪೋಗಿ ನೃಸಿಂಹನಡಗುಗಳ ||
ತಿಂದು ರಕ್ತವ ಕುಡಿದಪೆವು ಕಳು |
ಹೆಂದು ಕೋಪದಿ[೧] ದಡದಡಿಸೆ ಭೂ |
ಮಂದರಂ ನಡುಗಲ್ಕೆ ನಿಲಿಸಿದನವರ ಘೋಷಣೆಯ || ೪೨ ||

ಉಡುಗಿದುದು ಪೆರ್ಗಲಭೆ ಖಡ್ಗವ |
ಜಡಿಯುತಂ ಚಾಮುಂಡಿ ಪಂಥವ |
ನುಡಿದಳೆನಗೀ ವೀಳ್ಯೆಯುವ ನಿನ್ನುಗ್ರಲೋಚನದ ||
ಕಿಡಿಗೆ ಸಾಲ ನೃಸಿಂಹ ನಾನೇ |
ಸುಡುವೆನವನನೆನಲ್ಕೆ ಗರ್ಜಿಸಿ |
ನುಡಿದಳಾಗೆರಕಾಟೆ ಶಂಕರದಾಸಿಮಯ್ಯನೊಳು || ೪೩ ||

---

೧ ಘೂರ್ಮಿಸಿ (ಇ, ಉ.)

ಸುಡುವುದರಿದೇ ನಾರಸಿಂಹನ |
ಪಿಡಿದು ತಂದೊಪ್ಪಿಸುವೆ ಬೆಸನಂ |
ಕೊಡು ಕೊಡೆನುತ ಚಥಾಳಿಸಲು ನಿಲ್ಲೆನುತ ವಾರಾಹೀ ||
ನುಡಿದಳಿಕ್ಕಲೆ ನಾರಸಿಂಹನ |
ಪಿಡಿದು ತಹುದೇನರಿದು ವೈಷ್ಣವ |
ಪಡೆಸಹಿತ ತಂದೊಪ್ಪಿಸುವೆನೆನಲೆಂದಳೆಕನಾತಿ || ೪೪ ||

ಎನ್ನ ಕಳುಪೆಲೆ ದೇವ ಮಾಧವ |
ನೆನ್ನ ಬಸುರೊಳು ಜನಿಸಿದಂ ಕೇಳ್ |
ತನ್ನ ಮಕ್ಕಳ ತಾನು ಕೊಲ್ಲುವುದುವುಂಟೆ ಎನಬೇಡ ||
ನಿನ್ನ ಚಿತ್ತವ ಪಡೆವೆನೀಕ್ಷಣ |
ತನ್ನ ಖಂಡವ ಕೊಯ್ದು ತನ್ನನೆ |
ತಿನ್ನಿಸುವೆನೆನೆ ನುಡಿದಳುಡಿಚಾದೇವಿ ಗರ್ಜಿಸುತೆ || ೪೫ ||

ಓಡಿಸುವೆ ಪರವಾದಿಗಳ ನೀ |
ನೋಡು ದೇವಾ ನಾರಸಿಂಹನ |
ದಾಡಿಗಳ ಮುರಿದಿಡುವೆನೆನಲಾ ಮಸಣಿ ಪಂತಗಳ ||
ಆಡಿದಳು ನರಕೇಸರಿಯ ಪುಲು |
ಗೋಡಗವನಾಡಿಸುವೊಲೆಳತಂ |
ದಾಡಿಸುವೆನೆನೆ ಕಾಳರಾತ್ರಿ ವಿಶೇಷವಹ ಮಾತ || ೪೬ ||

ನುಡಿದಳಂದು ಹಿರಣ್ಯಕನ ಪೇ |
ರೊಡಲ ತಾ ಸೀಳಿದನಲಾತನ |
ಮೊಡಲ ನಾ ಸೀಳುವೆನೆನಲ್ಕೊಲವಿಂದ ಹುಂಕಾತಿ ||
ನುಡಿದಳಾ ದನುಜನ ರುಧಿರಮಂ |
ಕುಡಿದನಲ್ಲಾ ಕೇಳು ದೇವಾ |
ಕುಡಿದ ರಕ್ತವ ಕಾರಿಸುವೆನೆನಲೆಂದಳಾ ಕಾಳೀ || ೪೭ ||

ಕೇಳು ನೃಹರಿ ಹಿರಣ್ಯಕನ ಕರು |
ಳೋಳಿ ಮಾಲೆಯ ತೊಟ್ಟ ತನ್ನಯ |
ಕಾಳಜದ ಕರುಳುಗಳ ತೊರಳೆಯ ಮಜ್ಜೆಮಾಂಸಗಳ ||
ಮಾಲೆಗಳ ನಾ ತೊಟ್ಟು ಬಂದಪೆ |
ವೀಳ್ಯೆಯವ ಚಿತ್ತೈಸೆನಲ್ಕೆ ಕ |
ರಾಳರೋಷಾನನದೊಳಾ ಪಟ್ಟಣದ ದೇವಿಯರು || ೪೮ ||

ಒದರಿದರು ಕೊಟ್ಟಣದ ಬತ್ತವ |
ಮಿದಿದಿರುಳು ಬೆಂಡಾಗಿ ಬಾಯಾ |
ರಿದೆವು ಕರುಣದಿ ಪಾಲಿಸಯ್ಯಾ ನಮಗೆ ನರಹರಿಯ ||
ರುಧಿರಮಂ ಕುಡಿದಾವು ಸಂತೋ |
ಷದೊಳಗಿರ್ದಿನ್ನೊಂದು ಕೆಲಸ |
ಕ್ಕೊದಗೆವೇ ಬೆಸಸೆನೆ ನುಡಿದಳಾ ಮಾರಿ ಗರ್ಜಿಸುತೆ || ೪೯ ||

ಕುಡಿವೆ ಬಾಯಾರಿದೊಡೆ ಸಾನೇ |
ಳ್ಕಡಲ ಪಸಿದೊಡೆ ತ್ರಿಭುವನಂಗಳ |
ನಡಸಿ ಮೋದುವೆ ಮುಳಿದೊಡೀ ಬ್ರಹ್ಮಾಂಡಸಂಕುಳವ ||
ಸುಡುವೆನೀ ನರಸಿಂಹ ದೊಡ್ಡಿತೆ |
ಬಿಡು ಬಿಡೆನಗೀ ವೀಳ್ಯೆಯವನೆನೆ |
ನುಡಿದ ಶರಣಲಲಾಮ ಶಂಕರದಾಸಿಮಯ್ಯಗಳು || ೫೦ ||

ಸುಮ್ಮನಿರಿ ನೀವಿಂತು ಸತ್ವದ |
ಹೆಮ್ಮೆಯುಳ್ಳವರಲ್ಲವೇ ನಾ |
ನಿಮ್ಮ ಪರಿಗಳನರಿಯೆನೇ ವಾದಿಗಳು ಮಿಥ್ಯದೊಳು ||
ನಮ್ಮ ಭಾಳಾಂಬಕದ ಕಿಡಿಯೊಳು |
ತಮ್ಮ ದೇವರ ದಹಿಸಹೇಳಿದ |
ರಮ್ಮಗಳಿರಾ ಎನುತ ಬಿಜಯಂಗೈದನಾ ಶರಣ || ೫೧ ||

ಶ್ರೀಹರಿಯ ಮತ್ಸ್ಯಾವತಾರದ |
ಸಾಹಸವ ಬಿಡಿಸುವೊಡೆ ಮಹಿಮಾ |
ದೇಹಮಂ ತಳೆದತುಲಬಲ ಬಕರುದ್ರ ನಡೆತಂದೊಲ್ ||
ಆ ಹರಿಯ ಕೂರ್ಮಾವತಾರದ |
ದೇಹದೊಟ್ಟಲ ಬೇರೆ ಮಾಳ್ಪರೆ |
ಕಾಹು ವೆಧೀಸಿ ಜಾಲಧರ ರುದ್ರಂ ನಡೆವ ತೆರದಿ || ೫೨ ||

ಪಕ್ಕಿವಾಹನ ಲೀಲೆಯಿಂದಾ |
ದೆಕ್ಕಲನ ಪೇರುರವ ತಾನೊಲಿ |
ದಿಕ್ಕುವುಜ್ಜುಗದಿಂದೆ ಬಪ್ಪ ಕಿರಾತ ರುದ್ರನೊಲು ||
ಅಕ್ಕಟಾ ನರಸಿಂಹಶಿರಮಂ |
ಕೊಕ್ಕಿನಿಂ ಕಿತ್ತಿಡುವ ಕಾರ್ಯದೊ |
ಳಿಕ್ಕಟಿಯೊಳಾ ಶರಭರುದ್ರಂ ನಡೆದು ಬಪ್ಪಂತೆ || ೫೩ ||

ಅಕ್ರಮದಿ ವರ್ತಿಸುತಲಿರ್ಪ ತ್ರಿ |
ವಿಕ್ರಮನ ಬೆನ್ನೆಲುವ ಮುರಿವೊಡೆ |
ವಿಕ್ರಮದಿ ಕಂಕಾಳರುದ್ರಂ ಬಿಜಯ ಮಾಳ್ಪಂತೆ ||
ಚಕ್ರಿ ಯಜ್ಞದೊಳೆರಳೆಯಾಗಿ ಮಿ |
ಗೆ ಕ್ರಮಿಸುತಿಹ ವಿಷ್ಣುಶಿರಮಂ |
ಚಕ್ರದಿಂ ಛೇದಿಸುವರೈದುವ ವೀರಭದ್ರನೊಲು || ೫೪ ||

ನಡೆದು ಬಂದನು ನಾರಸಿಂಹನ |
ಗುಡಿಯ ಮುಂದಕೆ ಸಕಲ ನಿರ್ಜರ |
ಪಡೆಸಹಿತ ವಾದ್ಯಪ್ರಘೋಷದಿ ಬಿರಿದ ಪೊಗಳಿಸುತೆ ||
ಪೊಡವಿಪತಿಸಹವಾಗಿ ಸಾಕ್ಷಾತ್ |
ಮೃಡಶರಣ ಪರಿವೇಷ್ಟನದಿ ಬೆಳು |
ಗೊಡೆ ಚಮರಿ ಸೀಗುರಿಪತಾಕಾಹ್ವಯದ ಗಡಣದೊಳು || ೫೫ ||

ನಿಂದ ನರಹರಿಯಿದಿರೊಳಗೆ ಖಂ |
ಡೇಂದುಧರನಪರಾವತಾರಂ |
ನಂದಿಮುಖದ ಮಹಾತ್ಮ ಷಟ್ತ್ರಿಂಶರ್ಕಾಂಬುನಿಧಿವಡಬಂ ||
ಸ್ಕಂದಶಿಲೆಪುರದೊಡೆಯ ಸಜ್ಜನ |
ವಂದಿತಾಂಘ್ರಿಸರೋಜ ಪರಮಾ |
ನಂದಪೂರಣಮೂರ್ತಿ ಶಂಕರದಾಸಿಮಯ್ಯಗಳು || ೫೬ ||

ಕಂಡನಾ ನಾಮಕರಮಂದಿಯ |
ತಂಡಮಂ ನಸು ನಗುತೆ ಕೇಳಿದ |
ಮಂಡಲಾಧೀಶ್ವರನೆ ವಾದಿಸಿದಾತನಾರೆಂದು ||
ಹಿಂಡು ವೈಷ್ಣವರೆಡೆಯೊಳೆಸೆದಿಹ |
ಭಂಡ ತತ್ವಾದಿಯನು ತೋರಿಸೆ |
ಕಂಡವನ ಕರೆಯೆಂದು ಶಂಕರದಾಸಿ ನೇಮಿಸಿದ || ೫೭ ||

ಕರೆಸಿದಂ ಜಯಸಿಂಹ ವೈಷ್ಣವ |
ಭರದಿ ಬಂದಾ ಭೂರಮಣನಂ |
ಪರಸಿ ನಿಂದಿರೆ ಕಂಡು ಶಂಕರದಾಸಿಯವನೊಡನೆ ||
ಒರೆದ ಕೇಳೈ ವೈಷ್ಣವಾ ನರ |
ಹರಿಯ ಸುಡ ಹೇಳುವರೆ ಅಕಟಾ |
ಪಿರಿದು ದೈವದ್ರೋಹಿಯಲ್ಲಾ ನೀನು ಧರೆಯೊಳಗೆ || ೫೮ ||

ಹಿಂದೆ ಶರಭೇಶ್ವರನ ಕೆಯ್ಯೊಳು |
ನೊಂದನೀ ನರಸಿಂಹ ಕೇಳ್ ನಿ |
ನ್ನಿಂದಲಾದುದುಪದ್ರ ನರಹರಿಗೆನಲದಂ[೧] ಕೇಳಿ ||
ನೊಂದು ನುಡಿದಂ ಬಹಳ ಮಾತುಗ |
ಳಿಂದ ಫಲವೇನೆಮ್ಮ ದೇವನ |
ಮುಂದೆ ನಿಂದವರುರಿದು ಪೋಪರು ಕೋಪಶಿಖಿಯೊಳಗೆ || ೫೯ ||

ಎಂದು ನುಡಿಯಲ್ಕಾ ನೃಸಿಂಹನ |
ಮುಂದೆ ಶಂಕರದಾಸಿಮಯ್ಯಂ |
ನಿಂದು ಸುಡಿಸೈ ನಿಮ್ಮ ದೇವನ ಕೆಯ್ಯೊಳೆಮ್ಮನೆನೆ ||
ನಿಂದು ವೈಷ್ಣವನಾ ನೃಸಿಂಹಗೆ |
ವಂದಿಸುತೆ ತೆರೆಯಂ ತೆಗೆಯೆ ಪೂ |
ರ್ಣೇಂದುವಂ ಕಂಡಂಬುಜದೊಲೆಸೆದಿರ್ದ ನರಸಿಂಹ || ೬೦ ||

ಮುಚ್ಚಿದುದು ಬಿಡುವಾಯಿ ಕಣ್ಣಿವೆ |
ಬೆಚ್ಚವಾಕ್ಷಣ ಬಲಿದು ಮನದೊಳು |
ಬೆಚ್ಚಿ ನಡುಗುವ ನಾರಸಿಂಹನ ಕಂಡು ಶಿವಶರಣ ||
ಉಚ್ಚಹದೊಳಾಡಿದನು ಕೋಪದ |
ಕಿಚ್ಚು ಕಾಣೆನು ನಡುಗುತಿಹುದೇ |
ನಚ್ಚರಿಯಿದಂ ಪೇಳೆನಲು ತತ್ವಾದಿಯಿಂತೆಂದ || ೬೧ ||

ನಡುಗುವರ ಕಂಗಳಿಗೆ ತೋರಿಕೆ |
ನಡುಗುತಿರ್ಪುದು ಸಹಜ ನರಹರಿ |
ನಡುಗುವುದ ನಾ ಕಾಣೆ ಕೇಳುಳಿದಾದ ದೈವಗಳ ||
ಸುಡುವ ಪೆರ್ಮೆಯ ಬಿಟ್ಟು ಭೊಂಕನೆ |
ಸುಡು ಸುಡುವುದುಂಟಾದೊಡಲ್ಲದೊ |
ಡಡಿಯಿಡಾಚೆಗೆನಲ್ಕೆ ಕೋಪಾಟೋಪದಿಂ ಶರಣ || ೬೨ ||

ತೆಗೆಯೆ ನಂದಿಯ ಮುಖಮುಖಾಡವ |
ಭುಗಿಭುಗಿಲು ಛಿಟಛಿಟಲೆನುತಲುರಿ |
ಹೊಗೆ ಕಣಾವಳಿಗೂಡಿ ಭೊಂಕನೆ ಭಾಳನೇತ್ರಾಗ್ನಿ ||
ನೆಗೆದು ಘೋರಾರ್ಭಟೆಯ ಮಾಡುತೆ |
ಧಿಗಿಧಿಗಿಲ್ ಧಗಧಗಿಸುತುರುಪಿದು |
ದಗಧರನ ಮೂರುತಿಯು ನಿಮಿಷಾರ್ಧದೊಳಗೇನೆಂಬೆ || ೬೩ ||

---

೧ ಗೀಗಲೆನೆ (ಇ, ಉ.)

ಪ್ರಳಯ ಕಾಲದ ಶಿಖಿ ತೃಣವ ಸುಡು |
ವೊಲು ವಿದಾರಣ ನಾರಸಿಂಹನ |
ಸುಲಭ ಶಂಕರದಾಸಿಮಯ್ಯನ ನೇತ್ರಶಿಖಿ ಸುಡಲು ||
ಮೊಳಗಿದುವು ದುಂದುಭಿಗಳಾ ಪೂ |
ಮಳೆಗರೆದುದಮರಾಳಿ ವಿಭವಂ |
ದಳೆದುಘೇ ಉಘೆ ಎಂದುದಾ ಶಿವಭಕ್ತನಿಕುರುಂಬಂ || ೬೪ ||

ಸ್ಮರನನುರುಪಿದನಂದು ಭುಜಗಾ |
ಭರಣ ಕಂಗಿಡಿಯಿಂದೆ ಭುಜಗಾ |
ಭರಣಕಿಂಕರ ದಾಸಿಮಯ್ಯಂ ತನ್ನ ಕಂಗಿಡಿಯಿಂ ||
ಉರುಪಿದಂ ಮನ್ಮಥನ ತಂದೆಯ |
ನರರೆ ಮಜರೇ ಭಾಪುರೆಂದತಿ |
ಸುರರು ಕೊಂಡಾಡಿದರು ತಮತಮಗೇನ ಬಣ್ಣಿಸುವೆ || ೬೫ ||

ನಡುಗಿದರು ಪರವಾದಿಗಳು ಗರ |
ಹೊಡೆದೊಲಿರ್ದಂ ವೈಷ್ಣವಂ ಭಯ |
ವಡಸಿದುದು ಜಯಸಿಂಹ ನೃಪಗೆ ನೃಸಿಂಹನಂ ಸುಟ್ಟು ||
ಕುಡಿವರಿವ ಘೋರಾಗ್ನಿ ಪುರವಂ |
ಸುಡುತಿರಲು ಕಂಡವನಿಪತಿ ತಾಂ |
ಬಿಡಿಸಬೇಕೆಂದೆರಗಿದಂ ದಾಸ್ಮಯ್ಯನಂಘ್ರಿಯೊಳು || ೬೬ ||

ಅರಸನವನತನಾಗಲಾ ರೌ |
ದ್ರರಸವರತುದು ಕರುಣರಸವಂ |
ಕುರಿಸಿದುದು ಕೃಪೆಯಿಂದೆ ಶಂಕರದಾಸಿಮಯ್ಯಗಳು ||
ಪುರವ ಸುಡುವಗ್ನಿಯ ಬಿಡಿಸಿ ಭೂ |
ವರನಿಗಭಯವನಿತ್ತು ಮನ್ನಿಸಿ |
ಯುರಿಯ ನಯನಂ ನಂದಿಕೇಶ್ವರಮುಖದಿ ಮರೆಸಿದನು[೧] || ೬೭ ||

ವಾದಿಗಳು ಭಕ್ತಿಯೊಳಗಾನತ |
ರಾದರಾಕ್ಷಣ ವೈಷ್ಣವಂ ತ |
ತ್ವಾದಿಗಳು ಸಹವಾಗಿ ಕಿಂಕುರ್ವಾಣದೊಳು ಬಂದು ||
ಪಾದದೊಳು ಪೊರಳಿದನು ತನ್ನಪ |
ರಾಧಮಂ ನೋಡದಿರೆನಲು ಶಾಂ |
ತೋದಯದೊಳೆಲ್ಲರನು ಸಂತೈಸಿದ ಮಹಾಮಹಿಮ || ೬೮ ||

---
೧ ಮುಖದೊಳಿರಿಸಿದನು (ಉ.)

ಹಿಂದೆ ಶರಭೇಶ್ವರನ ಕೆಯ್ಯೊಳು |
ನೊಂದನೀ ನರಸಿಂಹ ಕೇಳ್ ನಿ |
ನ್ನಿಂದಲಾದುದುಪದ್ರ ನರಹರಿಗೆನಲದಂ[1] ಕೇಳಿ ||
ನೊಂದು ನುಡಿದಂ ಬಹಳ ಮಾತುಗ |
ಳಿಂದ ಫಲವೇನೆಮ್ಮ ದೇವನ |
ಮುಂದೆ ನಿಂದವರುರಿದು ಪೋಪರು ಕೋಪಶಿಖಿಯೊಳಗೆ || ೫೯ ||

ಎಂದು ನುಡಿಯಲ್ಕಾ ನೃಸಿಂಹನ |
ಮುಂದೆ ಶಂಕರದಾಸಿಮಯ್ಯಂ |
ನಿಂದು ಸುಡಿಸೈ ನಿಮ್ಮ ದೇವನ ಕೆಯ್ಯೊಳೆಮ್ಮನೆನೆ ||
ನಿಂದು ವೈಷ್ಣವನಾ ನೃಸಿಂಹಗೆ |
ವಂದಿಸುತೆ ತೆರೆಯಂ ತೆಗೆಯೆ ಪೂ |
ರ್ಣೇಂದುವಂ ಕಂಡಂಬುಜದೊಲೆಸೆದಿರ್ದ ನರಸಿಂಹ || ೬೦ ||

ಮುಚ್ಚಿದುದು ಬಿಡುವಾಯಿ ಕಣ್ಣೆವೆ |
ಬೆಚ್ಚವಾಕ್ಷಣ ಬಲಿದು ಮನದೊಳು |
ಬೆಚ್ಚಿ ನಡುಗುವ ನಾರಸಿಂಹನ ಕಂಡು ಶಿವಶರಣ ||
ಉಚ್ಚಹದೊಳಾಡಿದನು ಕೋಪದ |
ಕಿಚ್ಚು ಕಾಣೆನು ನಡುಗುತಿಹುದೇ |
ನಚ್ಚರಿಯಿದಂ ಪೇಳೆನಲು ತತ್ವಾದಿಯಿಂತೆಂದ || ೬೧ ||

ನಡುಗುವರ ಕಂಗಳಿಗೆ ತೋರಿಕೆ |
ನಡುಗುತಿರ್ಪುದು ಸಹಜ ನರಹರಿ |
ನಡುಗುವುದ ನಾ ಕಾಣೆ ಕೇಳುಳಿದಾದ ದೈವಗಳ ||
ಸುಡುವ ಪೆರ್ಮೆಯ ಬಿಟ್ಟು ಭೊಂಕನೆ |
ಸುಡು ಸುಡುವುದುಂಟಾದೊಡಲ್ಲದೊ |
ಡಡಿಯಿಡಾಜೆಗೆನಲ್ಕೆ ಕೋಪಾಟೋಪದಿಂ ಶರಣ || ೬೨ ||

ತೆಗೆಯೆ ನಂದಿಯ ಮುಖಮುಖಾಡವ |
ಭುಗಿಭುಗಿಲು ಛಿಟಛಿಟಲೆನುತಲುರಿ |
ಹೊಗೆ ಕಣಾವಳಿಗೂಡಿ ಭೊಂಕನೆ ಭಾಳನೇತ್ರಾಗ್ನಿ ||
ನೆಗೆದು ಘೋರಾರ್ಭಟೆಯ ಮಾಡುತೆ |
ಧಿಗಿಧಿಗಿಲ್ ಧಗಧಗಿಸುತುರುಪಿದು |
ದಗಧರನ ಮೂರುತಿಯ ನಿಮಿಷಾರ್ಧದೊಳಗೇನೆಂಬೆ || ೬೩ ||

---

೧ ಗೀಗಲೆನೆ (ಇ. ಉ.)

ಪ್ರಳಯ ಕಾಲದ ಶಿಖಿ ತೃಣವ ಸುಡು |
ವೊಲು ವಿದಾರಣ ನಾರಸಿಂಹನ |
ಸುಲಭ ಶಂಕರದಾಸಿಮಯ್ಯನ ನೇತ್ರಶಿಖಿ ಸುಡಲು ||
ಮೊಳಗಿದುವು ದುಂದುಭಿಗಳಾ ಪೂ |
ಮಳೆಗರೆದುದಮರಾಳಿ ವಿಭವಂ |
ದಳೆದುಘೇ ಉಘೆ ಎಂದುದಾ ಶಿವಭಕ್ತನಿಕುರುಂಬಂ || ೬೪ ||

ಸ್ಮರನನುರುಪಿದನಂದು ಭುಜಗಾ |
ಭರಣ ಕಂಗಿಡಿಯಿಂದೆ ಭುಜಗಾ |
ಭರಣಕಿಂಕರ ದಾಸಿಮಯ್ಯಂ ತನ್ನ ಕಂಗಿಡಿಯಿಂ ||
ಉರುಪಿದಂ ಮನ್ಮಥನ ತಂದೆಯ |
ನರರೆ ಮಜರೇ ಭಾಪುರೆಂದತಿ |
ಸುರರು ಕೊಂಡಾಡಿದರು ತಮತಮಗೇನ ಬಣ್ಣಿಸುವೆ || ೬೫ ||

ನಡುಗಿದರು ಪರವಾದಿಗಳು ಗರ |
ಹೊಡೆದೊಲಿರ್ದಂ ವೈಷ್ಣವಂ ಭಯ |
ವಡಸಿದುದು ಜಯಸಿಂಹ ನೃಪಗೆ ನೃಸಿಂಹನಂ ಸುಟ್ಟು ||
ಕುಡಿವರಿವ ಘೋರಾಗ್ನಿ ಪುರವಂ |
ಸುಡುತಿರಲು ಕಂಡವನಿಪತಿ ತಾಂ |
ಬಿಡಿಸಬೇಕೆಂದೆರಗಿದಂ ದಾಸ್ಮಯ್ಯನಂಘ್ರಿಯೊಳು || ೬೬ ||

ಅರಸನವನತನಾಗಲಾ ರೌ |
ದ್ರರಸವರತುದು ಕರುಣರಸವಂ |
ಕುರಿಸಿದುದು ಕೃಪೆಯಿಂದೆ ಶಂಕರದಾಸಿಮಯ್ಯಗಳು ||
ಪುರವ ಸುಡುವಗ್ನಿಯ ಬಿಡಿಸಿ ಭೂ |
ವರನಿಗಭಯವನಿತ್ತು ಮನ್ನಿಸಿ |
ಯುರಿಯ ನಯನಂ ನಂದಿಕೇಶ್ವರಮುಖದಿ ಮರೆಸಿದನು[೧] || ೬೭ ||

ವಾದಿಗಳು ಭಕ್ತಿಯೊಳಗಾನತ |
ರಾದರಾಕ್ಷಣ ವೈಷ್ಣವಂ ತ |
ತ್ವಾದಿಗಳು ಸಹವಾಗಿ ಕಿಂಕುರ್ವಾಣದೊಳು ಬಂದು ||
ಪಾದದೊಳು ಪೊರಳಿದನು ತನ್ನಪ |
ರಾಧಮಂ ನೋಡದಿರೆನಲು ಶಾಂ |
ತೋದಯದೊಳೆಲ್ಲರನು ಸಂತೈಸಿದ ಮಹಾಮಹಿಮ || ೬೮ ||

---

೧ ಮುಖದೊಳಿರಿಸಿದನು (ಉ.)

ಅವರ ಮನ್ನಿಸಿ ಕಳುಹಿ ಧಾತ್ರೀ |
ಧವನನುರೆ ಬೀಳ್ಕೊಟ್ಟು ನಿರ್ಜರ |
ನಿವಹಮಂ ಪ್ರೇಮದಿ ಕಳುಪಿ ಪುರಜನವ ಬೀಳ್ಕೊಟ್ಟು ||
ಶಿವಶರಣತತಿಗೂಡಿ ತನ್ನಯ |
ಭವನಕೈದಿದ ದಾಸಿಮಯ್ಯಂ |
ಯುವತಿಯರ ಕುಲರನ್ನೆ ಶಿವದಾಸಿಯರು ಸಂತಸದಿ || ೬೯ ||

ಆರತಿಯ ತಂದೆತ್ತಿದಳು ವಿ |
ಸ್ತಾರಮಹಿಮಗೆ ಭಾಳನೇತ್ರಗೆ |
ವೀರಶೈವಾಚಾರ್ಯ ಶಂಕರದಾಸಿಮಯ್ಯನಿಗೆ ||
ಆರು ಪೊಗಳುವರಿಂತು ವಿಭವದಿ |
ಚಾರು ಶಿವಭಕ್ತರೊಳು ತತ್ವವಿ |
ಚಾರದಿಂದಿರುತಿರ್ದರಾ ಪುರದೊಳಗೆ ಕೆಲ ದಿವಸ || ೭೦ ||

ನೆನೆದ ಕಾರ್ಯಂ ಸಿದ್ಧಿಸಲಿ ಯೌ |
ವನಮದಾಗಲಿ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿ ಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನ ಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೭೧ ||

ಅಂತು ಸಂಧಿ ೧೨ಕ್ಕಂ ಪದ ೯೦೬ಕ್ಕಂ ಮಂಗಳಂ



## ೧೩ನೆಯ ಸಂಧಿ

# ಶಂಕರದಾಸಿಮಯ್ಯನು ಮೈಲಾರನಿಂದ ಕೊಡೆ ಹಿಡಿಸಿಕೊಂಡದ್ದು

**ಸೂಚನೆ**

ಮೃಡಶರಣ ಪರವಾದಿವಾರಿಧಿ |
ವಡಬ ಶಂಕರದಾಸಿಮಯ್ಯಗೆ |
ಕೊಡೆವಿಡಿದನತಿ ೧ಭೀತಿಯಿಂ ಪೆಂಬೇರ೧ ಮೈಲಾರ ||

ಶ್ರೀಕರಂ ಲೋಕೈಕನಾಯಕ |
ವಾಕ್ಸತೀಪತಿಶಿರಕರಂ ನಿ |
ರ್ವ್ಯಾಕುಲಂ ನೈರ್ಮಲ್ಯಶುದ್ಧಸ್ಫಟಿಕಸಂಕಾಶ ||
ನಾಕವಲ್ಲಭನಮಿತ ಶಿಖಿವಿಧು |
ಲೋಕಲೋಚನಲೋಚನಂ ಕರು |
ಣಾಕರಂ ಮೃತ್ಯುಂಜಯಂ ರಕ್ಷಿಸುಗೆ ಸಜ್ಜನರ || ೧ ||

ಇಂತಿರುತಮೊಂದು ದಿನ ಧಾತ್ರೀ |
ಕಾಂತ ಜಯಸಿಂಹನ ಕರೆಸಿಯ |
ತ್ಯಂತ ಹರುಷದಿ ಪೇಳೆ ಶಂಕರದಾಸಿಮಯ್ಯಗಳು ||
ಕಂತುಮರ್ದನ ಶ್ರೀಭವಾನೀ |
ಕಾಂತ ಶಿಖಿಪುರದರಸನಡಿಗಳ |
ಭ್ರಾಂತು ಮಿಗೆ ತೋರಿದುದು ಬೇಗದಿ ನೋಡಬೇಕೆಂಬ || ೨ ||

ಪೋದಪೆವು ನಮ್ಮೂರಿಗೆನೆ ದುಃ |
ಖೋದಯದಿ ಜಯಸಿಂಹಭೂವರ |
ನಾದಯಾಂಬುಧಿಗೆಂದ ನೀವೇ ನಿಮ್ಮ ನಿಜ ಪುರಕೆ ||
ಪೋದಪಿರಿ ಎನಗೇನು ಗತಿ ಎಂ |
ದಾದರಿಸಿ ಶಿವಶರಣನಾತಗೆ |
ಬೋಧಿಸಿದ ಸಂತೋಷದೊಳಗತಿ ರಾಜನೀತಿಗಳ || ೩ ||

---

೧-೧ ಪೆಂಪಿನಿಂದಲಿ ಬೀರ (ಉ.)

ಭೂರಮಣ ಕೇಳರಸುಗಳಿಗೆ ವಿ |
ಚಾರವೇ ಬೇಕಲ್ಲದೊಡೆಯಾ |
ಮಾರುತಂಗಿದಿರಾದ ದೀವಿಗೆಯಂತೆ ಕೆಡುತಿಹರು ||
ನಾರಿಯರ ನಂಬದಿರು ಮುಂದಣ |
ಕಾರಣವ ಕಾರ್ಯಗಳನರಿದು ವಿ |
ಚಾರ ಪುರುಷರು ಪೇಳ್ದ ಬುದ್ಧಿಯ ಕೇಳು ಮನ ನಂಬಿ[೧] || ೪ ||

ಆರ ಬುದ್ಧಿಯೊಳಾವ ಕಾರ್ಯಂ |
ಸೇರುವುದನರಿದವರ ದೇಶ ವಿ |
ಚಾರ ಕರ್ತರ ಮಾಡು ಸತಿಯರ ನೋಯಿಸಲು ಬೇಡ ||
ಧೀರನಾಗಿರು ಪರನೃಪರೊಳವಿ |
ಚಾರಮಂ ನೆಗಳದಿರು ಮೊರೆಯ ವಿ |
ಚಾರಿಸದೆ ಮುಖಮುಜ್ಜನವ ಮಾಡದಿರು ಭೂಪಾಲ || ೫ ||

ನುಡಿಯದಿರು ಪುಸಿ ಮಾತ ನಿನ್ನಯ[೨] |
ನುಡಿಯ ತಪ್ಪದಿರಾವರೊಳು ನಿ |
ನ್ನೊಡಲ ಛಾಯಾರೂಪರೆನಿಸುವರೇನ ಬೇಡಿದರು ||
ಕೊಡುತ ಬಾ ಮನ ನಂಬದವರೊಳು |
ಬಿಡು ರಹಸ್ಯದ ಮಾತ ನಿನ್ನಯ |
ಮಡದಿಯರನಳಲಿಸದಿರಿಚ್ಚೆಗನಾಗಿರವರೊಡನೆ || ೬ ||

ದೇವದಾಯ ಬ್ರಹ್ಮದಾಯದ |
ಸೇವನೆಯ ಬಯಸದಿರು ಸದ್ಧ |
ರ್ಮಾವರಣನಾಗಿರು ಪರಸ್ತ್ರೀಯಾಪಹರಣಕ್ಕೆ ||
ಹೇವರಿಸು ತಳತಂತ್ರವೀರರ |
ಜೀವಿತವ ಹಿಡಿಯದಿರು ದೋಷಕೆ |
ಸೀವರಿಸು ಯೋಗ್ಯರೊಳಗಾಹಮ್ಮಿಕೆಯನೆಸಗ[೩]ದಿರು || ೭ ||

ಎಡರಡಸೆ ಹೆದರದಿರು ಕಾರ್ಯವ |
ಬಿಡದಿರಗ್ರಜರನುಜರಾದರು |
ಕೊಡದಿರಾರಿಗು ನಂಬುಗೆಯ ನೀ ಕೊಟ್ಟು ತಪ್ಪದಿರು ||
ಗಡಣದೊಳಗಿರು[೪] ಭೃತ್ಯಭೂಪರ |
ನುಡಿಯದಿರು ಬಹುಮಾತ ಪಿಸುಣರ |
ನುಡಿಯ ಕೇಳದಿರಪ್ರಮಾಣಿಕರೊಡನೆ ಕೆಳೆ ಬೇಡ || ೮ ||

---

೧ ದುಂಬಿ (ಇ, ಉ.) ೨ ಸ್ನೇಹದ (ಇ. ಉ.) ೩ ಮಾಡ (ಇ, ಉ.) ೪ ಗೊಳದಿರು (ಇ, ಉ.)

ಪೆಸರನಿಟ್ಟರನೆಂಜಲುಂಡರ |
ನುಸುರಿದರ ಪದಪದ್ಯಗಳ ಕೇ |
ಳಿಸುತನದೊಳೋಡಾ[೧]ಡಿದರ ಶರಣಾಗತಾಶ್ರಿತರ ||
ಪಿಸುಣರಲ್ಲದ ಯೋಗ್ಯರಂ ಪಾ |
ಲಿಸು ಮರುಗದೊಲು ಸದ್ವ್ಯಯದಲೇ |
ಬೆಸೆದಿರಾದಾಯುವನರಿದು ಕೊಡು ಶಕ್ತಿಯೆಂತನಿತ || ೯ ||

ಮೆಚ್ಚ ನುಂಗದಿರಪ್ರಮಾಣಕೆ |
ಮೆಚ್ಚದಿರು ಬಯಲದ್ಭುತಕ್ಕತಿ |
ಬೆಚ್ಚದಿರು ಕೆಡಿಸದಿರು ಸುಜನ ನಿರಾಪರಾಧಿಗಳ ||
ಹೆಚ್ಚದಿರು ದುರ್ಬೋಧಕತ್ವಕೆ |
ನೆಚ್ಚದಿರು ಸೌಭಾಗ್ಯಲಕ್ಷ್ಮಿಯ |
ನೆಚ್ಚರಿಕೆಯಾಗಿರು ಸಮಸ್ತರೊಳೆಲೆ ಮಹೀಪಾಲಾ || ೧೦ ||

ಹೋಗೆ ಬಾರವು ಪ್ರಾಣಮಾನಂ |
ಹೋಗಿ ಬರ್ಪುವು ಸಿರಿದರಿದ್ರತೆ |
ಪೋಗವೆಂದಿಗು ಬಂದ ಬಳಿಕಂ ಕೀರ್ತಿಯಪಕೀರ್ತಿ ||
ಪೋಗದಿಹವೆರಡಕ್ಕೆ ಕಾರಣ |
ಮಾಗಿಹವು ಸಚ್ಚರಿತದುಶ್ಚರಿ |
ತಾಗವೋಭಯವೊಂದ ಪಿಡಿಯದಿರೊಂದ ಬಿಡಬೇಡ || ೧೧ ||

ಅರ್ಥಮೋ ಪ್ರಾಣಾಧಮಗೆ ಕೇ |
ಳರ್ಥಮಂ ಜರೆದೀ ಘಟಮೆ ಪ್ರಾ |
ಣಾರ್ಥವೆಂಬರು ಮಧ್ಯಮರು ಘಟವಂ ಜರೆದು ವಿಮಲ ||
ಕೀರ್ತಿಯೋ ಪ್ರಾಣಾಂಶದುತ್ತಮ |
ವರ್ತಕರಿಗೆಲೆ ರಾಯ ಕೇಳ್ ಸತ್ |
ಕೀರ್ತಿ ಸತ್ಯಾವರಣಗಲ್ಲದೆ ಬಾರದೆಲ್ಲರಿಗೆ || ೧೨ ||

ಚಿಂತಿಸುವನನ್ನಕ್ಕಧಮ ಮಿಗೆ |
ಚಿಂತಿಸುವ ದೇಹಕ್ಕೆ ಮಧ್ಯಮ |
ಚಿಂತಿಸುವ ಸನ್ಮಾನ ಕೆಟ್ಟಪುದೆನುತಲುತ್ತಮನು ||
ಚಿಂತಿಸುವ ಸದ್ಧರ್ಮವಿಷಯ |
ಭ್ರಾಂತ ನೀಂ ಕೇಳುತ್ತಮೋತ್ತಮ |
ನಂತುಕಾರಣ ಸತ್ಯವಂ ಬಿಡದಿರು ಮಹೀಪಾಲಾ || ೧೩ ||

---

೧ ಳೊಡನಾ (ಇ, ಉ.)

ನಳಹರಿಶ್ಚಂದ್ರಾದಿ ಭೂವರ |
ರಳಿದುದಿಲ್ಲವೆ ಅವರ ಕೀರ್ತಿಗ |
ಳಳಿದವೇ ಲೋಕಾಪವಾದಿಗಳಾಗಿ ಬದುಕಿದರೇ ||
ಅಳಿವುದೊಡಲಪಕೀರ್ತಿಕೀರ್ತಿಗ |
ಳುಳಿವುದದು ಕಾರಣದಿ ಮೂಜಗ |
ದೊಳಗೆ ಸತ್ಯವ ಬಿಟ್ಟು ಬದುಕುವ ಮನುಜ ನಡೆವೆಣನು || ೧೪ ||

ಪೊಡವಿ ಪರರಿಗೆ ಪೋದರೂ ಪಡೆ |
ದೊಡವೆ ಹರಿಹಂಚಾದರೂ ಕೇಳ್ |
ಮಡದಿ ಮಕ್ಕಳು ಮಿತ್ರರಳಿದರು ತನಗೆ ಬಹು ವಿಘ್ನ ||
ಅಡಸಿದರು ಬಲ್ಲವರು ಸತ್ಯವ |
ಬಿಡರು ನೀನೆಲೆ ಭೂಪ ಸತ್ಯದಿ |
ನಡೆ ಸಮಸ್ತ ಪದಾರ್ಥ ಕೈಸಾರಿಹುದು ನಿನಗೆಂದ || ೧೫ ||

ಕಡಿದರಾದರುವಿಕ್ಷು ಮಧುರಂ |
ಕೆಡದವೊಲು ಕಲ್ಲೊಳಗೊರಸಿ ಪುಡಿ |
ಪುಡಿಯ ಮಾಡಿದರೂ ಪಟೀರಂ ತನ್ನ ನಿಜಗಂಧ ||
ಕೆಡದವೊಲು ಮಿಗೆ ಕರಗಿ[೧] ಕಾಸುತೆ |
ಬಡಿದರೂ ಕಾಂಚನದ ಬಣ್ಣಂ |
ಕೆಡದವೊಲು ವಿಘ್ನಂಗಳೆನಿತಡಸಿದರು ಸಜ್ಜನಗೆ || ೧೬ ||

ಅರಿಯನೆನಿತುಂ ಸತ್ಯಭೂಮಿಯೊ |
ಳುರಿವನೆಳ್ಳನಿತಾಪವಾದಕೆ |
ಪೊರಗಿಹುದು ಲೋಕಕ್ಕವನ ಸನ್ಮಾನಸಾಧನವು ||
ಹರಿವುದೆಣ್ದೆಸೆ ಶುಕ್ಲಪಕ್ಷದ |
ಹೆರೆಯೊಲೂರ್ಜಿತಮಪ್ಪ ಕೇಳ್ ನೆಲ |
ದೆರೆಯ ನೀನೀ ಧರ್ಮದೊಳು ನಡೆಯೆಂದನಾ ಮಹಿಮ || ೧೭ ||

ನಿತ್ಯವಲ್ಲೀ ದೇಹ ಮಗನೇ |
ಸತ್ಯದೊಳು ನಡೆ ಸಕಲ ವಿಘ್ನಂ |
ಸತ್ಯದಿಂ ಪರಿಹಾರಮಪ್ಪುವು ಬಯಸಿದಿಷ್ಟವನು ||
ಸತ್ಯವೇ ತಂದೀಯುತಿರ್ಪುದು |
ಸತ್ಯವೇ ಭವಮಂ ಬಿಡಿಸುವುದು |
ಸತ್ಯದೊಳು ನಡೆದವನೆ ಶಿವ ತಾನೆಂದು ನಿಶ್ಚಯಿಸು || ೧೮ ||

---

೧ ಬಾಗಿ (ಇ, ಉ.)

ಎಂದು ಬೋಧಿಸಿ ನೃಪನ ಬೀಳ್ಕೊಂ |
ಡಂದು ಕಲ್ಯಾಣದ ಶಿವೈಕ್ಯರ |
ವೃಂದಕವನತನಾಗಿ ಕಳುಹಿಸಿಕೊಂಡು ಗೀರ್ವಾಣ ||
ಗೊಂದಣಂಗಳ ವಾದ್ಯಘೋಷಣ |
ದಿಂದೆ ಶಂಕರದಾಸಿಮಯ್ಯಂ |
ಬಂದ ಕೆಲ ದಿವಸಕ್ಕೆ ಪೆಂಬೇರೆಂಬ ನಗರಕ್ಕೆ || ೧೯ ||

ಆ ನಗರ ಬಾಹ್ಯದೊಳು ಮಿರುಪ ನ |
ವೀನ ಪೊಂಗಳಸಂಗಳುಪ್ಪರಿ |
ಭಾನುಬಂಧದೊಳೆಸೆವ ಮೈಲಾರನ ಸದನದೊಳಗೆ ||
ಏನ ಹೇಳುವೆನಾಶ್ರಯಿಸಿ ಸು |
ಮ್ಮಾನದಿಂ ಶಿವಶರಣರೊಳು ತ |
ತ್ವಾನುಭವ ಸದ್ಗೋಷ್ಠಿಯಿಂದೆಸೆದಿರ್ಪ ಸಮಯದೊಳು || ೨೦ ||

ಭಾವಕೀಜನ ಕೂಡಿ ಮಾಳಾ |
ದೇವಿಯೆಂಬ ಲತಾಂಗಿ ಬಂದಳು |
ದೇವಮೈಲಾರನ ಬಳಿಗೆ ಪೊನ್ನಂದಣವನಡರಿ ||
ಶೀವಿದುರು ಭಕ್ತಿಯೊಳು ಬಲವಂ |
ದಾ ವನಿತೆ ಮಲ್ಲಾಸುರಾರಿಗೆ |
ಸೇವಿಸಿದಳತಿಶಯದಿ ಪೊಗಳಿದಳವನ ಬಿರುದುಗಳ || ೨೧ ||

ತಂದ ಗಂಧಾಕ್ಷತೆ ಪ್ರಸೂನಾ |
ನಂದಧೂಪಂ ದೀಪಗಳ ಭಯ |
ದಿಂದೆ ನೈವೇದ್ಯಗಳ ತಾಂಬೂಲವ ಸಮರ್ಪಿಸುತೆ ||
ವಂದಿಸಿಯೆ ಮೈಲಾರಶೇಷವ |
ನೊಂದು ಚಿನ್ನದ ಬಟ್ಟಲೊಳು ತೆಗೆ |
ತಂದು ಶಂಕರದಾಸಿಮಯ್ಯನ ಮುಂದೆ ಮಡಗಿದಳು || ೨೨ ||

ದೇವ ಚಿತ್ತೈಸಯ್ಯ ಮಾಳಾ |
ದೇವಿಯರಸನ ಶೇಷಮಿದುಮೆನೆ |
ಪಾವಕಾಕ್ಷನ ಭಕ್ತ ಶಂಕರದಾಸಿಯೊಲ್ಲದಿರೆ ||
ಆ ವನಿತೆ ಪೇಳಿದಳು ವೀಳ್ಯವ |
ಪೂವ ಗಂಧಾಕ್ಷತೆಯ ಸುಫಳವ |
ನಾವನಿತ್ತರು ಕೈಕೊಳಲು ಬೇಕಯ್ಯ ನೀವೇಕೆ || ೨೩ ||

ಒಲ್ಲಿರೀ ಮೈಲಾರ ಶೇಷವ |
ನೊಲ್ಲಿರೋ ಸ್ತ್ರೀಯರುಗಳಿತ್ತುದ |
ನೊಲ್ಲಿರೋ ನಾ ನಿಮ್ಮ ಮಗಳಲ್ಲವೆ ಎನಲು ಮಹಿಮ ||
ಸೊಲ್ಲಿಸಿದ ನೀ ನಮ್ಮ ಮಗಳೇ |
ಕಲ್ಲ ಕೇಳಾವೀ ಪ್ರಸಾದವ |
ನೊಲ್ಲೆವೌ [೧]ನಿನಗಿರಲಿ ಮಗಳಿಗೆ[೧]ಯೆಂದ ನಸುನಗುತ || ೨೪ ||

ಎಂದ ಮಾತಂ ಕೇಳಿ ಪೇಳಿದ |
ಳೊಂದು ದೇವಾರ್ಚಕರೊಲಿದು ಮ |
ತ್ತೊಂದು ದೇವಾಲಯವ ಪೊಗಲಾಗದು ತಥಾ ಪೋಗೆ ||
ವಂದಿಸದೆ ಶೇಷವನು ಸಂತಸ |
ದಿಂದ ಕೈಕೊಳ್ಳದೊಡೆ ಪಾತಕ |
ವೆಂದು ನುಡಿಯಲು ಕೇಳಿ ಶಂಕರದಾಸಿಯಿಂತೆಂದ || ೨೫ ||

ಶುದ್ಧಮಾದಂತಃಕರಣಿಯೆ |
ಲ್ಲಿದ್ದೊಡಾತಗೆ ಕುಂದೆ ಮಾಂಸದೊ |
ಳಿದ್ದ ಪಾಲು ಜಿಗುಪ್ಸೆಯಹುದೇ ನಿಂಬವೃಕ್ಷದೊಳು ||
ಇದ್ದ ಮಧುರಂ ತಿಕ್ತವಹುದೇ |
ಬದ್ಧವಹುದೇ ಪೂರ್ಣಕೂಪದೊ |
ಳಿದ್ದ ತಾವರೆ ನಿಮ್ಮ ದೇವಾಲಯದೊಳಾವಿರಲು || ೨೬ ||

ಪಾಪವಿಲ್ಲೆನೆ ನಸು ನಗುತಲಾ |
ಚಾಪಲಾಂಬಿಕೆ ನುಡಿದಳಿರ್ದೊಡೆ |
ಪಾಪವಿಲ್ಲದವರು ಪ್ರಸಾದವ ತೆಗೆದುಕೊಳಲೇನು ||
ಪಾಪವೆನೆ ಅರಮನೆಗೆ ಪೋದರೆ |
ಪಾಪವಿಲ್ಲೆಂದೈದಿದವನಾ |
ಭೂಪನೆಂಜಲ ತಿನಬಹುದೆ ಕೇಳೆಲೆ ಸರೋಜಮುಖಿ || ೨೭ ||

ಶಿವಶರಣ ಬಂದನ್ಯದೈವಕೆ |
ಯವನತಂಗೈದೊಡೆ ಪೊಗಳದೊಡೆ |
ತವೆ ಪ್ರಸಾದವ ತೆಗೆದುಕೊಂಡೊಡೆ ಪೆಸರನಿಕ್ಕಿದೊಡೆ ||
ಭವಭವದಿ ಚಾಂಡಾಲಯೋನಿಯೊ |
ಳವತರಿಸಿ ದಾರಿದ್ರದೋಷಾ |
ರ್ಣವದೊಳಾಡುತ್ತಿಹರು ಕುಷ್ಠಾಂಗದೊಳು ರುಜೆಯಡಸಿ || ೨೮ ||

---
೧-೧ ನಿನಗೇ ಸಲಲಿ ತೆಗೆ (ಅ, ಉ, ಎ.)

ಮೃಡನ ನಿಂದಿಪನಿಂದೆ ಕೆರೆಗಳ |
ನೊಡೆವನಿಂ ಬಹು ನಿಷ್ಠುರಂಗಳ |
ನುಡಿವನಿಂದಂ ಬಿನುಗು ದೈವಕೆ ಮುಡುಹು ಮುಂದಲೆಯು ||
ಕೊಡುವನಿಂ ಯೋಗ್ಯರೊಳು ಚೇಷ್ಟೆಯು |
ನುಡಿವನಿಂದನ್ಯ ಪ್ರಸಾದವ |
ಪಿಡಿವ ಶಿವಶರಣಂಗೆ ಪಾತಕವೆಲೆ ಶಕಲನೇತ್ರೇ || ೨೯ ||

ಬೇಟೆಕಾರನ ಪರವಧುವಿಗತಿ |
ಬೇಟವಂ ಮಾಡುವನ ಹೊನ್ನಿನ |
ನೋಟಕಾರನ ನ್ಯಾಯಮಂ ಪುಸಿದವನ ಸಂಜೆಯೊಳು ||
ತೋಟಮಂ ತರಿದವನ ಪೊಗಳುವ |
ಪಾತಕನ ಕೇಳುಂಬರಿಗೆಯರೆ |
ಯೂಟಮಿಕ್ಕುವರ ಗತಿ ಪರದೈವಪ್ರಸಾದಕಗೆ || ೩೦ ||

ಲಿಂಗಧಾರಕನನ್ಯಶೇಷ |
ಕ್ಕಂಗಯಿಸಿದೊಡೆ ಘೋರ ನರಕದಿ |
ಪೊಂಗಿ ನಾನಾ ಯೋನಿಯೊಳು ಜನಿಸುತ್ತೆ ಸಾಯುತ್ತೆ ||
ಭಂಗಬಡುತಿಹನಧಿಕ ರೋದನ |
ವಂಗವಾಗಿಹುದವಗೆ ಭಾಸ್ಕರ |
ತಂಗದಿರರುಳ್ಳನ್ನಬರ ಮುಕ್ತಿಪಥಮವಗಿಲ್ಲ || ೩೧ ||

ಒಲ್ಲೆವದು ಕಾರಣಮೆನಲು ಮಿಗೆ |
ಸೊಲ್ಲಿಸಿದಳಾ ಲಲನೆ ಶಿವ ತಾ |
ನಲ್ಲವೇ ಮೈಲಾರ ಮತ್ತಿವ ದೈವವೇ ನಿಮಗೆ ||
ಸಲ್ಲದೆನಬಹುದೇ ಪ್ರಸಾದವ |
ಬಲ್ಲವರು ಸೀವೆನೆ ಮಗಳೆ ಶಿವ |
ನಲ್ಲಮಿವ ಗ್ರಹಮೆನಲವಳು ಕರೆಸಿದಳು ಗೊರವರನು || ೩೨ ||

ಬಂದನೊಲವಿಂ ಗೊರವ ಕುಂಕುಮ |
ಗಂಧದನುಲೇಪನದ ಕೊರಳೊಳ |
ಗೊಂದಿದೊಚ್ಚರಗವಡೆಗಳ ಕಂಬಳಿಯು ಕುಪ್ಪಸದ ||
[1]ಚಂದ[2]ದಿಂ ಪೀಲಿಯು ಚಮುರ[1] ಛ |
ತ್ರಂ[2] ದಿಗಿಲಿಸುತೆ ತುರಗಗಮನದಿ |
ಮುಂದೆ ನುಡಿಸುವ ಡಕ್ಕೆಗಳ ಕೊಂಬುಗಳ ರವ ಮೊಳಗೆ || ೩೩ ||

---

೧-೧ ಅಂದವಾಗಿಹ ಚಾಮರವ (ಇ.) ೨-೨ ದಿಂದಲಿ ಛತ್ರ ಚಾಮರ । ವಂ (ಉ.)

ಉಡಿಯ ಲಿಂಗದ ಬೋಳುದಲೆಗಳ |
ಪಿಡಿದರಿಸಿನದ ಪಾತ್ರೆ ಕಿವಿಯೊಳು |
ಜಡಿವ ಪೂಗಿನ ಕಂಬಳಿಯು ಟೊಪ್ಪಿಗೆಯು ಮೈಲಾರ ||
ಅಡಿಯೆಸೆವ ಪೊಂದಾಳಿಗಳ ಸರ |
ದೊಡಿಗೆಗಳ ಚೆಲ್ವಿಂದೆ ಗೊರವರ |
ಗಡಣವೀರರು ದೀವಿಟಿಗೆಯುರು ಪೊಗ್ಗ ತತಿಗೂಡಿ || ೩೪ ||

ಬಂದು ಮೈಲಾರನ ಗುಡಿಯ ಬಲ |
ವಂದು ದೇವಗೆ ನಮಿಸಿ ಕುಳ್ಳಿರ |
ಲಿಂದುಮುಖಿ ಪೇಳಿದಳು ಶಂಕರದಾಸಿಮಯ್ಯಗಳು ||
ಎಂದ ಮಾತಂ ಕೇಳಿ ಮನದೊಳು |
ನೊಂದು ಗೊರವರ ಗುರು ನುಡಿದ ಖತಿ |
ಯಿಂದೆ ಶಿವಶರಣಾಗ್ರಗಣ್ಯನೊಳೀನ ಪೇಳುವೆನು || ೩೫ ||

ಏತಕಯ್ಯಾ ನಮ್ಮ ದೇವನ |
ಭೂತಮೆಂದತಿ ನುಡಿದೆ ಕೇಳ್ ಸಾ |
ಕ್ಷಾತ ಪರಶಿವನಲ್ಲವೇ ಮೈಲಾರ ನೀನರಿಯಾ ||
ಈತನೇಳ್ಗೆಯ ಬಣ್ಣಿಸುವೊಡಹಿ |
ನಾಥಗಳವೇ ಮಲ್ಲನಾಮುದ |
ದೈತ್ಯನೊರ್ವಂ ಕ್ರೂರಮ್ಮುಗವಾಗಖಿಳ ಲೋಕಗಳ || ೩೬ ||

ಕೆಡಿಸುತಿರಲಜಮುಖ್ಯ ದೇವರ |
ಗಡಣ ಭೀತಿಯೊಳೀ ಶಿವಗೆ ಮೊರೆ |
ಯಿಡೆ ಕರುಣದಿಂ ಶಬರನಾಗಿ ಪಿನಾಕಿ ಪಾಶ್ವತವ ||
ಪಿಡಿದು ಪೀಲಿಯ ಬೆನ್ನ ಕೆಂದಳಿ |
ರುಡಿಗೆಯಿಂ ಮಲ್ಲಿಗೆಯ ಮಾಲೆಯ |
ತೊಡಿಗೆಯಿಂ ಪೊರಮಟ್ಟು ಮಲ್ಲಾಸುರವಧೆನಿಮಿತ್ತಂ || ೩೭ ||

ವೇದ ನಾಲ್ಕೇ ಕ್ರೂರ ಕುಕ್ಕುರ |
ವಾದವಾತಗೆ ಗಂಗೆಪಾರ್ವತಿ |
ಭೇದಮಿಲ್ಲದೆ ಗಂಗೆಮಾಳಾದೇವಿಯೆನಿಸಿದರು ||
ಆದರಿಸಿ ಸಂತಸದಿ ನಡೆತಂ |
ದಾ ದನುಜನಿರ್ದೆಡೆಗೆ ಕೆಲ ದಿನ |
ಕಾದಿಯವನೊಡಲಂ ಬಗಿದು ಪೊಸಕರುಳಮಾಲೆಗಳ || ೩೮ ||



**ಶಂಕರದಾಸಿಮಯ್ಯನಿಗೂ ಮೈಲಾರದೇವರ ಗೊರವನಿಗೂ ವಾದ**

( ಸಂಧಿ ೧೩, ಪದ್ಯ ೩೨-೬೧ )

ಇಟ್ಟವನ ದಂತಗಳ ಸರಮಂ |
ಕಟ್ಟಿ ಕೊರಲೊಳಗವನ ಚರ್ಮವ |
ನುಟ್ಟವನ ಪೊಸ ರಕ್ತಪಾನವ ಮಾಡಿ ಮದವೇರಿ ||
ಗಿಟ್ಟಿ ದೇವರದೇವ ದನುಜಘ |
ರಟ್ಟ ಮಲ್ಲಾಸುರ ಭಯಂಕರ |
[1]ದಿಟ್ಟಮೂರೆಸೆವೀಶನೊಲವಿಂದನಿಲ[1] ಬೇಂಟೆಯನು || ೩೯ ||

ಆಡುತಾರಣ್ಯದೊಳು ಕುರುಬರ |
ಬೀಡಿಗೆಯ್ತರಲವರ ಹೆಗ್ಗಡೆ |
ನೋಡಿ ಕಾಣಿಕೆಯಿಟ್ಟು ಮಲ್ಲಾಂತಕಗೆ ವಂದನೆಯ ||
ಮಾಡಿ ಮುಗುಳಿಂತೆಂದ ಕೃತಕದ |
ಬೇಡನೊಳು ಕೇಳೊಂದು ತೋಳಂ |
ಕಾಡುತಿದೆಯಿದು ತಿಂದ ಕುರಿಗಳ ಲೆಕ್ಕಗೊಳಬಹುದೇ || ೪೦ ||

ಅದ ಕೊಲುವರಂ ಕಾಣೆ ನೀನಿದ |
ಸದೆದೆಯಾದೊಡೆ ತನ್ನ ಮಗಳಂ |
ಮುದದೊಳೀವೆನೆನಲ್ಕೆ ತೋಳನ ಕೊಂದವನ ಮಗಳ ||
ಮದುವೆಯಾಗಿಯೆ ನಿಂದ ಮಹಿಮನ |
ಮದನಹರನಲ್ಲೀತ ಗ್ರಹಮೆಂ |
ದೊದರಬಹುದೇ ಪೇಳೆನಲು ದಾಸ್ಮಯ್ಯನಿಂತೆಂದ || ೪೧ ||

ಸಹಜವೈ ಮಲ್ಲಾಸುರನ ಕೊಂ |
ದ ಹರನೆಂದಾವರಿಯವೇ ಮ |
ಲ್ಲಹರನೀ ಮೈಲಾರ ಪುಸಿ ಪುಸಿ ಬಿಡು ಬಿಡಿವನುಗ್ರ ||
ಗ್ರಹ ನಿಜಂ ಕೇಳಿವನ ವರ್ತಕ |
ದ ಹದನಂ ವಿಸ್ತರಿಪೆ ಪೂರ್ವದಿ |
ಸಹಜ ಕ್ಷತ್ರಿಯನೀತ ಸಂಸಾರವ ಪರಿತ್ಯಜಿಸಿ || ೪೨ ||

ಹರುಷದಿಂದೈತಂದು ಜಿನಮಂ |
ದಿರಕೆಯಲ್ಲಿ ನಿವಾಸವಾಗಿಹ |
ಗುರುಗಳಿಗೆ ವಂದಿಸಿ ಮುನಿತ್ವವನೀಯಬೇಕೆನಲು ||
ಗುರುಗಳಾ ಭೂಪಾಲನಂತಃ |
ಕರಣಶುದ್ಧಿಯನರಿದು ದೀಕ್ಷೆಯ |
ಹರುಷದಿಂದಿತ್ತವಗೆ ಸಾಕ್ಷಾನ್ಮಲ್ಲಿತೀರ್ಥಕರ || ೪೩ ||

---

೧-೧ ದಿಟ್ಟಶಬರಾವೇಶನೊಲವಿಂ ಧರಿಸಿ (ಉ.)

ಚಾರು ನಾಮುದಿ ಮಲ್ಲಿದೇವಾ |
ಚಾರ್ಯನೆಂದುರೆ ಕರೆದು ತತ್ವವಿ |
ಚಾರಮಾರ್ಗವ ಬೋಧಿಸಿದರಾತಂಗೆ ಸಂತಸದಿ ||
ವೀರನಪ್ಪೊಲು ಸಕಲ ಶಾಸ್ತ್ರೋ |
ದ್ಧಾರನಪ್ಪೊಲು ಪರಮ ಧರ್ಮಾ |
ಚಾರನಪ್ಪೊಲು ಜ್ಞಾನಮಾರ್ಗಾಚಾರ್ಯನಪ್ಪಂತೆ || ೪೪ ||

ಮಗನೆ ಸಮ್ಯಗ್ದರ್ಶನಂ ಜ್ಞಾ |
ನ ಗತಿಗಳೆ ರತ್ನತ್ರಯಂ ಮತಿ |
ಮಿಗೆ ಮೆರೆವ 'ಅವಯಾದಿ'† ಯಿಂಗಿತ ಕೇವಲಜ್ಞಾನಂ ||
ಮಿಗಿಲೆನಿಪವ್ಯೆದರ ಭವಂ ನಾ |
ಸ್ತಿಗಳು ಜ್ಯೋತಿಷ್ಕರುಷವ್ರುಪವಾ |
ಸಿಗಳುವೆಂದರಿವಾದ ಚತುರ ನಿಕಾಯರೆನಿಸುವರು || ೪೫ ||

ಮುರಜದಂತಿಹುದಮರಲೋಕಂ |
ಪಿರಿದು ಘಂಟಾಕಾರವಾಗಿಹು |
ದರರೆ ಮರ್ತ್ಯವನಂತದ್ವೀಪಾರ್ಣವ ನಗಗಳಿಂದೆ ||
ಗೆರಸೆಯಂ ಗೆರಸೆಯೊಳು ಮುಚ್ಚಿದೊ |
ಲುರಗಲೋಕಂ ಮೆರೆವುದಿವರೊಡೆ |
ಯುರು ಸುರೇಂದ್ರಂ ಚಕ್ರವರ್ತಿಗಳಧಿಕ ಧರಣೀಂದ್ರ || ೪೬ ||

ಸುರರು ಪುಣ್ಯದಿ ಮೃದುತರಾಸನ |
ವೆರಡರೆಡೆಯೊಳು ಪುಣ್ಯಪಾಪದಿ |
ನರರ ಯೋನಿಯೊಳಧಮ ಲೋಕದಿ ಪಾಪವಶದಿಂದೆ ||
ಪಿರಿದು ಗದುಗಿನ ಕಾಯೊಳಗೆಯಂ |
ಕುರಿಸುವರು ಪಾತಕರು ಕೇಳ್ ಮೂ |
ವರಿಯ ಭವ್ಯಾಭವ್ಯಮೆಂದೆರಳ್ತೆರನು ಮಾಗಿಹರು || ೪೭ ||

ಪ೧ರಘನೋನಿಧಿ ಗುರುಘನೋನಿಲ |
ಪರಮು ತನುವಾತಂಗಳೆಂದು |
ತ್ತರದ ವಾಯುತ್ರಯವೆನಿಸುವರುಹಂತನಾಚಾರ್ಯ ||
ಪರಮ ಸಿದ್ಧ ಸರ್ಾಧುಪಾಧ್ಯಾ |
ಯರೆನಿಪಾ ಪರಮೇಷ್ಠಿಪಂಚಕ |
ವರರೆ ಕಾಮೋತ್ಸರ್ಗ ಪಲ್ಯಂಕಾಸನಗಳೆರಡು || ೪೮ ||

೧ ವ (ಉ.) † ಇದು 'ಶ್ರುತವವಧಿ' ಇರಬಹುದು

ಸುಮತಿ ಶೀತಳಂ ಪುಷ್ಪದಂತರ್ |
ವಿಮಲ ನಾದೀಶ್ವರ ನಜಿತ ಕುಂ |
ತು ಮುನಿಸೂರತಂ ಶಾಂತ ಅರ ಪಾರಿಶ್ವ ಶ್ರೇಯಾಂಶ ||
ನಮಿ ಸುಪಾರಿಶ್ವಾಭಿನಂದನ |
ನಮಲ ಶಂಭವ ಪದ್ಮಕಿರಣಾ |
ಗಮ ಶಶಿಪ್ರಭ ಮಲ್ಲಿ ನೇಮಿಯನಂತ ಧರ್ಮಾಖ್ಯ || ೪೯ ||

ವಾಸುಪೂಜ್ಯಂ ವರ್ಧಮಾನರು |
ಭಾಷಣಾನ್ವಿತ ದೇಹದಿಂ ಚೌ |
ವೀಸ ತೀರ್ಥಕರೆನಿಸುವರಹಿಂಸೆಯೆ ಪರಮಧರ್ಮ ||
ಆಸೆಯೆನಿಪುದು ಜೈನರಿಗೆಯುಪ |
ವಾಸ ಪಾರಣೆ ನಿತ್ಯವ್ರತ ಕೇ |
ಳಾ ಸುವ್ರತ ವತ್ಸರವ್ರತಾದಿಗಳೆಂದ್ಯೆದು ಭೇದಂ || ೫೦ ||

ಇರುಳಿನೂಟಂ ಜೇನು ಮಾಂಸಂ |
ಸುರೆ ಪರಾಂಗನೆಯಣಬೆ ಕೊಲೆ ಬೆ |
ಳ್ಳೂರೆ ಮಹಾ ಮಿಥ್ಯಾಪದಂ ಪರಪೀಡೆ ಜೂಜ್ಯೆದು ||
ಪರದ ಪಣ್ ನವನೀತಶಾಸ್ತ್ರಂ |
ಪರರ ದೈವಸ್ತೋತ್ರ ಗಿಣ್ಣು |
ತ್ಕರದ ದಾನಂ ಬೇಂಟೆ ಪೂವಿನ ಶಾಕ ಮೂಲವ್ರತಂ || ೫೧ ||

ಹೋಗು ಬಾ ಎನದುಗುಳದೆ ತಿಮಿರ |
ವಾಗೆ ತುರಿಸದೆ ನಿದ್ರೆಗೆಯ್ಯದೆ |
ಬಾಗಿಲಂ ತೆರೆಯದೆ ಕದಹುಗಳ ಕೆತ್ತಿರೆಂದೆನದೆ ||
ಆಗಲೆಲ್ಲಿಂದೆಯ್ದದತಿರುಜೆ |
ಯಾಗೆ ನರಳದೆ ಮದ್ದು ಕೊಳದನು |
ರಾಗದಿಂದಿಹುದೀಗ ಮುನಿಗಳ ಚಾರುಚಾರಿತ್ರ || ೫೨ ||

ಲೇಸು ಕಷ್ಟಂ ಜನನ ಮರಣ ಪಿ |
ಪಾಸೆ ಹಸು ಸುಖ ದುಃಖ ಪೊಗಳಿಕೆ |
ದೂಷಣತೆ ಷಡ್ವರ್ಗ ದೇಹಾದೇಹ ಪದಿನೆಂಟು ||
ದೋಷಮಿಂತಿವ ಪೊದ್ದದವ ಶ್ರೀ |
ವಾಸ ಸಾಕ್ಷಾತ್ಪರಶಿವಂ ಸ |
ದ್ಭಾಸ ಪ್ರತ್ಯಕ್ಷಾನುಮಾನಗಳೇ ಪದಾರ್ಥಗಳು || ೫೩ ||

ಸೇನ ಗಣ ದೇಶಿಯ ಗಣವು ನಾ |
ವೀನ ಕಾಣಾರ್ಗಣವುಮೆಂದೆ ನಿ |
ಧಾನದಿಂದೆಸೆದಿರ್ಪುವವು ಪದಿನಾಲ್ಕು ವಿಧವಾಗಿ ||
ಪೀನ ಶ್ವೇತಾಂಬರ ಬವುದ್ಧ ನ |
ವೀನ ಗುಜ್ಜರ ಕಾಷ್ಠ ಸಂಗಭಿ |
ಧಾನ ಮಾಘ ವಿಸಂಗವೆಂದೈದು ತೆರ ಜೈನರೊಳು || ೫೪ ||

ಪರಮ ನಿದ್ರಾನಿದ್ರೆ ಪ್ರಚುರೋ |
ತ್ಕರ ಮಹಾ ಪ್ರಚುರಾಪ್ರಚುರೆ ವಿ |
ಸ್ತರದ ನಿದ್ರಾಸ್ಥಾನ ಬುದ್ಧಿಯೆ ಸುಪ್ತ ಪಂಚಕವು ||
ಪಿರಿದು ಮನವಾಕ್ಕಾಯಕೃತವಂ |
ಕುರಿಪುಕಾರಿತಮಾನುಮೋದನ |
ತರುಣಿಯರೊಳಿಲ್ಲದಿಹುದೇ ನವ ಬ್ರಹ್ಮಚಾರಿತ್ರಂ[೧] || ೫೫ ||

ಚಾರು ಭೋಜನ ಪೂರ್ವರತಿಯ ವಿ |
ಚಾರ ಸೌವ್ಯಾಲೋಕದ ಸುಸಂ |
ಸಾರ ಸ್ತ್ರೀರಾಗೋಕ್ತಿ[೨]ಮಲ್ಲದುದೇ ಮಹಾಪಂಚ ||
ಚಾರುವ್ರತ ವಿರತರಿಗೆ ಬೋಧಿಸು |
ಪಾರಮಾರ್ಥದ ಕ್ರಿಯೆಗಳಂ ಸಂ |
ಸಾರಿಗರುಪಪವರ್ಗ ಪೆಂಗಳಿಗಿಲ್ಲವೆಂದರಿದು || ೫೬ ||

ಸ್ವರ್ಗ ಪದಿನಾಲ್ಕೆಂದು ಪೇಳಪ |
ವರ್ಗ ಮೂದೆರನೆಂದು ಮುಕ್ತಿಯು |
ವರ್ಗ ಮೂದೆರನೆಂದು ಧರ್ಮವೆ ಮೋಕ್ಷ ತಾನೆಂದು ||
ಸ್ವರ್ಗ ಮುಕ್ತಿ ವಿರಕ್ತಿಗಳಿಗಪ |
ವರ್ಗ ಮುನಿಗಳಿಗಣ್ಣಗಳಿಗಾ |
ಸ್ವರ್ಗ ಮೋಕ್ಷಾಂತರಕೆನುತೆ ಬೋಧಿಸು ವಟುಗಳೊಡನೆ || ೫೭ ||

ನಡೆಯುದಿರು ಕೈವೀಸಿ ಕೆಸರಿ |
ದ್ದೆಡೆಯ ಪೋಗದಿರೆಂದು ಹಸುರಿ |
ದ್ದೆಡೆಯ ಪೋಗದಿರೆಂದು ನೊಗವಳೆ[೩]ಯವ ನಿರೀಕ್ಷಿಸುತೆ ||
ನಡೆ ಸುಪಥದೊಳಗೊಲಿದು ಕುಳ್ಳಿರು |
ವೆಡೆಯ ನವಿಲಕಳಾಪದಿಂದಂ |
ತೊಡೆದು ಕುಳ್ಳಿರು ನಿಂದೆ ವಂದನೆ ಬೇಡ ಪರರೊಳಗೆ || ೫೮ ||

---

೧ ತ್ವಂ (ಇ.) ೨ ಸ್ತ್ರೀಯರ ಗೊತ್ತ (ಉ.) ೩ ನೀರೊಳೆ (ಉ.)

ಮೊದಲೆ ವರ್ಣಂ ಗಂಧ ರುಚಿ ಪಿಂ |
ಗಿದ ಪದಾರ್ಥವ ಕೊಳ್ಳದಿರು ಹಳೆ |
ಯುದಕವಾಜ್ಯಗಳುಪ್ಪುಗಾಯಂ ಮೆಲ್ಲದಿರುಯೆಂದು ||
ಪೊದೆಯದಿರು ತಟ್ಟೆಲ್ಲದೇನುವ |
ಮೃದು ಕಠಿಣ ಶೀತೋಷ್ಣದುಗ್ರಕೆ |
ಬೆದರದಾರಣ್ಯಾಶ್ರಯದೊಳಿರು ಹಿಂಸೆ ಪೊದ್ದದೊಲು || ೫೯ ||

ಚರುವ ಭಕ್ಷಿಸು ಮೌನದೊಳು ನಿಂ |
ದೆರಡು ಹಸ್ತವ ಕೂಡಿ ದಂತವ |
ನೊರಸದಿರು ಬಿಸಿ ನೀರನಲ್ಲದೆ ಕೊಳಲು ಬೇಡೆಂದ ||
ಕರುಣ ವ್ರತವಂ ತಪ್ಪದಿರು ಚಿ |
ತ್ತರದ ಲೆಪ್ಪದ[1] ಕುಟಿಲ ಲೋಹಿಹದ |
ಮರದ ನಾರಿಯ ರೂಪಗಳ ಮನ ನಚ್ಚಿ ನೋಡದಿರು || ೬೦ ||

ಪಿರಿಯನೆಂದೇ ನೀನು ಮೊದಲೇ |
ಚರುವ ಕೊಳದಿರು ಕೇಳದವರೊಳ |
ಗೊರೆಯದಿರು ಬೋಧೆಯ ಕಮಂಡಲು ಕುಂಚ ಹಸ್ತದೊಳು ||
ಇರಲಿ ಕೇಳ್ ಶೌಚಾಚಮಾನವ |
ಧರೆಯ ಮೇಲೊಡರದಿರು ಕೇಶವ |
ನರಿಯದಿರು ಶಸ್ತ್ರದೊಳು ಲೋಚಿಂ ತೆಗೆ ದಿನಾಂತರದೆ || ೬೧ ||

ಎಂದು ಬೋಧಿಸಿ ಮಗುಳೆ ಮಂತ್ರಾ |
ನಂದವಂ ಪೇಳುತೆ ತ್ರಿಯಕ್ಷರ |
ವೊಂದೆನಿಸಿದೀ ಮಂತ್ರಮಿದರಿಂ ಮಲ್ಲಿಗೆಯ ಪೂವ ||
ತಂದು ಮಂತ್ರಿಸಿ ಸತಿಯರಿಗೆ ಕುಡೆ |
ಬಂದಪರು ಭ್ರಮೆಯೊಳಗೆ ತಪ್ಪದಿ |
ದೆಂದು ಸದ್ಗುರು ಮಲ್ಲಿದೇವಾಚಾರ್ಯರುಸುರಿದರು || ೬೨ ||

ಇಂತು ಜಿನಧರ್ಮವನೊಲಿದು ಕೇ |
ಳ್ದಂತರಂಗದಿ ನಿಶ್ಚಯಿಸಿಯ |
ತ್ಯಂತ ಧರ್ಮದಿ ಮಲ್ಲಿದೇವಾಚಾರ್ಯನಿರುತಿದ್ದು ||
ಸಂತಸದೊಳೊಂದಿನ ನಡೆದು ಬಹ |
ಪಾಂಥದೊಳಗಿದಿರಾಗಿ ಬಂದಳು |
ಕಾಂತೆ ಕುರುಬತಿ ಮಾಳೆಯೆಂಬವಳವಳ ಗಾಡಿಯನು || ೬೩ ||

---

೧ ಲೊಪ್ಪವ (ಇ.) ೨ ಮೋ (ಇ.)

ನೋಡಿಯಂತಃಕರಣ ಮಿಗೆ |
ಯಲ್ಲಾಡಿದುದು ಕಾತುರಿಯು ದೇಹದೊ |
ಳೀಡಿರಿದುದತಿ ವಿರಹ ಪೆಚ್ಚಿದುದಾ ಮುನೀಶ್ವರಗೆ ||
ಪಾಡಳಿದುದೆತಿಮಾರ್ಗಮವಳಂ |
ಕೂಡಬೇಕೆಂಬಿಚ್ಛೆ ಮನದೊಳು |
ಮೂಡಿದುದು ಕೇಳ್ ತೆರದಿ ಕೆಲ ದಿವಸಗಳ ಕಳೆದು || ೬೪ ||

ಒಂದು ದಿನ ಮಲ್ಲಿಗೆಯ ಪೂವಂ |
ತಂದು ಮಂತ್ರಿಸಿಯಾ ಕುರುಬತಿಯು |
ಮಂದಿರದ ಬಳಿಗೈದಿಯಾರುಂ ಕಾಣದಂದದಲಿ ||
ಒಂದು ಬಂಡಿಯೊಳಡಗಿರಲವಳ್ |
ಬಂದುದಿಲ್ಲಾ ದಿವಸ ಬಸ್ತಿಗೆ |
ಬಂದನಾ ಮಲ್ಲಿಗೆಯ ಪೂವಂ ಬಂಡಿಯೊಳು ಹಾಕಿ || ೬೫ ||

ಭಂಡ ಬಂದಾಲಯದ ಕದಗಳ |
ನಂಡಲೆದು ನೂಕಲ್ಕದಂ ಗುರು |
ಕಂಡದರ ಭೇದವ ಮನಃಪರಿಯಾಯಮಂ ತಿಳಿದು ||
ಭಂಡು ಮಾಡಿದ ಜೈನಧರ್ಮವ |
ದಿಂಡೆಯನಿವಂ ನಮ್ಮ ಶಿಷ್ಯರ |
ತಂಡದೊಳಗಿರಬೇಡವೆನುತಂ ಪೊರಡಿಸಿದನವನ || ೬೬ ||

ಬಂಡಿಯೊಳಗಿಹ ಪೂವನವ ತ |
ಕ್ಕೊಂಡು ಬಂದಾ ಮಾಳಿಯೆಂಬಳ |
ಕಂಡು ಬೇಟವ ಬೆಳೆಸಿಯುವಳನೊಡಂಬಡಿಸಿಯಾಗ ||
ಮಂಡೆಯೊಳಗೆ ತುರುಂಬಿಯೋಡಿಸಿ |
ಕೊಂಡು ಪೋಗುವ ದಾರಿಯೊಳು ಕುರಿ |
ವಿಂಡ ಕಾದಿ[೧]ರ್ದವಳ ನಿಜಪತಿ ಕಂಡು ಪುಯ್ಯಲಿಡೆ || ೬೭ ||

ಕೇಳಿ ಹತ್ತಿರೆ ಬೇಂಟೆಯಾಡುವ |
ಕಾಳು ಬೇಡರು ಬೆಂಬರಿದು ಬಲು |
ಬೋಳೆಯಂಬುಗಳಿಂದಲಿಬ್ಬರನೆಚ್ಚು ಕೊಲಲವರು ||
ಮಾಳಿಮಲ್ಲರೆನಿಪ್ಪ ಪೆಸರ ಕ |
ರಾಳ ಭೂತಗಳಾದರೆಂದೆನೆ |
ಕೇಳಿ ಗೊರವರು ಗಜರಿ ನುಡಿದರು ದಾಸಿಮಯ್ಯನೊಳು || ೬೮ ||

---

೧ ತೆಗೆದಿ (ಉ.)

ಭೂತಗಳೆ ನೋಡೆಮ್ಮ ಮಲ್ಲಾ |
ರಾತಿ ಮಾಳಾದೇವಿಯರು ಪುಸಿ |
ಮಾತನಿಂತಾಡುವರೆ ನೀವಕಟಕಟ ನಿಮ್ಮೊಡನೆ ||
ಭೂತಗಣವೈತಂದು ಸೇವೆಯ |
ಭೀತಿಯಿಂ ಮಾಡುತಿರೆ ಕೇಳೀ |
ಭೂತಗಳ ಕೈಯಿಂದ ಕೆಲಸವನೇಕೆ ಮಾಡಿಸಿರಿ || ೬೯ ||

ಎಂದು ವ್ಯಂಗ್ಯವನಾಡೆ ಗೊರವರೊ |
ಳೆಂದ ಮೈಲಾರನ ಕರೆದು ನಾ |
ವೊಂದು ಸೇವೆಯ ಮಾಡಿಸಿದುದುಂಟಾದೊಡೆಮ್ಮೊಡನೆ ||
ಬಂದಪಿರೆ ಭೃತ್ಯತ್ವದೊಳಗೆನ |
ಲೆಂದರಾ ಗೊರವ ಜನ ನಮ್ಮಯ |
ತಂದೆಯೇ ಊಳಿಗವ ಮಾಡಿದೊಡಾವು ಬಹುದೇನು || ೭೦ ||

ಅರಿದೆ ಹಾಗೇ ಮಾಡಿಯೆನೆ ಶಿವ |
ಶರಣನಾ ಮೈಲಾರದೇವನ |
ಕರೆಯೆ ಭೋಂಕನೆ ಗದ್ದುಗೆಯ ಬಿಟ್ಟೆದ್ದು ನಡೆತಂದು ||
ಚರಣಕಾನತನಾಗಿ ನಡುಗುತೆ |
ಕರವ ಮುಗಿದೆನಗಾವುದೂಳಿಗ |
ಕರುಣಿಸುವುದೆನೆ ನಗುತ ಶಂಕರದಾಸಿಮಯ್ಯಗಳು || ೭೧ ||

ನುಡಿದ ಕೇಳೈ ನಮ್ಮ ಛತ್ರವ |
ಪಿಡಿದು ನವಿಲೆಯು[೧] ಪುರಕೆ ನೀನೆ |
ಮ್ಮೊಡನೆ ಬಾರೆನೆ ಜೀಯ ಬದುಕಿದೆನೆನುತೆ ಮೈಲಾರ ||
ಕೊಡೆವಿಡಿದು ಕಲಿ ದಾಸಿಮಯ್ಯಗ |
ಳೊಡನೆ ಪೋಪುದ ಕಂಡು ಗೊರವರ |
ಪಡೆ ಬೆದರಿ ಹೊಡೆಗೆಡೆದರಾತನ ಪಾದಪಂಕಜಕೆ || ೭೨ ||

ಅರಿಯದಾದೆವು ಸ್ವಾಮಿ ನಿಮ್ಮಯ |
ನೆರೆ ಮಹಿಮೆಯಂ ತಾವು ಮಿಗೆ ಮ್ಮೈ |
ಮರೆದು ನಿಮ್ಮೊಳು ಸೆಣಸಿದೆವು ಕೇಳ್ ನಾವು ಬೊಗಳಿದೊಡೆ ||
ಕೊರತೆಯೇ ಬೊಗಳಾಟದವರೆಂ |
ದರಿಯಿರೇ ಮೈಲಾರ ಭಕ್ತರ |
ಮರೆಯಬೇಹುದಿದೊಂದು ಬಾರಿಗೆ ನಮ್ಮ ತಪ್ಪುಗಳ || ೭೩ ||

---

೧ ನಮ್ಮಯ (ಇ.)

ಎಂದು ದೈನ್ಯದಿ ಗೊರವ ಸಂಕುಳ |
ವಂದಿಸಲು ನಸು ನಗುತ ಕರುಣಾ |
ಸಿಂಧು ಶಂಕರದಾಸಿಮಯ್ಯಂ ದೇವತತಿಗೂಡಿ ||
ನಿಂದು ಕಲಿ ಮೈಲಾರನೊಡನಿಂ |
ತೆಂದ ಪೋಗೈ ನೀನು ನಿನ್ನಯ |
ಮಂದಿರಕೆ ಕೊಡು ಕೊಡೆಯನೆನೆ ಮೈಲಾರನಿಂತೆಂದ || ೭೪ ||

ಕೊಡೆನು ಜೀಯಾ ನಿನ್ನ ಛತ್ರವ |
ಪಿಡಿದು ಕೊಂಡಿಹೆ ನಿಚ್ಚ ನನಗೀ |
ಕೊಡೆಯೆ ನಿಮ್ಮಂಘ್ರಿಗಳಿಗಿಂದೆ ವಿಶೇಷವೆಂದೆನಲು ||
ಮೃಡಶರಣ ಪಾಲಿಸಿದನವನಿಗೆ |
ಕೊಡೆಯನಾ ದಿನದಿಂದಲೆಲ್ಲರು |
ಕೊಡೆಯ ಮೈಲಾರಾ ಎನುತ್ತಿಹರೀನ ಬಣ್ಣಿಸುವೆ || ೭೫ ||

ವೀರಶೈವಾಚಾರ್ಯ ಮಹಿಮಾ |
ಪೂರಣಂ ಪಕ್ಷಿದ್ವಿದಾರಣ |
ನಾರ[1]ಸಿಂಹಾಟವ್ಯದಾವಾನಲ ನಿಟಿಲ[1]ನೇತ್ರ ||
ಚಾರುಕೀರ್ತಿ ತ್ರೈಜಗದ್ವಿ |
ಸ್ತಾರ ಶಂಕರದಾಸಿಯಾ ಮ್ಯ |
ಲಾರನಂ ಬೀಳ್ಕೊಟ್ಟ ಪೆಂಚೀರಿಗೆ ಸರಾಗದೊಳು || ೭೬ ||

ನೆನೆದ ಕಾರ್ಯಂ ಸಿದ್ಧಿಸಲಿ ಯೌ |
ವನಮುದಾಗಲಿ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿ ಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನ ಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೭೭ ||

**ಅಂತು ಸಂಧಿ ೧೩ಕ್ಕಂ ಪದ ೯೮೩ಕ್ಕಂ ಮಂಗಳಂ**



---

[1]-[1] ಸಿಂಹನ ಅದಟ ಸಂಹರಣನಲಘಣಿ (ಇ.)

೧೪ನೆಯ ಸಂಧಿ

# ಉಜ್ಜನಿಯ ಮಹಾಕಾಳಿಯು ಶಂಕರದಾಸಿಮಯ್ಯನಿಗೆ ಕಾಳಂಜಿಯನ್ನು ಹಿಡಿದದ್ದು

**ಸೂಚನೆ**

ಭಾಳಲೋಚನ ದಾಸಿಮಯ್ಯಗ |
ಳೋಳಿಯಿಂದೊಲಿದುಜ್ಜನಿಯ ಮಹ |
ಕಾಳಿ ಕಾಳಂಜಿಯ ಪಿಡಿದಳೀ ಲೋಕವರಿಯಲಿಕೆ ||

ತ್ರಿಜಗಮಂ ಶಿರದಿಂದೆ ತಾಳಿದ |
ಭುಜಗ ಕಟಕದಿ ಮಿರುಪ ಹಸ್ತಾಂ |
ಬುಜದೊಳಗೆ ನಾನಾ ಜಗಂಗಳ ನಿರ್ಮಿತಂಗೈದ ||
ಅಜಕಪಾಲವ ಪಿಡಿದು ಹದಿನಾ |
ಲ್ಕು ಜಗಮಂ ಕುಕ್ಷಿಯೊಳಿರಿಸಿದಂ |
ಬುಜನಯನನಕ್ಷಿಯ ಪದದೊಳಾಂತೀಶ್ವರನೆ ಜಯತು || ೧ ||

ಕರುಣಿಶಂಕರದಾಸಿ ಮುಂದಕೆ |
ತೆರಳಿದಂ ಸಂತಸದಿ ಸುರವೋ |
ಹರಸಹಿತ ವಾದ್ಯಪ್ರಘೋಷದಿ ದೆಸೆ ನಡುಗುವಂತೆ ||
ಹರುಷದಿಂದೈತಂದು ಧರಣೀ |
ತರುಣಿಸೀಮಂತಾಭರಣದಂ |
[1]ತೆ ರಚಿಸುತ್ತೆಸೆದಿರ್ಪ ವಿವಿಧೋಜ್ಜನಿಯ ಪಟ್ಟಣಕೆ[1] || ೨ ||

ಬಿರಿದ ಪೊಗಳಿಸಿಕೊಳುತೆಯೂಡಂ |
ಬರದಲಾ ಪಟ್ಟಣಕೆ ಬಂದೀ |
ಶ್ವರಸದನದೊಳು ಪೊಗಲು ಕಂಡಲ್ಲಿರ್ದ ಶಾಕ್ತೆಯರ ||
ಹೊರಳಿ ಬಲ್ಬಜೆಯಿಂದ ತನ್ನಯ |
ಬಿರಿದ ಬಿಡಿಸುವೆನೆನುತ ಘೊಂಕನೆ |
ಪರಿದು ಬಂದರು ಭಾಳನೇತ್ರದ ಮಹಿಮನಿದ್ದೆಡೆಗೆ || ೩ ||

---

೧-೧ ತಿರುವ ವುಜ್ಜನಿ ಪಟ್ಟಣಕೆಯೊಲವಿಂದೆಯ್ದಿದನು (ಇ.)

ಶರಣನಿದಿರೊಳು ಕುಳಿತುದಾ ಭೂ |
ಸುರಸಮೂಹಂ ಕೇಳ್ದರೇತಕೆ |
ಬಿರಿದು ಜಂಗಮರೇನ ಬಲ್ಲರಿ ವೇದಶಾಸ್ತ್ರಗಳ ||
ಬಿರಿದ ಬಿಡಿ ಸಲ್ಲದು ನಿಮಗೆ ಷ |
ಡ್ದರುಶನಾಚಾರ್ಯತ್ವ ಭೂಮಿಾ |
ಸುರರಿಗಲ್ಲದೆ ಶೂದ್ರರಿಗೆ ಸಂಬಂಧವಲ್ಲೆಂದ || ೪ ||

ಕೇಳಿ ಶಂಕರದಾಸಿ ನುಡಿದ ಕ |
ರಾಳ ರೋಷದಿ ಬಾಯ್ಗೆ ಬಂದೊಲು |
ಹೇಳದಿರಿ ಜಂಗಮಕೆ ಬಹವೊಲು ವೇದಶಾಸ್ತ್ರಗಳು ||
ಕಾಳು ವಿಪ್ರರಿರಾ ನಿಮಗೆ ಬರ |
ದೇಳಿ ಚಾತುರ್ವೇದ ಪರಿಕೆಯ |
ಕೇಳಿರೈ ನೀವೆಮ್ಮನೆನೆ ಭೂಸುರರು ಹಾಸ್ಯದೊಳು || ೫ ||

ಊಳಿದರು ಶೂದ್ರರ ಪರೀಕ್ಷೆಯ |
ಕೇಳಲಾಗದು ಬ್ರಾಹ್ಮಣರು ಮಿಗೆ |
ಪೇಳಲಾಗದು ಶೂದ್ರ ವೇದಕ್ಕರುಹ ಬ್ರಾಹ್ಮಣನು ||
ಕೇಳುಳಿದ ಜಾತಿಗಳರುಹರೇ |
ಪೇಳೆನಲು ಶಿವಶರಣನವರೊಳು |
ಪೇಳಿದನು ಕಡು ರೋಷ[೧]ಮೊಸಗುತೆ ಗಜರಿ ಗರ್ಜಿಸುತೆ || ೬ ||

ಆದರಿಸಿ ಬ್ರಾಹ್ಮರೊಳು ನಾಲುಕು |
ಭೇದ ಶೂದ್ರ ದ್ವಿಜ ವಿವಿಧ ವಿ |
ಪ್ರಾದಿ ಬ್ರಾಹ್ಮಣನೆಂದು ಜನ್ಮತದಿಂದೆ ಶೂದ್ರತ್ವಂ ||
ಆದುದೊಂದುಪನಯನದಿಂ ದ್ವಿಜ |
ನಾದ ವಿಪ್ರತ್ವಂ ಸಕಲ ಶ್ರುತಿ |
ಸಾಧಕನೆ ಬ್ರಾಹ್ಮಣನೆನಿಸಿದಂ ಬ್ರಹ್ಮಮಂ ತಿಳಿದು || ೭ ||

ಈ ಚತುರ್ವಿಧ ಬ್ರಾಹ್ಮರೊಳು ನಿ |
ಮ್ಮಾಚರಣೆಯಿಂ ಶೂದ್ರರಾದಿರಿ |
ನೀಚ ಶಾಕ್ತೆಯರಿಂಗೆ ವೇದಾಗಮದ ಚಾರಿತ್ರ ||
ಗೋಚರವೆ ನೀವ್ ಸುಮ್ಮನಿರಿ ಬ್ರ |
ಹ್ಮಾಚರಣೆ ನಿಮಗಿಲ್ಲ ಬ್ರಾಹ್ಮಣ |
ವಾಚ ಲಿಂಗಾಂಗಿಗಳಿಗಲ್ಲದೆ ಉಳಿದವರಿಗೊಳವೇ || ೮ ||

---
೧ ಕೋಪ (ಇ.)

ಎನಲವಂದಿರು ಶೂದ್ರರೇ ನಾ |
ವೆನಲಹುದು ಶೂದ್ರತ್ವ ನಿಮ್ಮಯ |
ಜನನದಿಂದಾಯಿತ್ತು ಚಾಂಡಾಲತ್ವ ನಿಮಗಾಯ್ತು ||
ಬಿನುಗು ಶಾಕ್ತೆಯರಾಚರಣೆಯಿಂ |
ದೆನೆ ಕನಲಿ ಚಾಂಡಾಲ ಬ್ರಾಹ್ಮಣ |
ರೆನಬಹುದೆ ನೀವೆಮ್ಮನೆನೆ ಶಿವಶರಣನಿಂತೆಂದ || ೯ ||

ಸುರಮುನಿದ್ವಿಜರಾಜವೈಶ್ಯಂ |
ಚರಣಜಂ ಮಾರ್ಜಾಲಪಶುಮ್ಲೇ |
ಚ್ಛರತಿ ಚಾಂಡಲರೆನಿಪ ದಶ ವಿಧ ವಿಪ್ರರೊಳು ನೀವು ||
ಪರಮ ಚಾಂಡಾಲರು ಪಿಶಿತಮಂ |
ಧರಿಸಿ ಮಧುವೀಂಟುವಿರಿ ದೂಷಣೆ |
ಪರಸತಿಯರೊಳು ಕೂಡುವುದು ನಿಜವಾಗಿಹುದು ನಿಮಗೆ || ೧೦ ||

ಎನೆ ಚಥಾಳಿಸಿ ಶಾಕ್ತೆಯರು ಭೋಂ |
ಕನೆ ನುಡಿದರೆಲೆ ಜಂಗಮಾ ಸು |
ಮ್ಮನಿರು ನಿನಗೇಕೆಮ್ಮ ಶಾಸ್ತ್ರದ ಮಾತು ತ್ರೈಜಗದ ||
ಜನನಿ ಮಾತಂಗಿಯ ಶರಣ[೧]ವ |
ರ್ತನೆಗದಾವ ಮತಂಗಳೆಣೆ ಜೀ |
ವನವಲಾ ಶಾಕ್ತೇಯಮತ ನಾನಾ ಮತಂಗಳಿಗೆ || ೧೧ ||

ಮಿಸುಪ ಮಂಗಳ ಶುಕ್ರವಾರದ |
ನಿಶಿಯೊಳಗೆ ರಾಹಸ್ಯದೊಳಗಾ |
ಪಶುಗಳೆಲ್ಲಾ ಕೌಳಮಾರ್ಗಾನುಭವ ವರ್ತನದಿ ||
ಎಸೆವ ಮಾಹೇಶ್ವರರ ಗಡಣದೊ |
ಳೊಸೆದು ಸಮಿತಂ ಕರತಳದೊಳಿ |
ಟ್ಟು ಶುಭಮಂತ್ರೋಕ್ತದಿ ಮತಂಗಿಯ ಧ್ಯಾನಿಸುತ ಕೊಂ[೨]ಡು || ೧೨ ||

ಘನ ಮಹಾದೇವಿಯರಿಗಷ್ಟಾ |
ರ್ಚನೆಯ ಭಕ್ತಿಯೊಳೊಡರಿ ಕೆಂಪಿನ |
ನನೆಗಳಿಂದಂ ಮಂತ್ರ ಪುಷ್ಪವನಿತ್ತು ಮಗುಳೊಲಿದು ||
ಇನಿದೆನಿಪ ಪಟ್ಟೆಯ ಘಟವ ಜೀ |
ವನವೆನಿಪ ಸದ್ದ್ರವ್ಯ ಚಕ್ರಾ |
ರ್ಚನೆಯನೊಲವಿಂ ಮಾಡಿ ಮತ್ತಾ ವಸ್ತುಗಳ ತೆಗೆದು || ೧೩ ||

---

೧ ಯರಸರ (ಇ,) ೨ ಕಂ (ಉ.)

ಪಾತ್ರೆ ಮೂರರೊಳಿರಿಸಿ ಸಿದ್ಧಿಸು |
ಮಿತ್ರ ಮುದ್ರೆಯೊಳಿಟ್ಟದ[೧]ರೊಳ |
ದ್ದತ್ತೆ ಮಂತ್ರೋಕ್ತದಿ ಬಿದಿರಿ ಮಾತಂಗಿಗರ್ಪಿಸುತೆ ||
ಪಾತ್ರ ಶಿರಭುಜಯುಗದಿ ತಳೆದು ಕ |
ಳತ್ರ ಪಾದಾರ್ಚನೆಯನೊಡರಿ ತ್ರಿ |
ಪಾತ್ರೆಯೊಳಗಂ ಬೆರಸಿಯರ್ಚಿಸಿ ಭಕ್ತಿಯಿಂದವನು || ೧೪ ||

ಮುಗುಳೆ ಮಾಹೇಶ್ವರ ಸಮೂಹ |
ಕ್ಕೊಗುಮಿಗೆಯ ಸಂತೋಷದೊಳು ಪಾ |
ತ್ರೆಗಳು ಮೂರ್ಮೂರರಂ ಸರಾಗಮೊಳಿತ್ತು ಕಡೆಯೊಳಗೆ ||
ತೆಗೆದು ಪಾತ್ರತ್ರಯವ ಕೊಂಡತಿ |
ನೆಗೆವ ರೋಮಾಂಚನದಿ ಹಿಗ್ಗುತೆ |
ನಗುತೆ ಜೋಲುತೆ ಜೊಂಪಿಸುತೆ ನಾಂಟ್ಯಗಳನಾಡುತ್ತೆ || ೧೫ ||

ಒಚ್ಚಿ ಹೊತ್ತತಿ ಪಾನಮಂ ಕೇ |
ಳೊಚ್ಚಿ ಹೊತ್ತತಿ ಧ್ಯಾನಮಂ ಮಗು |
ಳೊಚ್ಚಿ ಹೊತ್ತು ಸುಮುದ್ರೆ ಮುಖ್ಯಾನ್ನವನು ಚರ್ವಿಸುತೆ ||
ಉಚ್ಚಹದಿ ಮಾಹೇಶ್ವರರಿಗೊಲ |
ವಿಚ್ಚೆಯಾದುದನೂಡಿಸಲ್ಕವ |
ನಿಚ್ಚಯಂ ಮುಕ್ತಾಧಿಪತಿಯುಹರೆಂದರವರಂದು || ೧೬ ||

ಮೊದಲ ಪಾತ್ರವ ಕೊಳಲು ಬ್ರಹ್ಮನ |
ವಧುವಿಗರ್ಪಣವೆರಡನೆಯ ಪಾ |
ತ್ರದಿ ಮಹಾಲಕ್ಷ್ಮಿಗೆ ಸಮರ್ಪಣೆ ಮೂರನೆಯ ಪಾತ್ರಂ ||
ಕುಧರಸುತೆ ಪಾರ್ವತಿಗೆ ಸಂಪ್ರೀ |
ತಿದೆಯೆನುತೆ ಮಗುಳವನ ಕೊಂಡರೆ |
ವಿದಿತ ಸರ್ವಸುಪರ್ವರಿಗೆ ಪ್ರೀತ್ಯರ್ಥವಹುದು ನಿಜಂ || ೧೭ ||

ಭೂಸಾರರುಮುಖ ಶ್ವಪಚಕಡೆಯಾ |
ದೇಸು ವರ್ಣಗಳುಂಟವೆಲ್ಲೊಂ |
ದೇ ಸಪಾತ್ರದಿ ಕೊಂಬರೈಕ್ಯಮದಾಗಿ ತರತಮ್ಯ ||
ದಾಶೆಯಲ್ಲದೆಯುಚ್ಚನೀಚದ |
ವೇಷಮಂ ಕಳೆದುಳಿದು ವೀರಮ |
ಹೇಶರೆನಿಸುವರೆಂತುಟಾ ರೇಣುಕೆಯ ಸಾನ್ನಿಧ್ಯ || ೧೮ ||

---

೧ ಮುದ್ರೆಯ ಹಿಡಿದವ (ಇ. ಉ.)

ಕೊಂಡು ಕೊಂಡುರೆ ಕೊಂಡು ಪುನರಪಿ |
ಕೊಂಡು ಪಥದೊಳಗೆಡಹಿ ಬೀಳುತೆ |
ಕೊಂಡುದಂ ಕಾರ್ದೊಡನೆ ಕೊಂಡತಿ ಝುಮ್ಮೆನುಲ್ಲಾಸ ||
ಮಂಡೆಗೇರಿಯೆ ಮೈಮರೆದವರ |
ನಂಡಲೆಯುದಾ ಜನನವಾತಗೆ |
[1]ದಂಡಧರನೇ ಇಲ್ಲ ಶಿವನಾಗಿಪ್ಪನೆಂದೆಂದು[1] || ೧೯ ||

ಉರುತರದ ದ್ರವ್ಯಮೆ ಸುಧಾಸಾ |
ಗರ ಮಹಾನಿಧಿಯೇ ವಿವಿಧ ಮಂ |
ದರವಿವರ ಸ್ವೀಕಾರಮೇ ಮಥನಂ ವಿಚಾರಿಸಲು ||
ಸುರರು ಮಾಹೇಶ್ವರರು ಕೇಳೀ |
ಪರಿಯು ಕೃತ್ಯವ ಮಾಡಿದೊಡೆಯುಂ |
ಕುರಿಸುವುದು ಸುಜ್ಞಾನಮಯವದೆ ಪರಮಪದಮೋಕ್ಷ || ೨೦ ||

ಪರಮಸಿದ್ಧಿ ದ್ರವ್ಯಗಳ ಸ್ವೀ |
ಕರಿಸಿ ಮಂತ್ರೋಕ್ತದೊಳು ಮಾಹೇ |
ಶ್ವರರ ತೃಪ್ತಂ ಬಡಿಸಿ ಶ್ರೀ ಮಾತಂಗಿದೇವಿಯರ ||
ಚರಣಕಮಲಧ್ಯಾನದಿಂದಿಹ |
ಶರಣರಪವರ್ಗಾಶ್ರಯಂ ಗೋ |
ಚರಿಸುತಿಹುದಾತನೆ ಮುಮುಕ್ಷು ಮಹಾಮಹಿಮನೆನಲು || ೨೧ ||

ಶಿವ ಶಿವಾ ಕೇಳಿದೆವಲಾ ಪಾ |
ಪವನೆನುತೆ ಮಕುಟವನೊಲಿದು ಶ್ರೋ |
ತ್ರವ ಕರಗಳಿಂ ಮುಚ್ಚಿ ಶಂಕರದಾಸಿಮಯ್ಯಗಳು ||
ಅವರೊಳಿಂತೆಂದಂ ಸುರಾಪಾ |
ನವ ಪಿಶಿತಮಂ ಸ್ವೀಕರಿಪ ಮಾ |
ನವಗೆ ಗತಿಯುಂಟೇ ವಿಕಾರದ ಮಾತನಾಡದಿರಿ || ೨೨ ||

ಉರ್ವರೀತಳದೊಳಗಹಿಂಸಾ |
ಸರ್ವಭೂತಾ ನಿಯಮವೇ ಶ್ರುತಿ |
ಸಾರ್ವದಂ ತಿಳಿದಿರ್ದು ಪಶುಗಳ ಕೊಂದು ತಿಂಬುವರು ||
ಪಾರ್ವರೇ ಚಾಂಡಾಲರಲ್ಲದೆ |
ಗೀರ್ವಪಥಮವರ್ಗೊಳವೆ ಪಾತಕ |
ಪರ್ವತದ ಕಮ್ಮರಿಯೊಳಗೆ ಬೀಳುವರು ಕೇಳೆಂದ || ೨೩ ||

---

೧-೧ ದಂಡಧರನಾ ಭೀತಿಯಿಲ್ಲದೆ ನಿತ್ಯನಾಗಿಹನು (ಎ.)

ಮಲಕೆ ಹೇಸಿರಿ ಮೂತ್ರಪಾನವ |
ನೊಲಿದು ಮಾಳ್ಪಿರಿ ಕಾರ್ದ ಸುರೆಯಂ |
ಪಲಲಮಂ ಭುಂಜಿಪಿರಿ ಕಂಡವರೆಂಜಲುಣುತಿಹಿರಿ ||
ಹೊಲತಿಯರನರ್ಚಿಪಿರಿ ಪ್ರಾಣಿಯ |
ಕೊಲುವಿರನುಜೆ ಭಗಿನಿ ಜನನಿ ಸುತೆ |
ಗೆಳಸುವಿರಿ ನೀವಾವ ಯೋಗ್ಯರು ನಿಮ್ಮ ಮತ[1]ವೇನು || ೨೪ ||

ಎಂದ ಮಾತಂ ಕೇಳಿ ಮನದೊಳು |
ನೊಂದು ಶಾಕ್ತೆಯರೊಮ್ಮತದೊಳಿಂ |
ತೆಂದರುರೆ ಪಶು ನೀನು ನೀ ದೂಷಿಸಲು ನಮಗೇನು ||
ಕುಂದೆ ಸೂರ್ಯನ ಗೂಗೆ ಜರೆದೊಡೆ |
ಕುಂದೆ ಪಶುಗಳ ಕೊಲಬಹುದು ನಿಜ |
ವೆಂದುದಾಮ್ನಾಯೋಕ್ತ ಕೇಳೆಂದುಸುರಿದರು ಮುದದಿ || ೨೫ ||

ಭೂಮಿಯೊಳಗತಿ ಪೇಳ್ವುದಗ್ನಿ |
ಷ್ಟೋಮ ಪಶು ವರಭೇದಮೆಂದು |
ದ್ದಾಮವಾದ ಶ್ರುತಿಯೆನಲ್ಕೆ ಶಿವೈಕ್ಯನಿಂತೆಂದ ||
ಈ ಮಹಾ ಶ್ರುತಿ ನಿಮಗು ಜೋಗಿ ಕ |
ಳಾಮುಖಿಗೆ ಯಾಜ್ಞಿಕಗೃಹಸ್ಥಗೆ |
ಪ್ರೇಮ ಯತಿಜನ ವೀರವೈಷ್ಣವ ಶೈವರಿಗೆ ದೂಷ್ಯಂ || ೨೬ ||

ಸುರೆಗುಡಿವರಿಗೆ ಕಾಮ ವೆಗ್ಗಳ |
ಪಿರಿದು ಕೋಪಂ ಮದ ಮೊದಲು ಮಾ |
ತ್ಸರಿಯು ಪಲ್ಲವಿಸುವುದು ಲೋಭಂ ತೋರುವುದು ಮೋಹಂ ||
ಕರ ಮಿರುಂಗುವುದನೃತ ವಾಚಾಂ |
ಕುರಕೆ ಕಾರಣಮವಗೆ ಮೋಕ್ಷದ |
ಸರಣಿಯೊಳವೇ ಯೋಗ್ಯರವರೊಳು ಮಾತನಾಡುವರೇ || ೨೭ ||

ಹೊಲಸು ಹೊಡೆಯುತೆ ರೋಹಿತದೊಳೊಡ |
ಗಲಿಸಿಹುದು ಸುಟ್ಟರಕುವುದು ಪ್ರ |
ಜ್ವಲಿಪುದೊಂದೆರಳ್ದಿನವುಮಿರ್ದೊಡೆ ಕೆಟ್ಟು ನಾರುವುದು ||
ಪುಳಿವುದತಿ ಕೀವೇರುವುದು ಮಿಗೆ |
ಕೊಳೆವುದಾ ಪಲಪತ್ರ ನೀವದ |
ಕೊಳಬಹುದೆ ಪಾತಕಕೆ ಕಾರಣವಲ್ಲವೇ ಮಾಂಸಂ || ೨೮ ||

[1] ಪಥ (ಉ.)

ಬಾಡ ತಿಂಬವ ಜೀವಹಿಂಸೆಯ |
ಮಾಡುವಂ ಕೊಲೆಯಿಂದ ಪಾಪ |
ಕ್ಕೀಡಹಂ ಪಾತಕಗೆ ದುರ್ಗತಿಯಹುದು ದುರ್ಗತಿಯಿಂ ||
ಮೂಡಿ ಮುಳುಗುವ ಜನನಮರಣದಿ |
ಕಾಡುವಂ ಭವದಿಂದ ದುಃಖದ |
ಗೂಡೆನಿಸುತಿಹನವಗೆ ಸದ್ಗತಿಯಿಲ್ಲವೆಂದೆಂದು || ೨೯ ||

ಆರದಾಗಲಿ ವಾಗ್ಮಿ ವಕ್ಕೃತಾ |
ಕಾರಿತನು ಮೋಹನಗಳಿಂದವಿ |
ಚಾರವರ್ತಕದಿಂದೆ ಹಿಂಸೆಯನೆಸಗಿದವನಿಳಿವಂ ||
ಘೋರಪಾಪಾರ್ಣವದಿ ಘಟೀ[1]ಕೃತ |
ಕಾರಿತನು ಮೋದನದೆ ಹಿಂಸಾ |
ಚಾರಿಯಾದವಗೆಂತು ಪಾತಕವೋ ಮಹಾದೇವಾ || ೩೦ ||

ಹಿಂಸೆ ಪಾರದ್ವಾರವನ್ನೃತಾ |
ಕಾಂಶೆ ತಸ್ಕರವೆಂಬ ವೀರ ಭ |
ಯಾಂಶವಿಂತಿಹ ಪಂಚ ಮಹಪಾತಕಗಳಿವರೊಳಗೆ ||
ಹಿಂಸೆಯೇ ಬಹುಪಾಪವಿಹದೊಳು |
ಹಿಂಸೆಯೇ ನಿಷ್ಠೂರ ವರ್ತಕ |
ಹಿಂಸೆಗಾರರ ನೋಡಬಹುದೇ ಶಿವ ಮಹಾದೇವಾ || ೩೧ ||

ತನ್ನ ಹಾಗುಳಿದಾದ ಪ್ರಾಣಿಗ |
ಳೆನ್ನದವರನು ಕೊರಳರಿದು ವಿಗೆ
ತಿನ್ನಬಹುದೇ ಅವರಡಗ ಶಿವ ಶಿವ ಮಹಾದೇವಾ ||
ತನ್ನ ಮಕ್ಕಳುವೊದರೆ[2] ಮನದೊಳು |
ಖಿನ್ನನಪ್ಪೊಲು ಜೀವಹಿಂಸೆಗೆ |
ಖಿನ್ನನಾಗದ ಪಾಪಿ ಮೆಟ್ಟಿದ ಭೂಮಿ ಬೆಳೆದಪುದೆ || ೩೨ ||

ಹರ ಹರಾ ಕಂಗೆಟ್ಟು ಜಗ್ಗನೆ |
ಜರೆಯವೇ ಮನದೊಳಗೆ ಭಯ ಹೊಡೆ |
ದಿರವೆ ಹೆದರವೆ ಕಣ್ಣು ಬಾಯಂ ಬಿಡದೆ ಪ್ರಾಣಿಗಳು ||
ಕೊರಲ ಕೊಯಿದಾ ಕ್ಷಣದಿ ಮುಂದಕೆ |
ಬರದೆ ಬಿಡದಾ ವಿಧಿ ನಿಮಗೆ ಭೂ |
ಸುರರು ಕೊಲೆಗೆಳಸುವರೆ ಕೊಲೆಗೆಳಸುವನೆ ಚಾಂಡಾಲ || ೩೩ ||

---

೧ ಪುಟ (ಇ, ಉ.) ೨ ಮಕ್ಕಳ ವಧೆಗೆ (ಇ, ಉ.)

ಎಂದ ಮಾತಂ ಕೇಳಿ ಶಾಕ್ತೆಯ |
ರೆಂದರೊಲವಿಂ ತಾವು ಪ್ರಾಣಿಯ |
ಕೊಂದು ತಿನುತಿಹ ಪಾಪಿಗಳು ಕೊಲೆಗೆಳಸದರು ನೀವೇ ||
ಇಂದು ತ್ರೈಜಗದೊಳಗೆ ಪ್ರಾಣಿಯ |
ಕೊಂದು ತಿನ್ನದರಾರೆನಲು ಮನ |
ನೊಂದು ಶಂಕರದಾಸಿಮಯ್ಯಂ ನುಡಿದನವರೊಡನೆ || ೩೪ ||

ತೊನ್ನನೊರ್ವಂ ಲೋಕವೆಲ್ಲಕೆ |
ತನ್ನಮೆಯ್ಯಂತೆಂದು ಬಗೆಯಲು |
ತೊನ್ನರಹರೇ ಲೋಕವೆಲ್ಲವು ಏಕೆ ನುಡಿದಪಿರಿ ||
ತನ್ನ ತಾನರಿಯದ ಕಡುಹಿ ಕೊಲೆ |
ಯಂ ನೆನೆವನಲ್ಲದೆ ಮಹಾಪುರು |
ಷಂ ನೆನೆವನೇ ಜೀವಹಿಂಸೆಯುನೆನಲವರು ಕನಲಿ || ೩೫ ||

ಸೊಲ್ಲಿಸಿದರೀ ಧರೆಯೊಳಗೆ ರತಿ |
ಪಲ್ಲವಿಸಿ ಮಿಗೆ ಬೆಳೆದ ಧಾನ್ಯಗ |
ಳೆಲ್ಲ ಪ್ರಾಣಿಗಳಲ್ಲವೇ ಅದನೇಕೆ ಭಕ್ಷಿಪಿರಿ ||
ಸೊಲ್ಲಿಸೆನೆ ಭೂಜಗಳು ಪ್ರಾಣಿಗ |
ಳಲ್ಲವವು ಚೈತನ್ಯ ವೇದದ |
ಸೊಲ್ಲಿನೊಳು ಚೇತನಮಚೇತನ ಪ್ರಾಣಮೆಂದೆಂಬ || ೩೬ ||

ಮೂದೆರದೊಳೆಸೆದಿಹವು ಪಾಷಾ |
ಣಾದಿ ಲೋಹಮಚೇತನಂ ಭೂ |
ಜಾದಿಗಳು ಚೇತನ ಮನುಜ ಖಗಮೃಗಗಳೇ ಪ್ರಾಣಂ ||
ವೇದನೆಯೆ ಪ್ರಾಣಕ್ಕೆ ಚೇತನ |
ಮಾದುದವಕೆಂದೆಂದುಮಿಲ್ಲಂ |
ಛೇದಿಸಿದರೂ ಚೇತನಕೆ ಮೃತವಿಲ್ಲ ನೋವಿಲ್ಲಂ || ೩೭ ||

ಕೇಶ ನಖಮಂ ಖಂಡಿಸಲ್ಕವು |
ನಾಶಮಪ್ಪವೆ ಮುನ್ನಿನಂತೆ ವಿ |
ಶೇಷಮಾಗವೆ ಖಂಡಿಸಲು ನೊಂದಪವೆ ಅವರಂತೆ ||
ಈ ಸಕಲ ಚೈತನ್ಯ ಹಿಂಸಾ |
ಭ್ಯಾ[೧]ಸ ಕಲ್ಪನೆ ಸಕಲಧಾನ್ಯವಿ |
ಶೇಷ ಭಕ್ಷಣೆಗಿಲ್ಲ ಪ್ರಾಣಿಯ ಕೊಂದವರಿಗೊಳವು || ೩೮ ||

---

೧ ಭಾ (ಇ, ಉ.)

ಎಂದು ನುಡಿಯಲು ವಿಪ್ರತತಿಯಿಂ |
ತೆಂದುದೇನೆನೆ ನಿಮ್ಮ ರುದ್ರಂ |
ಕೊಂದು ಕೂಗುವ ಪ್ರಾಣಿಗಳ ಕಡೆಗಾಲದೊಳಗೆನಲು ||
ಎಂದೊಡಾಯುಷ್ಕರ್ಮವೆರಡರ |
ಬಂಧ ಬಿಡುಗಡೆಯಾದ ಪ್ರಾಣಿಯು |
ಕೊಂದರೂ ನೋವಿಲ್ಲದಕೆ ಅದನರಿದು ಶಿವ ಕೊಲುವ || ೩೯ ||

ಉರಗ ಚರ್ಮವ ಸುಲಿಯೆ ನೋವಂ |
ಕುರಿಪುದಲ್ಲದೆ ಬಂಧ ಬಿಟ್ಟಾ |
ಪರೆಗಳೆವ ಕಾಲದೊಳು ನೋವುದೆ ಸಕಲ ಪ್ರಾಣಿಗಳು ||
ಹರಣ ಘಟ ಬಿಡುವಾದ ಕಾಲದೊ |
ಳರಸುವಂ ಶಿವ ನಿಮ್ಮವೊಲು ಕೊರ |
ಲರಿವುದಿಲ್ಲವೆನಲ್ಕೆ ಭೂಸುರರೆಂದರಾತನೊಳು || ೪೦ ||

ಸ್ಮರನ ತ್ರಿಪುರವ ಕಾಲನಂ ಕೇ |
ಳುರುಪಿಯಂಧಕನಂ ಸದೆದು ವಾ |
ಗ್ವರನ ತಲೆಯಂ ಕಡಿದನವನುರೆ ಪ್ರಾಣಿಗಳದಲ್ತೆ ||
ಒರೆಯೆನಲು ನಸು ನಗುತ ಪೇಳಿದ |
ಹರಶರಣನವರೊಡನೆ ಸ್ಮರನೆನೆ |
ಪಿರಿದು ಕಾಮಂ ತ್ರಿಪುರವೇ ಜ್ಞಾತೃಮುಖತ್ರಿಪುಟಿಗಳು || ೪೧ ||

ಕಾಲವೆಂದೆನೆ ಭೂತಮುಖ ತ್ರೈ |
ಕಾಲಮಂಧಕವೆನೆ ತಮೋಗುಣ |
ಕೇಳಿರೈ ವಾಗ್ವರನೆನಲು ಕ್ಷೇತ್ರಜ್ಞ ಬ್ರಹ್ಮಾಖ್ಯ ||
ಭಾಳಲೋಚನ ಜ್ಞಾನನೇತ್ರವು |
ಕೀಲಿಸಿಹ ಶಿಖಿಯೇ ಪಿದಗ್ನಿ ತ್ರಿ |
ಕಾಲಕಾಮತ್ರಿಪುಟಗಳ ಜ್ಞಾನಾಗ್ನಿಯಿಂ ಜಯಿಸಿ || ೪೨ ||

ಅಂಧಕಾಸುರ ಕರ್ಮವ ಚಿದಾ |
ನಂದಪದದಿಂ ಮೆಟ್ಟಿ ಪರಮಾ |
ನಂದಪದದಿಂ ಬ್ರಹ್ಮವಾಸದೊಳಿರಿದಿರಿದು ಮುದದಿಂ ||
ನಿಂದು ಸಾತ್ವೀಕಾಖ್ಯ ಭಂಗಿಯೊ |
ಳೊಂದಿ ನಿರ್ಮಲಿನೋರ್ಧ್ವ ತಾಂಡವ |
ನೆಂದೆನಿಸಿದಂ ಶ್ರೀಕರಂ ಕರುಣಾಕರಂ ದೇವಂ || ೪೩ ||

ಮಲಯುತ ಕ್ಷೇತ್ರಜ್ಞ ಬ್ರಹ್ಮನ |
ತಲೆಯ ವೈರಾಗ್ಯೋತ್ಕರದಿ ಮುರಿ |
ದೊಲಿದು ಪರಮಾತ್ಮಕನೆನಿಸಿದಂ ಪಾರಮಾತ್ಮಕದ ||
ನೆಲೆಯನರಿಯದೆ ನುಡಿಯದಿರಿ ಶಿವ |
ಕೊಲನು ನಿಮ್ಮೊಲು ಪ್ರಾಣಿಗಳನೆನೆ |
ಉಲಿದರಾ ಶಾಕ್ತೆಯರು ಶಂಕರದಾಸಿಮಯ್ಯನೊಳು || ೪೪ ||

ಮುಕ್ತಿಯೇ ಮೈಮರೆದು ಮತ್ತರ |
ಶಾಕ್ತೆಯಮೆ ಸರ್ವತ್ವ ಮತದಿಂ |
ಶಕ್ತಿವಿರಹಿತವಾಗಿ ಮಾಡಿದ ಹಿಂಸೆಯೇ ಮೋಕ್ಷಂ ||
ಶಕ್ತಿಯೇ ನಿರುಪಾಧಿಲೋಕಂ |
ಶಕ್ತಿತಂತ್ರದೊಳಾಡುತಿರ್ಪವು |
ಶಕ್ತಿ ಬ್ರಹ್ಮಾವಿಷ್ಣುರುದ್ರಾದಿಗಳ ಪಡೆದವಳು || ೪೫ ||

ವೇದ ವೇದಾಂತಾಶ್ರಮದ ನಿ |
ರ್ಭೇದ ಸಂಖ್ಯಾತೀತ ಮಾಯಾ |
ವಾದವೇ ಮುಖ್ಯಂ ಮಹಾಮಾಯಾಮಯವೆ ಸಕಲಂ ||
ಆದಿಮಧ್ಯಾಂತಗಳನುಳಿದಿಹು |
ದಾದಿಗಾದಿಯದಾಗಿ ಲೋಕ |
ಕ್ಕಾದಿ ಮಾಯಾ ಮೂರ್ತಿ ಮಾಯಾಪಾಶವೇ ಶಕ್ತಿ || ೪೬ ||

ಸತ್ತೆನಿಸಿ ಯದ್ದೃಷ್ಟ ತನ್ನ |
ಷ್ಟೋತ್ತರಕ್ಕೊಳಗಾಗದಿರ್ಪುದ |
ಸತ್ತೆನಿಸಿಯೂ ನಾಸ್ತಿರಸ್ಥಿರಮೆಂಬ ನುಡಿ ಪಿರಿದು ||
ಉತ್ತರಕ್ಕೊದಗದೆ ಮಹಾಮನ |
ದತ್ತಣಿಂ ಕಾಣಿಸುತೆ ನಿಜದಾ |
ಸತ್ತೆನಿಸಿದುದು ವಿದ್ಯಮಾಯಾ ಪ್ರಕೃತಿನಾಮದೊಳು || ೪೭ ||

ಜಲದೊಳಗೆ ತೋರಿದ ವಿಕಾರಂ |
ಜಲದೊಳಡಗುವವೊಲುಮವಿದ್ಯಾ |
ಸ್ಥಲದೊಳಗೆ ತೋರಡಗುತಿರ್ಪುವು ಸರ್ವ ಮಹ ಲೋಕಂ ||
ಜಲದ ಸತ್ವದಿ ಚರಿಸುತಿಹ ಮಿಾ |
ನ್ಗಳ ಪರಿಯಲಾ ಪ್ರಕೃತಿ ತಂತ್ರದಿ |
ತೊಳಲುತಿರ್ಪುವು ಜೀವರಾಶಿಗಳೇನ ಬಣ್ಣಿಸುವೆ || ೪೮ ||

ಸಕಲ ಕಾರ್ಯಂಗಳಿಗೆ ಕೇಳೀ |
ಪ್ರಕೃತಿಯೇ ಕಾರಣವೆನಿಸಿದುದು |
ಪ್ರಕೃತಿಯೇ ತತ್ಕಾರ್ಯಮಾರ್ಗದೊಳಗೆ ಬೆಳಗುತಿಹುದು ||
ಪ್ರಕೃತಿಯಾಣವ ಮಾಯ ನಿಜಕಾ |
ರ್ಮಿಕ ಶಿರೋಭವವಾಗಿ ಮಾಯಾ |
ಧಿಕಮೆನಿಸಿದುದು ಪಂಚ ಪರಿಯಾಯದೊಳಗೆನ್ನೆಂಬೆ || ೪೯ ||

ಧರೆ ಜಲಾಗ್ನಿ ಸಮೀರ ವಿಯದಂ |
ತರ ಮಹಾಣವ ಪಂಚಕಂ ಕೇ |
ಳರರೆ ತನುಕರಣಂ ಭುವನಭೋಗಗಳೆ ಹದಿನಾಲ್ಕು ||
ಪರಿಯೆನಿಸಿದುದು ಮಾಯೆ ಕಾರ್ಮಿಕ |
ದಿರವತೀತಮನಾಗತಸ್ಮಿನ್ |
ಸ್ಫುರಣಮೀ[1] ಮೂರಾಗಿ ಮೆರೆದಿತ್ತಾ ತಿರೋಧಾಯೀ || ೫೦ ||

ಪಾಪಪುಣ್ಯೋಭಯ ಗುಣಂಗಳ |
ವ್ಯಾಪಕಂ ನಿಜವೆನಿಸಿದುದು ಕೇ |
ಳಾ ಪರಾಪರಮಾಯೆ ಭುವನವನದ್ವಿತೀಯದೊಳು ||
ಶ್ರೀಪದದೊಳಿಟ್ಟಿಹಳು ದೋಷಾ |
ರೂಪಮೆಳ್ಳನಿತಿಲ್ಲ ತಾಮಸ |
ರೂಪ ಬಾಹ್ಯದೊಳವಧರಿಸಿ ಮಾಕಾಳಿಯೆನಿಸಿದಳು || ೫೧ ||

ಎಂದು ನುಡಿಯಲು ದಾಸಿಮಯ್ಯಗ |
ಳೆಂದ ಮಾಯೋಪಾಸ್ತತೆಯೆ ನಿಜ |
ಮೆಂದಿರಲ್ಲಾ ಕೇಳಿ ಕಿಂಚಿದ್ಜ್ಞಾತ್ಮತತಿಯೆ ಪಶು ||
ವೃಂದ ಮಾಯಾಪಂಚಕಮೆ ಪಾ |
ಶಾಂಧಕಾರಂ ಪರಶಿವನೆ ಪತಿ |
ಯೆಂದು ನುಡಿದುದು ವೇದಮೆನೆ ಶಾಕ್ತೇಯರೊದರಿದರು || ೫೨ ||

ಅಖಿಳ ಪಶು ಪತಿಯೊರ್ವ ಶಿವ ಪಂ |
ಚಕ ಮಹಾ ಪಾಶಂಗಳೆಂದಿರಿ |
ಯಖಿಳ ಪಶುಗಳಿಗಖಿಳ ಪಾಶಂ ಬೇಕು ಕಟ್ಟುವರೆ ||
ಅಖಿಳ ಪಶುಗಳನೈದು ಪಾಶಾ |
ಧಿಕದಿ ಕಟ್ಟುವ ಪರಿಯದೆಂತೆನೆ |
ಸಕಲಗುಣಸಂಪನ್ನ ಶಂಕರದಾಸಿಯಿಂತೆಂದ || ೫೩ ||

---

೧ ದಿಂ (ಇ, ಉ.)

ಹಲವು ಪೂಗಳನೊಂದು ನೂಲಿಂ |
ಬಲಿದು ಕಟ್ಟುವ ಪೂವಡಿಗನೊಲು |
ಜಲಚರಂಗಳನೇಕವುಂ ಕೇಳೊಂದು ಬಲೆಯೊಳಗೆ ||
ಸಿಲುಕಿಸುವ ಬಲೆಗಾರನಂದದಿ |
ಹಲವು ಪಶುಗಳನೈದೆ ಪಾಶಂ |
ಗಳಲಿ ಕಟ್ಟುವನದ್ವಯಂ ಪತಿಯಾದ ಪರಶಿವನು || ೫೪ ||

ಆದರಿಸಿದರು ಪಾಶ ಪಶು ಪತಿ |
ಭೇದದೊಳಗೆಲೆ ಜಂಗಮಾ ಪೇ |
ಳಾದಿಯಾವುದನಾದಿಯಾವುದೆನಲ್ಕೆ ತ್ರಿಪದಾರ್ಥ ||
ಆದಿಯೆಂತೆನೆ ತಾರತಮ್ಯದ |
ಭೇದವುುಂಟೈ[೧] ತ್ರೈಪದಾರ್ಥವು |
ನಾದಿಯಾದರೆ ಗುರುಲಘುತ್ವವ ಕಲ್ಪಿಸದಿರೆನಲು || ೫೫ ||

ಎಂದ ಶಂಕರದಾಸಿಮಯ್ಯಗ |
ಳೊಂದು ಕಾಲದೊಳಾದ ದೃಷ್ಟಂ |
ಕಂಧರಂಗಳೊಳೊಂದಧಿಕವೊಂದಧಮವಾದಂತೆ ||
ಎಂದ ಮಾತಂ ಕೇಳಿ ಶಾಕ್ತೇಯ |
ರೆಂದರೀ ತ್ರಿಪದಾರ್ಥಗಳು ಸಂ |
ಬಂಧವಾಗಿಹವೋ ಅಯುತವಾಗಿಹವೊ ಪೇಳೆನಲು || ೫೬ ||

ಆದರಿಸಿರೈ ತ್ರೈಪದಾರ್ಥಂ |
ಭೇದವಾಗಿಹವಜ್ಞದಿಂ ಪಶು |
ವಾದ ಜೀವನ ಬಂಧವಾಗಿಹವೈದು ಪಾಶಗಳು ||
ಆದಿಮಧ್ಯಾಂತಕರಹಿತ ಪತಿ |
ಯಾದ ಶಿವನಾ ಪಶುಗಳುತ್ತರ |
ಪಾದದೊಳಗಿಹನತ್ಯತಿಷ್ಠದಶಾಂಗುಲಿತನಾಗಿ || ೫೭ ||

ಎನಲು ಕೇಳ್ದವ ನಗುತೆ ಬಹು ಜೀ |
ವನದೊಳುತ್ತರವಾಗಿ ಶಿವನೊ |
ರ್ವನಿಹುದೇ ಪುಸಿಯೊಬ್ಬನೆಲ್ಲರ ಮುಂಡೆಯೊಳಗಿಹನೇ ||
ಅನುವ ಪೇಳೆನೆ ಮಧ್ಯಗತನಾ |
ಗಿನ ಸಮಸ್ತರ ಶಿರದೊಳಿರನೇ |
ಎನಲು ನುಡಿದರು ಶಾಕ್ತೇಯರು ಶಿವಶರಣಮಣಿಯೊಡನೆ || ೫೮ ||

---

೧ ಮುಂಟೆನೆ (ಉ.)

ಪಶುವಿಗುಪಹತಿಯಾದ ಶಿವಗಂ |
ಬೆಸುಗೆಯಿಲ್ಲವೆ ಪೇಳೆನಲು ಕೇಳ್ |
ಬೆಸುಗೆಯೆಂದೂ ಇಲ್ಲಮೆನೆ ಜೀವಾತ್ಮನೆಂದೆಂದೂ ||
ಪಶುತನಂ ಬಿಡದದೆ ಎನಲು ಕೇಳ್ |
ಪಶುತನಂ ಪಿಂಗುವುದು ಪಾಶದ |
ಬೆಸುಗೆ ಬಿಟ್ಟರೆ ಶಿವನೊಳೈಕ್ಯಂ ಬಡೆವನವನೆನಲು || ೫೯ ||

ಆಗಲೆಂದರು ವಸ್ತುವಿನ ಸಂ |
ಯೋಗ ಮೊದಲಿಲ್ಲದೊಡೆ ಪ್ರಕೃತಿಯ |
ನೀಗಬಹುದೇ ಪುಸಿಯೆನಲು ಪಶುಗಳಿಗೆ ವಸ್ತುಕಲಾ ||
ಯೋಗಮುಂಟದನರಿದು ವಸ್ತುಪ್ರ |
ಯೋಗಮಂ ಪಡೆದಾ ಪ್ರಕೃತಿಯಂ |
ನೀಗಿ ಮೇಲಾ ವಸ್ತು ಸಂಯೋಗವ ಪಡೆವರೆನಲು || ೬೦ ||

ಪರಶಿವನ ಚಿಹ್ನಂ ಪಶುವಿನೊಳ |
ಗಿರದೊಡಪ್ಪುದೆ ಯೋಗ ಬೇರೆಂ |
ದೊರೆದುದೇ ಪುಸಿ ಜೀವನಾಟಕವಸ್ತುವೆಂತೆಂತೆ[೧] ||
ಒರೆಯೆನಲು ಸೂಚಿಗಳಿಗಾಯ |
ಸ್ಕರವ ದೂರದಿ ತೋರಿಸಲ್ಕಾ |
ಚರಿಸವೇ ಆ ತೆರಮೆನಲು ಶಾಕ್ತೇಯರಾಡಿದರು || ೬೧ ||

ಪತಿಯನುಜ್ಞೆಯೊಳಖಿಳ ಪಶುಗಳು |
ಗತಿಸಿದೊಡೆ ಕೇಳ್ ಪುಣ್ಯಪಾಪಂ |
ಪತಿಯ ವೇಧಿಸದೇಕೆ ಪಶುಗಳಿಗುಣಿಸುತಿರ್ದಪವು ||
ಋತವನಾಡಿದುದಿಲ್ಲೆನಲು ಗೋ |
ತತಿಗೆ ತಿನಿಸೆಂದಾದೆಡರು ಗೋ |
ಪತಿಗೆ ಬೇಹುದೆ ನಿಮ್ಮ ದೇವತೆ ದಾಸಿ ಶಿವನೊಡೆಯಂ || ೬೨ ||

ಎನಲು ನುಡಿದರು ನಮ್ಮ ಮಾಯಾಂ |
ಗನೆ ಶಿವನ ತೊತ್ತೆಂದ ನುಡಿ ಕೇಳ್ |
ನಿನಗೆ ಮಾನ್ಯಂ ರುದ್ರಭಕ್ತರು ರುದ್ರರೇ ಸಹಜಂ ||
ಎನುತಿಹಿರಿ ನೀ ರುದ್ರನಲ್ಲವೆ |
ನಿನಗೆ ದಾಸಿಯದಾಗಿ ಮಾಯಾಂ |
ಗನೆಯದೇತಕೆ ಮಾಡಳೂಳಿಗಮಂ ಸುಭಕ್ತಿಯೊಳು || ೬೩ ||

---

೧ ನಿಂದಂತೆ (ಇ, ಉ.)

ಪೇಳೆನಲು ನಿಮ್ಮಿಷ್ಟದೈವವ |
ಪೇಳಿದೊಡೆ ನಾವವರ ಕರೆತಂ |
ದೂಳಿಗವನಿತ್ತಪೆವೆನಲು ನಮ್ಮಿಷ್ಟದೈವ ಮಹಾ ||
ಕಾಳಿಯೆನಲಾಯುಕಳ ಕರೆತಂ |
ದೂಳಿಗವ ಮಾಡಿಸಿದೊಡೆಲ್ಲರು |
ಭಾಳಗಳ ಚಾಚುವಿರೆ ನಮ್ಮಂಘ್ರಿಗಳಿಗೆಂದೆನಲು || ೬೪ ||

ನಮ್ಮ ದೇವತೆ ದಾಸಿಯಾಗಿಯು |
ನಿಮ್ಮ ಸೇವೆಯ ಮಾಡಿದೊಡೆ ಗಡ |
ನಮ್ಮ ಪಾಡೇನತಿ ನಮಸ್ಕಾರಗಳ ಮಾಳ್ಪೆವು ||
ನಿಮ್ಮ ಪಾದಾಂಬುಜಕೆ ಜಂಗಮ |
ಸುಮ್ಮನಿರದಿರಿ ಕರೆಯಿಸಾಕೆಯ |
ಗಮ್ಮನೆನೆ ನಸು ನಗುತ ಶಂಕರದಾಸಿಮಯ್ಯಗಳು || ೬೫ ||

ಬೇಗ ಕರೆತಾರೈ ಮಗನೆ ನೀ |
ಪೋಗಿ ಮಾಕಾಳಿಯನೆನಲ್ಕನು |
ರಾಗದಿಂದಾ ವಕ್ರಪಾದಗಣೇಶನವಳೆಡೆಗೆ ||
ಪೋಗಲಾಯುಕ ಭೂತಗಣಸಹ |
ವಾಗಿ ಸಂಭ್ರಮದಿಂದಿರ್ಗೊಂ |
ಡಾ ಗರುವನಂಘ್ರಿಗೆ ನಮಿಸಿ ಏಂ ಕೆಲಸ ಬೆಸಸೆನಲು || ೬೬ ||

ನಗುತಲಾ ಗಣನಾಥ ಕೇಳೌ |
ಮಗಳೆ ಮದ್ಗುರುನಾಥ ನಿನಗೂ |
ಳಿಗವನಿತ್ತಪೆನೆಂದು ಕರತರಹೇಳಿದರೆನಲ್ಕೆ ||
ಮಿಗೆ ಹರುಷದಿಂದಡ್ಡಬೀಳುತೆ |
ಪೊಗಳುತಂ ನಲಿದಾಡುತಂ ಬಂ |
ದು ಗಣನಾಥನ ಶ್ರೀಗುರುವ ಕಂಡಳು ಮಹಾಕಾಳೀ || ೬೭ ||

ಮೌಳಿಯೊಳು ರಾಜಿಸುವ ಬಹು ರ |
ತ್ನಾಳಿಗಳ ಸಾಲ್ವಿಡಿದೆಸೆವ ಭ್ರಮ |
ರಾಳಕದ ಪೂದಂಡೆತೊಂಡಲ ಚಂದ್ರಸೂರಿಯರ ||
ಭಾಳನೇತ್ರದ ರಕ್ತಗಂಗಳ |
ಮೇಳವೆನಿಸುವ ಕೋರೆದಾಡೆಯ |
ಬಾಳಬಟ್ಟಲು ತಿಸುಳ ಡಮರಗಯುತ ಚತುರ್ಭುಜದ || ೬೮ ||

ಕರುಳದಂಡೆ ಕರೋಟಿಮಾಲೆಯ |
ಪರಿತದಂಗಿಯ ತೋರ ಮೊಲೆಯ ಸ |
ವುರದ ಕಗ್ಗತ್ತಲೆಗೆ ಸರಿಮಿಗಿಲೆನಿಪ[೧] ತನುರುಚಿಯ ||
ಅರುಣ ಭಾಸಾಂಬರ ಜಯಿಸುವಂ |
ಬರದ ಬಾವುಲಿ ಗೋಲಗೆಜ್ಜೆಯ |
ಸರವೆಸೆವ ಮಾಕಾಳಿ ಶಂಕರದಾಸಿಮಯ್ಯನಿಗೆ || ೬೯ ||

ವಂದಿಸಿದಳೊಡನೊಡನೆ ಸಂತಸ |
ದಿಂದ ಕೈಗಳ ಮುಗಿದು ಕೆಲದೊಳು |
ನಿಂದಳಾ ಕ್ಷಣ ದಾಸಿಮಯ್ಯಂ [೨]ಮುದದಿ ತೂಪಿರಿಯ ||
ಲೆಂದು[೨] ಕೆಲನಂ ನೋಡೆ ಭೋಂಕನೆ |
ಬಂದು ಖಡ್ಗವ ಬಿಸುಟು ಬಟ್ಟಲ |
ತಂದು ಪಿಡಿದಳು ಭೀಕರಾಂಗಿ ಕರಾಳಿ ಮಾಕಾಳಿ || ೭೦ ||

ಉಗುಳ್ದನಾ ಬಟ್ಟಲೊಳಗಾಯಕ |
ತೆಗೆದುಕೊಂಡುಳಿದ ಪ್ರಸಾದವ |
ಮಿಗೆ ಹರುಷದಿಂ ವ್ಯೆಗೆ ತೊಡೆಯಲು ಕಂಡು ಶಾಕ್ತೆಯರು ||
ಪೊಗಳುತಂ ಸ್ತುತಿಸಿದರು ಮಹಿಮಗೆ |
ಮಿಗೆ ಮಹಾ ಭಕ್ತಿಯೊಳು ದೇವ ನಿ |
ನಗೆ ಹರಿಹರಬ್ರಹ್ಮರಿದಿರೇ ಜಯ ಜಯಾ ಎನುತ || ೭೧ ||

ದುರುಳ ದುರ್ಜನರಾದ ಮಟ್ಟೆಯ |
ಮರುಳುಗಳು ತಾಮಿಳಿಸರು ಬಹು ದೇ |
ವರನೊಲಿದು ಪೂಜಿಸುವ ಗಾಂಪರು ನಾವು ನಿಮ್ಮೆಸಕ ||
ದಿರವನರಿಯದೆ ಸೆಣಸಿದೆವು ಶಿವ |
ಶರಣರತ್ನಾ ಸಲಹೆನುತೆ ಭೂ |
ಸುರರು ಶಂಕರದಾಸಿಮಯ್ಯಗೆ ಮುಗುಳೆ ನಮಿಸಿದರು || ೭೨ ||

ಚರಣಕಾನತರಾದ ಭೂಮೀ |
ಸುರರ ಶಿರವಿಡಿದೆತ್ತಿ ಪ್ರೇಮಾಂ |
ಕುರದೊಳೆಲ್ಲರ ಸಂತಯಿಸಿ ಮಾಕಾಳಿದೇವಿಯನು ||
ಹರುಷದಿಂ ಬೀಳ್ಕೊಟ್ಟು ಮಹಿಮಾ |
ಭ[೪]ರಣ ಶಂಕರದಾಸಿಮಯ್ಯನು |
ತೆರಳಿದಂ ಸಂಭ್ರಮದಿ ಮುಂದಕೆ ಭೂತಗಣಸಹಿತ || ೭೩ ||

---

೧ ಮಿಗಿಲೆಂದೆನಿಪ (ಉ.) ೨-೨ ವೀಳ್ಯೆಯುವನುಗುಳ್ವೆ I ನೆಂದು (ಇ, ಉ.) ೩ ಛಾಂದ (ಇ.)
೪ ವ (ಇ, ಉ.)

ನೆನೆದ ಕಾರ್ಯಂ ಸಿದ್ಧಿಸಲಿ ಯೌ |
ವನಮುದಾಗಲಿ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿ ಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನ ಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೭೪ ||

**ಅಂತು ಸಂಧಿ ೧೪ಕ್ಕಂ ಪದ ೧೦೫೭ ಕ್ಕಂ ಮಂಗಳಂ**



## ೧೫ನೆಯ ಸಂಧಿ

# ಜೋಗಿಗಳನ್ನು ಗೆದ್ದು ಶಂಕರದಾಸಿಮಯ್ಯನು ನವಿಲೆಗೆ ಮುಟ್ಟಿದ್ದು

**ಸೂಚನೆ**

ಜೋಗಿಗಳ ಗೆಲಿದವರ ದೇವನ |
ರಾಗದಿಂ ಸಂತೈಸಿ ನವಿಲೆಗೆ |
ಪೋಗಿ ಶಂಕರದಾಸಿ ಕಂಡನು ಜಡೆಯ ಶಂಕರನ ||

ಶಿವ ಜಯತು ಸಾಕ್ಷಾತ ಗಿರಿಜಾ |
ಧವ ಜಯತು ಪರಮಾತ್ಮ ಕರುಣಾ |
ರ್ಣವ ಜಯತು ಸ್ವರ್ಗಾಪವರ್ಗಾಧೀಶ ಜಯ ಜಯತು ||
ಕವಿಬೃಹಸ್ಪತಿಮುಖ ಮಹಾಗ್ರಹ |
ನಿವಹನಮಿತಾಂಘ್ರಿಯುಗ ಜಯ ವಾ |
ಸವಪಿತಾಮಹವಾಸುದೇವಾರಾಧ್ಯ ಜಯ ಜಯತು || ೧ ||

ಬಿರಿದ ಪೊಗಳಿಸಿಕೊಳುತೆ ಗೀರ್ವಾ |
ಣರ ವಿಡಾಯದಿ ವಾದ್ಯಘೋಷದಿ |
ಕರುಣಿ ಶಂಕರದಾಸಿಮಯ್ಯಂ ಬಹ ಪಥದೊಳೊಂದು ||
ಪುರದ ಬಾಗಿಲ ಭೈರವನ ಮಂ |
ದಿರದಿ ಬಿಟ್ಟಿರ್ದರು ಮಹಾ ಸಿ |
ದ್ಧರು ಮರವೆಯಾಗರದವೊಲು ಮಾಯಾಸಮುದ್ರದೊಲು || ೨ ||

ನಾಥ[೧] ಪಂಥವ್ಯಾಳ[೨] ಗೋರಕ |
ನಾಥ[೩] ಪಂಥು[೪] ಸುರಂಗಿ[೫] ಮಾಂಜವ |
ನಾಥ[೬] ಕೋರಾಂಟಕನು[೭] ನಾಥಾರಾಧ್ಯ[೮] ಮತ್ಸ್ಯೇಂದ್ರ[೯] ||
ನಾಥಪಂಥೆನಿಸುವ ಮಹಾ ನವ |
ನಾಥ ಸಿದ್ಧರ ಸಾಂಪ್ರದಾಯು |
ವ್ರಾತವಿರ್ದುದು ಭೈರವನ ಮಂದಿರದ ಮಧ್ಯದೊಳು || ೩ ||

ಬತ್ತಿದಲೆಗಳ ಮೆಯ್ಯಬೂದಿಯ |
ವೊತ್ತಿ ಬಿಗಿದುಡಿದಾರ ಕಚ್ಚುಟ |
ವಿತ್ತೆರದ ಕಾಮಾಕ್ಷಿ ಕಂಠದ ಸಿಂಗಿನಾಥಗಳ ||
ತೆತ್ತಿಸಿದ ಶಂಖಸರ ತಲೆಯೊಳು |
ಸುತ್ತಿದಂತುಗಳೆಸೆವ ಸಿದ್ಧರ |
ಮೊತ್ತಮಿರ್ದುದು ಭೈರವನ ಮಂದಿರದ ಮಧ್ಯದೊಳು || ೪ ||

ಉರದೊಳಮರಿದ ಜಠರಬಂಧದ |
ಕರದ ಲಾಕುಳ ಶೂಲ ಚರ್ಮಾ |
ವರಣದುಡಿಗಳ ಕಿಂಕಿಣಿಯ ಮಾಲೆಗಳ ಗಂಟೆಗಳ ||
ಸರಪಳಿಯ ಪೊಸ ಕಕ್ಷಪಾಳದ |
ಸುರೆಯ ತುಂಬಿದ ಲೋಹ[೧]ಪಾತ್ರೆಯ |
ಪರಿವಿಡಿಯೊಳೆಸೆದಿರ್ದರಾ ಜೋಗಿಗಳದೇನೆಂಬೆ || ೫ ||

ಪಲಲಮಂ ಭಕ್ಷಿಸುತೆ ಪರ್ಣವ |
ಮೆಲುತೆ ಭಂಗಿಯ ಮುಕ್ಕಿ ಕಳ್ಳಂ |
ಗಳಗಳನೆ ಕುಡಿದಾಗ ಡರ್‍ರನೆ ತೇಗಿ ಪುಳಿಗಲಸಿ ||
ತಲೆಗೆ ಹತ್ತೋಕರಿಸಿ ಜೋಲುತೆ |
ನಿಲುತೆ ಥರಥರಿಸುತ್ತೆ ಪಾಡುತೆ |
ನಲಿದು ಕುಣಿದಾಡುತ್ತಲಿರ್ದುದು ಜೋಗಿಗಳ ತಂಡಂ || ೬ ||

ಹೀಗೆಸೆವ ಸಿದ್ಧರ ನಿರೀಕ್ಷಿಸ |
ಲಾಗದೆಂದೊಲವಿಂ ಕೊಡೆಯ ಮರೆ |
ಯಾಗಿ ಪಿಡಿಸಿ ಮಹಾತ್ಮ ಶಂಕರದಾಸಿಮಯ್ಯಗಳು ||
ಪೋಗುತಿರೆ ಕಂಡಧಿಕ ಕೋಪದಿ |
ಜೋಗಿಗಳು ಗಜರಿದರು ಲೋಕಕೆ |
ಜೋಗಿಯೇ ಗುರು ತಮ್ಮ ನೋಡದುದಾವ ಪರಿಯೆಂದು || ೭ ||

ಭೂತಳದೊಳಿಹ ಸಕಲ ಮತಗಳು |
ನಾಥಪಂಥ್ಗೆ ಸರಿಯೆ ಲೋಕ |
ಖ್ಯಾತರಲ್ಲವೆ ಭೈರವಾರ್ಚಕರಂ ನಿರೀಕ್ಷಿಸಲು ||
ಭೀತಿಯಾದಪುದೆಂದು ಜಂಗಮ |
ನಾತಪತ್ರದ ಮರೆಯೊಳೈದುವ |
ರೀತಿಯಂ ನೋಡೆನಲು ಶಂಕರದಾಸಿಮಯ್ಯಗಳು || ೮ ||

---
೧ ಲಂಬ (ಇ, ಉ.)

ಕೇಳಿ ಕೋಪಾಟೋಪಮಂ ಮಿಗೆ |
ತಾಳಿಯಂತಃಕರಣದೊಳಗೆ ಕ |
ರಾಳ ವಿಕ್ರಮಮುಂಕುರಿಸಿ ಪುರ್ಬುಗಳು ಕುಣಿದಾಡಿ ||
ತೂಳು ಮೆಯ್ಯೊಳು ಮುಸುಕಿ ರಕ್ತಂ |
ಮೇಳಯಿಸಿ ಕಂಗಳೊಳು ಪರಮತ |
ಧೂಳಿಪಟನಾಗಂ ನುಡಿದನಾ ಜೋಗಿಗಳೊಳಂದು || ೯ ||

ಕಾಕ ನುಡಿಯದೆ ಸುಮ್ಮನಿರಿ ನೀ |
ವೇಕೆ ದಿವ್ಯಿದ ವಾಕ್ಯ ವಸ್ತುವಿ |
ವೇಕ ನಿಮಗೆಲ್ಲಿಯದು ನೀವು ಸುಮಾರ್ಗಬಾಹಿರರು ||
ಲೋಕದಾರಾಧ್ಯರುಗಳೆಂಬುದ |
ದೇಕೆ ನಿಮಗಿಲ್ಲದ ಮಹತ್ವಂ |
ಸಾಕು ಸಾಕಾ ನುಡಿಯ ಕೇಳಿವೆನಲ್ಕೆ ಗಜರಿದರು || ೧೦ ||

ಸಲ್ಲದೇ ಲೋಕಕ್ಕೆ ಗುರು ತಾ |
ವಲ್ಲವೇ ಚಪ್ಪನ್ನ ದೇಶದೊ |
ಳೆಲ್ಲಿಯುಂ ಚರಿಸುವೆವು ಜೋಗಿಗಳಿರದ ಠಾವೊಳವೇ ||
ಇಲ್ಲಿಯಿಲ್ಲದೆ ವೀರಶೈವವು |
ದೆಲ್ಲಿ ಪೂಜ್ಯಂಬೆತ್ತುದೆನೆ ಮಿಗೆ |
ಸೊಲ್ಲಿಸಿದನವರೊಡನೆ ಶಂಕದಾಸಿಮಯ್ಯಗಳು || ೧೧ ||

ಕೇಳಿರೈ ಬಹು ದೆಸೆಗೆ ತಿರ್ರನೆ |
ತೂಳುತಿರ್ಪುವು ಕಾಗಿ ರಾಜಮು |
ರಾಳನೊಂದೇ ಸ್ಥಳದೊಳಿರ್ದೊಡೆ ಕೊರತೆಯೇ ನೀವು ||
ಹಾಳು ಮನೆ ಹಾಳಿನಲು ಬಹು ದೇ |
ಶಾಳಿಗಳ ತಿರುಗಿದರೆ ಯೋಗ್ಯರೆ |
ಕೇಳು ಸಾಕ್ಷಾದ್ವೀರಶೈವಕೆ ಪ್ರತಿಮತಗಳುಂಟೇ || ೧೨ ||

ಎಂದ ಮಾತಂ ಕೇಳಿ ಜೋಗಿಗ |
ಳೆಂದರೊಲವಿಂ ಚರಿಸಿದಲ್ಲದೆ |
ಮುಂದೆ ಮೋಕ್ಷಂ ಕಾಣಿಸುವುದೇ ಚರತಿ ಮೋಕ್ಷಾರ್ಥಂ ||
ಎಂದು ನುಡಿದುದು ವೇದ ಸತ್ಯಮಿ |
ದೆಂದು ಮೌನದಿ ಕಂಭದ್ಥೆತ್ತಿನೊ |
ಳೊಂದು ಠಾವಿನೊಳಿರ್ದವರಿಗೊಳವೇ ಮಹಾದೇವಾ || ೧೩ ||

ಚಾರು ಮಾನಸ ತುಹಿನಶೈಲ ಕು |
ಮಾರಪರ್ವತ ಕದಳಿ ಶ್ರೀನಿಧಿ |
ಗೌರವಾನ್ವಿತ ಕುಂಭಕೋಣಕ್ಷೇತ್ರದೊಳಗೆಸೆವ ||
ದ್ವಾರ ಧರುಶನವಾಗಿ ಮುಗುಳಿ ಶ |
ರೀರಸಹವಾಗಿವರೊಳೊಂದು |
ದ್ವಾರದೊಳಗ್ಗಿದಿದೊಡೆ ಮೋಕ್ಷ ಕಪಾಲಮತದೊಳಗೆ || ೧೪ ||

ಸದನರಂಧ್ರದ ಸೂರ್ಯಕಿರಣದೊ |
ಳೊದವಿ ಕಾಣಿಸುತಿರ್ಪಣುವಿನೊಲು |
ಸದಮಳ ಕ್ಷೇತ್ರಾಶ್ರಯದೊಳೆಸೆದಿರ್ಪ ದ್ವಾರದೊಳು ||
ವಿದಮಲ ಪ್ರಭೆಯೊಳಗೆ ಕಾಣಿಸು |
ವುದು ಮಹಾಪರವಸ್ತು ಕಾಣು |
ತ್ತದರೊಡನೆ ಪೋಗಲ್ಕೆ ಮೋಕ್ಷಂ ಪೋಪ ಸಾಧಕನು || ೧೫ ||

ಮೃದು ಕಠಿಣ ಶೀತೋಷ್ಣಕಿನಿತುಂ |
ಹೆದರದಂಜದೆ ಭೂತಭೇತಾ |
ಳದ ಭಯಂಕರಕಳುಕದಂದದಿ ದೇಹ ಕೆಡದಂತೆ ||
ವಿದಿತವಹ ಮಣಿ ಮಂತ್ರ[೧] ದಿವ್ಯೌ |
ಷಧಿ ಪದಾರ್ಥತ್ರಯವ ದೇಹದಿ |
ಹುದುಗಿ ಚದುರಿಸಬೇಕೆನಲು ದಾಸ್ಮಯ್ಯನಿಂತೆಂದ || ೧೬ ||

ಚಲನದಿಂದಪವರ್ಗವಿಲ್ಲಿ |
ಲ್ಲುಲಿಯುದಿರಿ ಸದ್ವಸ್ತು ಮೂರ್ತಿಯು |
ಚಲನದಿಂ ಕಾಣಿಸುವುದೇ ಸ್ಥಾವರದಿ ತೋರ್ಪಂತೆ ||
ಜಲ ತುಳುಂಕಲು ಚಂದ್ರಬಿಂಬಂ |
ಕಲಕುವುದು ತುಳುಕಾಡದಿರ್ದೊಡೆ |
ನೆಲೆಯೆನಿಸಿ ತೋರುವುದು ಕೇಳ್ಳೆ ದೃಷ್ಟವೆಂತಂತೆ || ೧೭ ||

ಶಂಭುವೇ[೨] ಸಾಕ್ಷಾತ್ಪರಾಪರ |
ಮೆಂಬುದಾಮ್ನಾಯೋಕ್ತ ಬ್ರಹ್ಮ |
ಸ್ತಂಭಮಲ್ಲವೆ ಚಲನವಾದುದು ವಸ್ತುವಲ್ಲಲ್ಲಾ ||
ಸ್ತಂಭಮಾದ ಬ್ರಹ್ಮ ದೇಹ |
ಸ್ತಂಭದಿಂ ವಶಮಪ್ಪುದಿದು ನಿಜ |
ಮೆಂಬ ಶಾಸ್ತ್ರದ ಮಾತು ಪುಸಿಯೇ ವಿಸ್ತರಿಪೆ ಕೇಳು || ೧೮ ||

---

೧ ಯಂತ್ರ (ಇ.) ೨ ಸ್ತಂಭವೇ (ಇ, ಉ.)

ವಿದಿತಮಂತ್ರಗಳೆಂತ್ರ ದಿವ್ಯೌ |
ಷಧಿಗಳಿಂ ತಾಪತ್ರಯಂಗಳ |
ನೊದೆದು ಕ್ರಮದಿಂದನ್ನಪಾನಂಗಳ ಪರಿತ್ಯಜಿಸಿ ||
ಸದಮಲಾಂಗವ ಮಾಡಿಯಾರ |
ಣ್ಯದೊಳು ಗುಹೆಯೊಳು ಪರಮ ಸುಕ್ಷೇ |
ತ್ರದೊಳು ಕೋಡುಂಗಲ್ಲು ಜಲ ಪಂಚಾಗ್ನಿ ಮಧ್ಯದೊಳು || ೧೯ ||

ಕಾಲಸಂಖ್ಯೆಯನು[1]ಳಿದು ತಾಮಸ |
ಕೀಲಿಸದೆ ರಾಜಸವ ಬೆರಸದೆ |
ಬಾಲ ಬೋಳು ಪಿಶಾಚಯೋಗಂಗಳ ವಿಚಾರಿಸದೆ ||
ಕಾಲದೇಶಪ್ರಭೆಯನುಗ್ರಹ |
ದಾಲಯಾಶ್ರಿತಮಾಗದಪೊಲುಂ |
ಸ್ಥೂಲ ಸೂಕ್ಷ್ಮಂ ಕಾರಣಾಂಗವ ಬೆರೆದ ತತ್ವಗಳ || ೨೦ ||

ಗುಣವ ನಷ್ಟವ ಮಾಡಿ ಮೂರರ |
ಕಣಿಯ ಸುದ್ದವ ಮಾಡಿ ದೇಹ |
ಪ್ರಣವಸಂಗತಮಾದ ತಾರಕ ಕುಂಡಲಿಯ ಬಲಿದು ||
ಅಣುವಿಕಾರವ ಪರಿಹರಿಸಿ ಮಂ |
ತಣವನಾತ್ಮನೊಳಿರಿಸಿ ದೇಹಾ |
ಗ್ರಣಿಯೆನಿಸಿ ಯಮನಿಯಮಮುಖ್ಯಾಷ್ಟಾಂಗ ಯೋಗದೊಳು || ೨೧ ||

ವೇಧಿಸುತ್ತಿಹ ನಿರ್ವಿಕಲ್ಪ ಸ |
ಮಾಧಿಯೊಳಗಾ ಸಿದ್ಧಿ ಶಿಖಿ ಗರು |
ಡಾದಿ ದಿವ್ಯಾಸನದಿ ದೇಹವ ಕುಂಚನಾಕುಳದಿ ||
ಪಾದವಲೆಯದೆ ನಿಲಿಸಿ ಹಠಯೋ |
ಗಾಧಿಕಾರದ ಪರಿವಿಡಿಯನೊಲಿ |
ದಾದರಿಸಿ ರೇಚಕಮರುತನಂ ಪೂರಕವ ಮಾಡಿ || ೨೨ ||

ಹೃದಯದಾಧಾರದೊಳು ಪ್ರಾಣವ |
ಪುದಿದು ಕಂಠದನಾಹತದೊಳತಿ |
ಸದನವೆನಿಸಿದುದಾನ ವಾಯುವ ಬಲಿದು ಸ್ವಾದಿಷ್ಠ ||
ಗುದದಪಾನವ ನಿಲಿಸಿ ನಾಭಿಯೊ |
ಳೊದವಿ ಮಿರುಪ ವಿಶುದ್ಧಚಕ್ರಾ |
ಖ್ಯದ ಸಮಾನವ ಬಲಿದು ಸರ್ವಾಂಗದೊಳು ವೇಧಿಸಿದ || ೨೩ ||

---

೧ ನ (ಇ, ಉ.)

ಚಾರು ಮಣಿಪೂರಕದ ವ್ಯಾನಸ |
ಮಿಾರಸಂ ಬಲಿದಕ್ಷಿ ನಾಸಿಕ |
ಸಾರ ಸಾಧಕ ಕರ್ಣಯುತ ಪಶ್ಚಿಮ ಶಿಖಿ ಬ್ರಹ್ಮ ||
ಪೂರಣ ಸಿತಾಗ್ನೇಯು ಚಕ್ರೋ |
ದ್ಧಾರ ಕೂರ್ಮಾ ಕೃಕರ ನಾಗ ವಿ |
ಚಾರ ವಾಯುವ ದೇವದತ್ತ ಧನಂಜಯುವ ಬಲಿದು || ೨೪ ||

ನಿಂದು ನಾಭಿಯನುಳಿದು ಹೃದಯುಕೆ |
ಬಂದು ಜಾಗ್ರವ ಮರೆದು ಮೇಣ |
ಲ್ಲಿಂದಲೂರ್ಧ್ವಕ್ಕೆಯ್ದಿ ಭ್ರೂಮಧ್ಯಕ್ಕಡರಿ ಸ್ವಪ್ನ ||
ದಂದಮಂ ಪರಿಹರಿಸಿ ಮೇಣ |
ಲ್ಲಿಂದ ಬ್ರಹ್ಮವನಡರಿ ಸುಪ್ತಿಯು |
ಬಂಧವಳಿದದನುಚ್ಚಳಿಸಿ ಪರಕೈದಿ ತುರಿಯವನು || ೨೫ ||

ಮರೆದು ತುರಿಯಾತೀತಮಂ ವಿ |
ಸ್ತರಿಸಿ ಹಠಯೋಗವನುಳಿದು ಲಯ |
ದಿರವೆನಿಸಿ ಕಾಲತ್ರಯಂಗಳ ಜ್ಞಾತ್ರುಮಂ ಕೆಡಿಸಿ ||
ಪರಮ ಮಂತ್ರವ ಚೇತನಾಗ್ರದೊ |
ಳಿರಿಸಿ ನೀ ನಾನೆಂಬ ಭಾವವ |
ಮರೆದು ನಿರ್ಮಳ ರಾಜಯೋಗಾಕಾರಮಂ ಬಲಿಯೆ || ೨೬ ||

ಹೃದಯದೊಳಗೊಡೆದ್ಯೆದುವುದು ತಂ |
ಗದಿರಮಂಡಲದೊಳಗೆ ಮೋಹದಿ |
ಪುದಿದ ಚೇತನ ಮೋಕ್ಷಮಂ ಕಂಠವನೊಡೆದು[೧] ಪೋಗಿ ||
ವಿದಿತ ಭಾಸ್ಕರಮಂಡಲವನೊಡೆ |
ದೊದವಿಪುದು ವೀರಾಪವರ್ಗವ |
ಸದಮಳ ಬ್ರಹ್ಮವನೊಡೆದು ಪರಿತಂದು ಪರಮಾತ್ಮ || ೨೭ ||

ವ್ಯೋಮಮಂಡಲದೊಳಗೆ ವಿವಿಧೋ |
ದ್ದಾಮುವಹ ಪರಮಾಪವರ್ಗದ |
ರಾಮಣೀಯವ ಬೆರಸುವುದು ಸತ್ಯಂ ಚಲನದಿಂದೆ ||
ಶ್ರೀಮದಪವರ್ಗತ್ವಮೊಳವೇ |
ಕಾಮಮೊಳವೆನೆ ವರ ಕಪಾಲಿ |
ಸ್ತೋಮ ನುಡಿದುದು ಕರುಣಿ ಶಂಕರದಾಸಿಮಯ್ಯನೊಳು || ೨೮ ||

---

೧ ನಡದು (ಎ.)

ಯೋಗಮಾರ್ಗವ ಕಲಿತಿಹರು ಕೇಳ್ |
ಯೋಗಿಗಳು ಜೋಗಿಗಳ ಮಾರ್ಗದಿ |
ಯೋಗಿಗಳಿಗಳವಡುವುದೇ ಸಾಕ್ಷಾತ ಶಿವನಲ್ತೆ ||
ಜೋಗಿಕಾಪಾಲಿಕಮತಕ್ಕಿದಿ |
ರಾಗಿ ಜಯಿಸುವ ಮತಗಳುಂಟೇ |
ಪೋಗೆನಲು ಕೋಪದೊಳು ನುಡಿದಂ ಶರಣಕುಲತಿಲಕ || ೨೯ ||

ನೋಡಬಾರದ ನೀಚರಂ ಮಾ |
ತಾಡಿಸಲು ಪುರುಳುಂಟೆ ಕಾಳ್ಗೆಡೆ |
ದಾಡುತಿಹ ಸುರೆಗುಡಿಹಿಗಳಿಗೇನೇನ ಹೇಳಿದರೂ ||
ಈಡಿರಿವುದೇ ಮನದೊಳೆನೆ ಮಾ |
ತಾಡಿದರು ಜೋಗಿಗಳು ದೂಷ್ಯವ |
ಮಾಡಿದೆ ಎಲಾ ನೋಡು ನಮ್ಮ ಪರಾಕ್ರಮವನೆನುತೆ || ೩೦ ||

ಬಿಟ್ಟರೊಂದು ಮಹಾಭುಜಂಗನ |
ಸುಟ್ಟುರುವು ಶೈವನನೆನುತೆ ಜಗ |
ಜಟ್ಟಿ ಶಂಕರದಾಸಿ ನಗುತೆ ಕಮಂಡಲೋದಕವ ||
ಇಟ್ಟರಾ ಜಲ ಗರುಡನೊಲು ಬಂ |
ದಟ್ಟಿ ಪಿಡಿದೊಯ್ದುದು ಫಣಿಯು ಮೇ |
ಲಿಟ್ಟರೊಂದು ಮದೇಭಮಂ ಕಂಡಾ ಶರಣತಿಲಕ || ೩೧ ||

ಒಂದು ತೃಣಮಂ ಮಂತ್ರಿಸಲ್ಕದು |
ಬಂದು ಸೀಳ್ದುದು ಗಜವ ಕೇಸರಿ |
ಯಂದದೊಳಗದ ಕಂಡು ಕಾಪಾಲಿಕರು ಕೋಪದೊಳು ||
ಒಂದು ಭೂತವ ಬಿಡಲು ನಸು ನಗು |
ತೊಂದು ಭೂತಕೆ ಸೂಚಿಸಲ್ಕದು |
ತಿಂದುದಾ ಕಾಪಾಲಿಕರ ಭೂತವ ನಿಮಿಷದೊಳಗೆ || ೩೨ ||

ಹೊಟ್ಟೆ ತುಂಬದೆ ಮರುಗಿ ಬಾಯಂ |
ಬಿಟ್ಟು ಮುಂದಕೆ ನಡೆದು ಬರೆ ಕಂ |
ಗೆಟ್ಟು ಜೋಗಿಗಳೋಡಿದರು ಕಡವಸಗಳಂ ಬಿಟ್ಟು[1] ||
ಅಟ್ಟಿದುದು ಬೆಂಬರಿದು ಭೈರವ |
ನಿಟ್ಟಿಸಿದನೀ ಹದನ ಮನದೊಳು |
ಕೆಟ್ಟೆನೆನುತೈತಂದು ನಡುಗುತ ದಾಸಿಮಯ್ಯಗಳ || ೩೩ ||

---

೧ ಬಿಸುಟು (ಉ.)

ಬಳಿಗೆ ಕಿರಿಜಡೆ ಮುಗುಟ ಸಾಲ್ಬಿಡಿ |
ದಳಕ ಭಾಳಾಂಬಕಕಿರಣ ಪ |
ಜ್ಜಳಿಪ ದಾಡೆಯು ಮುರಿದ ಕೆಮ್ಮೀಸೆಗಳ ಕೆಂಗಣ್ಣ ||
ತಳಪವೆತ್ತಿಹ ಖಡ್ಗ ಹಸ್ತದ |
ಜಳದೊಳೆಸೆವ ಜಟಾ ಕುಸುಮ ಸರ |
ಗಳ ವಿಡಾಯದಿ ಭೈರವಂ ದಾಸ್ಮಯ್ಯಗೆರಗಿದನು || ೩೪ ||

ಮುಗುಳೆ ಮುಗುಳೆ ನಮಸ್ಕರಿಸಿ ಕೈ |
ಮುಗಿದು ಶಂಕರದಾಸಿಮಯ್ಯನ |
ಪೊಗಳಿದಂ ಕಲಿಗಂಡ ಭೈರವ ಭಕ್ತಿಭಾವದೊಳು ||
ಮಗನು ನಿನಗಾನಲ್ಲವೇ ಜೋ |
ಗಿಗಳು ಕಳ್ಗುಡಿದಂಗವರಿಯದೆ |
ಬಗುಳಿದೊಡೆ ನಿಮಗೇನು ಕೊರತೆ ಮಹಾತ್ಮ ಕೇಳೆಂದ || ೩೫ ||

ಕಳ್ಳಗುಡಿದರ ಮಂಡೆಯೊಳಗಿಹ |
ಹುಲ್ಲ ತೆಗೆದರೆ ಕನ●ುತಿಹರದ |
ಬಲ್ಲ ಬಳಿಕವರೇನನೆಂದರು ಸುಮ್ಮನಿಹುದೀಗ ||
ಬಲ್ಲತನ ಮತ ನಿಮಗೆ ಕೋಪಂ |
ಸಲ್ಲದವರೊಳು ದೇವ ಭೂತಂ |
ಕೊಲ್ಲುತಿದೆ ಜೋಗಿಗಳ ರಕ್ಷಿಸೆನುತ್ತಲೆರಗಿದನು || ೩೬ ||

ಅಡಿಗೆರಗಿ ಭಕ್ತಿಯೊಳು ದೈನ್ಯಂ |
ಬಡುವ ಭೈರವನುತ್ತಮಾಂಗವ |
ಪಿಡಿದು ಕೃಪೆಯಿಂದೆತ್ತಿ ಶಂಕರದಾಸಿ ಜೋಗಿಗಳ ||
ಪಡೆಯ ಕೊಲಬೇಡೆಂದು ಪೇಳ್ದರೆ |
ಬಿಡಿಸು ಪೋಗೆಂದೊಂದು ಭೂತಕೆ |
ನುಡಿಯೆ ಪೋದಾ ಭೂತವಾಗ್ರಹದೊಡನೆ ಪೇಳಲೊಡಂ || ೩೭ ||

ಕೇಳಿ ಕೊಲ್ಲದೆ ಕಾಯ್ದುದಾ ಕಾ |
ಪಾಲಿಕರ ನಿಕುರುಂಬಮಂ ಪಿಡಿ |
ಯಾಳ ತಂದೊಪ್ಪಿಸುವಲೊಪ್ಪಿಸಿದುದು ಮಹಾಭೂತಂ ||
ಭಾಳನೇತ್ರದ ದಾಸಿಮಯ್ಯಗೆ |
ಹೇಳಲಳವೇ ಅವರ ಪಾಂಗಿಯ |
ಮೇಳಮಂ ಶಿವ ಶಿವ ನಿರೀಕ್ಷಿಸಿದಂ ಶರಣತಿಲಕ || ೩೮ ||

ಒಡೆದ ಸುರೆಯೋಡುಗಳ ಸೀಳಿದ |
ಕಡವಸಂಗಳ ಕಿತ್ತು ಜೋಲುವ |
ಜಡೆಯ ಮೆಯ್ಯೊಳಗೆಸೆವ ಬಾಸುಳ ಮುಳ್ಳುಹೊಯಿಲುಗಳ ||
ಎಡಹಿ ಕಿತ್ತುಗುರುಗಳ ರಕ್ತವ |
ತೊಡೆಯುತಾ ಜೋಗಿವ್ರತತಿ ಹೊಡೆ |
ಗೆಡೆದರಾ ಶಿವಶರಣ ಶಂಕರದಾಸಿಯಂಘ್ರಿಯೊಳು || ೩೯ ||

ಆದಿನಾಥನೆ ನೀನು ನಿನ್ನೊಳು |
ವಾದಿಸಿದೆವಜ್ಞಾನದಿಂದಪ |
ವಾದಮಂ ತಮ್ಮೊಳಗರಸದತಿ ರಕ್ಷಿಸೆಂದೆನುತೆ ||
ಪಾದದೊಳು ಪೊರಳಲ್ಕೆ ನಿರ್ಕುಳಿ |
ಯಾದುದಂತಃಕರಣ ಸತ್ಪ್ರೀ |
ಮೋದಯುದಿ ಮನ್ನಿಸಿದನಾ ಜೋಗಿಗಳ ಶಿವಶರಣ || ೪೦ ||

ಅವರ ಕಳುಹಿದನುಚಿತದೊಳು ಭೈ |
ರವನ ಬೀಳ್ಕೊಟ್ಟಂ ಮಹಾಸುರ |
ನಿವಹಸಹಿತಂ ಮುಂದಕೈದಿದ ವಾದ್ಯಘೋಷಣದಿ ||
ಶಿವ ಶಿವ ಶಿವಾ ಶರಣನೇಳ್ಗೆಯ |
ಹವಣಿಸಲ್ಕಳವೇ ಮಹಾ ವೈ |
ಭವದಿ ನವಿಲೆಗೆ ಬಂದ ಶಂಕರದಾಸಿಮಯ್ಯಗಳು || ೪೧ ||

ಇದಿರುಗೊಂಡರು ವಿವಿಧ ಸಂತೋ |
ಷದೊಳು ನವಿಲೆಯ ಭಕ್ತರೊಡೆಯರು |
ವಿಧುವ ಕುಮುದಪ್ರತತಿ ದುಗ್ಧಾರ್ಣವ ಚಕೋರಿಗಳು ||
ಇದಿರುಗೊಂಬೊಲು ಭೋಂಕನೆಲ್ಲರು |
ಪದಕೆರಗಲೊಡನೆರಗಿ ಕ್ಷೇಮವ |
ಮುದದಿ ಕೇಳಿದನೆಲ್ಲರಂ ಶಿವಶರಣರಾಭರಣ || ೪೨ ||

ಬಂದನೊಲವಿಂ ಭಕ್ತರೊಡೆಯರ |
ಗೊಂದಣದ ಸಂಭ್ರಮದೊಡನೆ ಖಂ |
ಡೇಂದುಶೇಖರ ಶ್ರೀಮದನುಪಮ ಜಡೆಯ ಶಂಕರನ ||
ಮಂದಿರಕ್ಕೊಲಿದೀಶನಂಘ್ರಿಗೆ |
ವಂದಿಸಿದ ಶಿವನ ಸ್ವರೂಪವ |
ನಿಂದು ನೋಡಿದನೆವೆಯಿಡದೆ ಭಕ್ತಿಯೊಳು ಮೈ ಮರೆದು || ೪೩ ||

ಪೊಗಳಿದಂ ಶ್ರುತಿಶಾಸ್ತ್ರಸಂತತಿ |
ಪೊಗಳಲಳವಲ್ಲದ ಮಹಾತ್ಮನ |
ತ್ರಿಗುಣ ಸಂಬಂಧಿಸದ ದೇವನ ಶ್ರೀಯುಮಾಧವನ ||
ಅಗಣಿತನನನುಪಮನನಮಲನ |
ನಘಜಿತನ ನಿರುಪಾಧಿಕನ ಸ |
ರ್ವಗತನಂ ಸಾಕ್ಷಾತ್ ಶಿವನ ಶ್ರೀಜಡೆಯಶಂಕರನ || ೪೪ ||

ರಾಜರಾಜಸುಮಿತ್ರ ಭಾಸ್ಕರ |
ರಾಜಪಾವಕನೇತ್ರ ಸುಮನಸ |
ರಾಜಸಂಸ್ತುತಪಾದ ಮುನಿನುತಪಾದ ಶತಪತ್ರ ||
ರಾಜಿತಾಕ್ಷಯಗಾತ್ರ ಪನ್ನಗ |
ರಾಜಯಜ್ಞಸುಸೂತ್ರ ಮರುಳ್ಗಳ |
ರಾಜ ಪರಮಪವಿತ್ರ ಜಯ ಜಯ ಶರಣವನಚೈತ್ರ || ೪೫ ||

ಎಂದು ಪೊಗಳ್ದು ಶಿವಂಗೆ ಪುನರಪಿ |
ವಂದಿಸಿಯೆ ಬೀಳ್ಕೊಂಡು ತನ್ನಯ |
ಮಂದಿರಕೆ ಬಿಜಯಂಗೆಯ್ದು ಬೆಸಗೆಯ್ದು ಗೀರ್ವಾಣ ||
ವೃಂದಮಂ ಮನ್ನಿಸಿ ಕಳುಪಿ ದಯೆ |
ಯಿಂದ ಶಿಖಿಪುರದೊಳಗೆ ಪರಮಾ |
ನಂದದೊಳಗೊಪ್ಪಿರ್ದ ಶಂಕರದಾಸಿಮಯ್ಯಗಳು || ೪೬ ||

ನೆನೆದ ಕಾರ್ಯಂ ಸಿದ್ಧಿಸಲಿ ಯೌ |
ವನಮದಾಗಲಿ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿ ಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನ ಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೪೭ ||

**ಅಂತು ಸಂಧಿ ೧೫ಕ್ಕಂ ಪದ ೧೧೦೪ಕ್ಕಂ ಮಂಗಳಂ**



೧೬ನೆಯ ಸಂಧಿ

# ಶಂಕರದಾಸಿಮಯ್ಯನು ಮಡದಿ ಶಿಷ್ಯರು ಸಹಿತ ಶ್ರೀಜಡೆಯ ಶಂಕರನಲ್ಲಿ ಐಕ್ಯವಾದದ್ದು

**ಸೂಚನೆ**

ಜಡೆಯಶಂಕರದೇವರಂಗದೊ |
ಳೊಡರಿಚಿದನೊಲವಿಂದೆ ತನ್ನಯ |
ಮಡದಿ ಶಿಷ್ಯಂ ಸಹಿತ ಶಂಕರದಾಸಿಮಯ್ಯಗಳು ||

ಸೋಮಸೂರ್ಯಾಂಕಿತ ವಿಯದ್ಗಂ |
ಗಾಮಗುಟ ಭುಜಗಾಭರಣ ನಿ |
ಸ್ಸೀಮ ಸದ್ಯೋಜಾತಮುಖ ಬ್ರಹ್ಮಾಂಡ ಪಂಚಮುಖ ||
ವಾಮದೇವಸಮಸ್ತದೇವಲ |
ಲಾಮ ಜಗದೀಶ್ವರ ದಿಗಂಬರ |
ಪ್ರೇಮದಿಂ ಶ್ರೀಜಡೆಯಶಂಕರ ಸಲಹು ಸಜ್ಜನರ || ೧ ||

ಈಶಭಕ್ತಲಲಾಮ ಭಕ್ತಿನಿ |
ವಾಸವೆರಡನೆಯ ಶಿವ ಶಂಕರ |
ದಾಸಿಮಯ್ಯಂ ಶಿಖಿಪುರದಿ ಸುಖದೊಳಗಿರುತಲೊಂದು ||
ವಾಸರದಿ ಶ್ರೀವಕ್ತ್ರಪಾದಗ |
ಣೇಶನಂ ಧಾನ್ಯಕ್ಕೆ ಕಳುಪ |
ಲ್ಕಾ ಶರಣನೆಲ್ಲೆಡೆಯ ಧಾನ್ಯವ ಬೇಡುತ್ತೈತಂದು || ೨ ||

ಒಂದು ಮನೆಯೊಳು ಬೇಡೆ ಹೆಚ್ಚಿದು |
ದಿಂದು ಶಂಕರಗಂಡ ದೇವರೆ |
ಎಂದ ನುಡಿಯಂ ಕೇಳಿ ಶಂಕರಗಂಡನೆನಲೇನು ||
ಎಂದೆನಲು ಜೋಳಂಗಳೆನೆ ಮನ |
ನೊಂದು ನಿಜ ಸದನಕ್ಕೆ ಭೋಂಕನೆ |
ಬಂದು ಶಂಕರದಾಸಿಮಯ್ಯನೊಳೀ ಸ್ಥಿತಿಯ ಪೇಳ್ದ || ೩ ||

ಕೇಳಿ ಶಂಕರದಾಸಿ ದುಗುಡವ |
ತಾಳಿ ಶಂಕರಗಂಡನಾಮಂ |
ಜೋಳಕೊಳವೆಂದರಿದುದಿಲ್ಲಾ ಮಿಷ್ಟು ಪರಿಯಂತ ||
ಭಾಳನೇತ್ರನ ನಾಮಧಾರಕ |
ಭಾಳಲೋಚನನೆಂದು ಶಾಸ್ತ್ರಂ |
ಪೇಳುವುದನಾವರಿದು ಜೋಳದ ಬೋನಮಂ ಸಲಿಸ || ೪ ||

ಬಾರದಿನ್ನೆನುತಮಲತತ್ವವಿ |
ಚಾರಿ ಶಂಕರದಾಸಿ ದಿವ್ಯಾ |
ಹಾರಮಂ ಬಿಟ್ಟಾದಿನಂ ಮೊದಲಾಗಿ ಗುಂಜಿಗಳ ||
ಸಾರಮಂ ಲೋಳಿಸರಮಂ ಕೊಳು |
ತಾರಯಿಕೆಯಿಂದೊಪ್ಪುತಿರ್ದಂ |
ಮಾರಮರ್ದನ ಜಡೆಯಶಂಕರದೇವನಂಘ್ರಿಗಳ || ೫ ||

ಧ್ಯಾನದಿಂ ಗುರುಲಿಂಗಜಂಗಮು |
ದಾನುಭವಭಾವದೊಳೆ ಸ್ವಾತ್ಮಿಸಿ |
ಪೀನವರ್ತನ ವೀರಶೈವದ ಮೊದಲುಮನೆಯೆನಿಸಿ ||
ಸ್ವಾನುಭಾವಾಖ್ಯಪ್ರಬಲಸು |
ಜ್ಞಾನಪೂರಣನೆನಿಸುತಿರ್ದನ |
ದೇನ ಬಣ್ಣಿಪೆ ಕರುಣಿ ಶಂಕರದಾಸಿಮಯ್ಯಗಳ || ೬ ||

ಇಂತಿರುತಮೊಂದು ದಿನ ಶಿವಭವ |
ನಾಂತರಕ್ಕೆಯ್ತಂದು ಪುಷ್ಪಶ |
ರಾಂತಕಂಗೆಂದಿನೊಲು ಪೂಜೆಯ ಮಾಡಿ ಶಂಕರನ ||
ಮುಂತೆ ನಿಂದು ವಿಲಾಸದಿಂದ |
ತ್ಯಂತ ಪೊಗಳುತ್ತಿರಲು ಶ್ರೀಮುದ |
ನಂತಭೂಷಣ ಜಡೆಯ ಶಂಕರದೇವನಿಂತೆಂದ || ೭ ||

ಮಗನೆ ಕೇಳೈ ನಿನ್ನ ಸದ್ಭ |
ಕ್ತಿಗೆ ಮಹತ್ವಕೆ ಚಾರುಗತಿಗೋ |
ರಗೆಯ ಕಾಣೆನು ಲೋಕದೊಳು ನಿನ್ನರಸಿಗೆಣೆಯೆನಿಸಿ ||
ಮಿಗಿಲೆನಿಸಿದ ಪವಿತ್ರತೆಯೊಳೀ |
ಜಗದೊಳಿಲ್ಲಿರ್ವರುಗಳೆಣೆವ |
ಕ್ಕಿಗಳು ಕೂಡಿದೊಲಾದಿರಿನ್ನೊಂದೇ ಕೊರತೆ ನಿಮಗೆ || ೮ ||

ಪುತ್ರರಿಲ್ಲದುದೆನಲು ಪರಮಪ |
ವಿತ್ರ ಶಂಕರದಾಸಿ ಪಾವಕ |
ನೇತ್ರನೊಳು ಬಿನ್ನೈಸಿದಂ ನನಗೇತಕೆಲೆ ದೇವಾ ||
ಪುತ್ರರೀಶ್ವರಭಕ್ತರಿಗೆ ನಾ |
ಪುತ್ರನಾಗಿಯೆ ನಿಮ್ಮ ಪದಶತ |
ಪತ್ರಮಂ ಧ್ಯಾನಿಸುವುದೇ ಸಂತಾನಫಲವೆನಗೆ || ೯ ||

ಹಿಂದೆ ಮಾಡಿದ ಕರ್ಮದಿಂ ಘಟ |
ಬಂಧಿಸಿದುದಾತ್ಮನನಿದರ ಬಿಡು |
ವೆಂದಿಗಹುದೋ ಎನುತ ಶಂಕರ ನಿಮ್ಮ ಶ್ರೀಪದವ ||
ಸಂದು ನಿಜದಿಂ ಧ್ಯಾನಿಸುವುದೇ |
ನಂದನಂ ವ್ಯಾಮೋಹದಿಂ ಘನ |
ವೆಂದು ಶಂಕರದಾಸಿ ಪೇಳಿದ ಜಡೆಯ ಶಂಕರಗೆ || ೧೦ ||

ಬಲಿದ ದೇಹಮೆ ಸೆರೆಯ ಮನೆ ಸಂ |
ಕಲೆಗಳಾಯುಷ್ಯಕರ್ಮ ಕೇಳೈ |
ವಲವರಿಂದ್ರಿಯವೆಂಬಿವಂ ಪರಿಹರಿಸಿ ನಿಮ್ಮ ಪದ ||
ಜಲಜದೊಳು ಸ್ವಾತಂತ್ರನಾಗಿ |
ರ್ಪೊಲುಮೆಯೇ ಸಂತಾನ ತನಗೆಂ |
ದೊಲಿದು ಸದ್ಭಕ್ತಿಯೊಳು ಬಿನ್ನೈಸಿದ ಮಹೇಶನೊಳು || ೧೧ ||

ಶ್ರವವ ಹೊತ್ತವ ಮಸಣದೊಳು ಹಾ |
ಯ್ಕುವೊಲು ಹರುಗೋಲೇರಿದವ ಪೊಳೆ |
ಯ ವಿಧಿಯಂ ಪರಿಹರಿಸಿ ತಡಿಯೊಳಗಿಳಿವವೊಲು ಘಟವ ||
ಅವಧರಿಸಿ ಭೂತಾರ್ಜಿತದಿ ಕ |
ರ್ಮವ ಕಳೆದು ಕಡೆಗಾಲದೊಳು ಬಿಸು |
ಡುವುದೆ ಸಂತಾನಫಲವು[1] ಕೇಳೆಂದನಾ ಶರಣ || ೧೨ ||

ಜಳ ರುಜೆಯು ಶಿಖಿ ಶಸ್ತ್ರಕೃತಿ ಮಂ |
ಗಳ ಮಹಾಗ್ರಹ ಸರ್ಪ ಮೃಗದಿಂ |
ದಳಿವುದೀ ಘಟವಿಂತಳಿದೊಡಾತ್ಮಂಗೆ ಗತಿಯಿಲ್ಲ ||
ತಳೆವುದೊಡನೆಯು ದೇಹಮಂ ಮೇ |
ಣಳಿವುದಿಂತಿದು ಕಾರಣಂ ನಿ |
ನ್ನೊಳಗೆ ಬೆರಸುವ ಚಿಂತೆಯೇ ಸಂತಾನ ತನಗೆಂದ || ೧೩ ||

---

೧ ಸಂತಾನಂ ತಮಗೆ (ಇ, ಉ.)

ಅಂತ್ಯಕಾಲದಿ ನಿನ್ನ ಮೇಲಣ |
ಭ್ರಾಂತೊದಗಬೇಕೆನುತಲೀಗಲ |
ನಂತ ಯೋಗಧ್ಯಾನ ಜಪಸಾಧನೆಯ ಮಾಡುತ್ತೆ ||
ಅಂತ್ಯದೊಳಗೊದಗುವುವೊ ಒದಗವೊ |
ಇಂತಿವೆಲ್ಲಾ ಎನುತೆ ನಿಚ್ಚಂ |
ಚಿಂತಿಸುವುದೇ, ಪುತ್ರಮೋಹಂ ದೇವ ಕೇಳೆಂದ || ೧೪ ||

ಏನ ಪೇಳುವೆ ಪಂಚಮಾ ವಾ |
ದ್ಯಾನುಬಂಧದಿ ನಟಿಸುತಂ ಸಂ |
ಧ್ಯಾನ ಪೊತ್ತಿಹ ಕುಂಭದೊಳಗಿಹ ಪೇರಣಿಗನಂತೆ ||
ಪೀನ ವಿಷಯಂಗಳ ತೊಳೆವುತ |
ಧ್ಯಾನ ನಿಮ್ಮಂಘ್ರಿಗಳೊಳಪ್ಪ |
ಜ್ಞಾನ ಸಾಧಕನೇ ತನಗೆ ಸುತಮೋಹವೆಲೆ ದೇವಾ || ೧೫ ||

ಎಂದ ಮಾತಂ ಕೇಳಿ ಪರಶಿವ |
ನೆಂದ ಕೇಳ್ಳೆ ಮಗನೆ ನೀನೆಂ |
ತೆಂದರೂ ಮನ್ಮನವೊಡಂಬಡದಾ ಗ್ರಹಸ್ಥಂಗೆ ||
ಕಂದನಿಲ್ಲದೊಡಧಿಕ ಪಾತಕ |
ವೆಂದುದಾಮ್ನಾಯಂ ಮಗನೆ ಕೇಳ್ |
ವಂಧ್ಯನಪವರ್ಗತ್ವವಿಲ್ಲೆನುತೊದರಿದುದು ವೇದಂ || ೧೬ ||

ಪುತ್ರರೇ ದುಃಖಾರ್ಣವಕೆ ಬಾ |
ಹಿತ್ರ ಸತ್ಕುಲನಂದನಕ್ಕಂ |
ಚೈತ್ರಮಾಸಂ ಪರಮ ಮೋಕ್ಷಾರ್ಥಗಳ ತೋರಿಸುವ ||
ಮಿತ್ರ ಸಾಂಸಾರಿಕತಿಮಿರಜಗ |
ಮಿತ್ರ ನಿಶ್ಚಯವೆಲೆ ಮಗನೆ ಕೇಳ್ |
ಪುತ್ರರಿಲ್ಲದ ಬಾಳದೇತರ ಬಾಳು ಗೃಹಪತಿಗೆ || ೧೭ ||

ರಾತ್ರಿಗತಿ ದೀಪಕ ಶಶಾಂಕಂ |
ಮಿತ್ರ ದಿವಕತಿ ದೀಪಕಂ ಕೇ |
ಳೀ ತ್ರಿಲೋಕಕೆ ದೀಪವೆನಿಪಂ ದಾನಶೂರನಹ ||
ದಾತೃ ಕುಲದೀಪಕನೆನಿಸುವ ಸು |
ಪುತ್ರನದು ಕಾರಣ ಗೃಹಸ್ಥಗೆ |
ಪುತ್ರರೇ ಮೋಕ್ಷಕ್ಕೆ ಸಾಧನವೆಂದ ಫಣಿಕಟಕ || ೧೮ ||

ಕೃತಿ ತಟಾಕಾರಾಮ ವಿಪ್ರಾ |
ವತಿ ಸುರಾಲಯ ಸುಜನ ಸ್ಥಾಪನೆ |
ಸುತರೆನಿಸುತಿಹ ಸಪ್ತ ಸಂತಾನಂಗಳೊಳಗಧಮಂ ||
ವಿತತದ್ರುವ್ಯಸ್ಥಾಪ್ಯ ಮಧ್ಯಮ |
ಕೃತಿ ವನಂ ಕೆರೆಯುತ್ತಮಂ ಕೇಳ್ |
ಸುತ ಸುರಾಲಯ ಬ್ರಾಹ್ಮಣಾವತಿಯೆಂದನಗಜೇಶ || ೧೯ ||

ಮಕ್ಕಳಿಲ್ಲದ ಬಂಜೆ ಭಿಕ್ಷುವ |
ನಿಕ್ಕಲುಂಡಾತಂಗೆ ಕೇಳ್ವೈ |
ಲೆಕ್ಕವಿಲ್ಲದ ಪಾಪ ಬಂಜೆಯ ಕೂಡಿದರಸಂಗೆ ||
ಲೆಕ್ಕವಿಲ್ಲದ ಘೋರ ಬಂಜೆಯ |
ರಕ್ಕತಂಗಿಯುರನ್ನು ಪಡೆದವ |
ರು ಕ್ರಮಿಸುತಿಹರರ್ಕಶಶಿಯುಳ್ಳನ್ನಬರ ಭವದಿ || ೨೦ ||

ಬಲ್ಲ ವಿಪ್ರೋತ್ತಮರು ದಾನವ |
ನೊಲ್ಲದಿರ್ಪರು ಕೇಳು ನಂದನ |
ರಿಲ್ಲದವರೊಯ್ಯಲ್ಕೆ ಪಾತಕವೆಂದು ನಿಜಸುತರು ||
ಇಲ್ಲದವರಿಹ ಗೃಹಕೆ ಪೊದಿಸಿದ |
ಹುಲ್ಲ ತಿಂದಾವುಗಳಿಗೊಳ್ಗತಿ |
ಯಿಲ್ಲವಂದಿರು ಗಳಿಸಿದ ಧನಂ ಕಾಕಭಾಜನವು || ೨೧ ||

ಚಾರು ಬ್ರಾಹ್ಮಣ ಪೇಳ್ದ ಶುಭ ಕ |
ರ್ಮಾರತಿಗೆ ಪುತ್ರನೆ ವಿಶೇಷಂ |
ಮಾರಣಂ ಪೇಳ್ವಶುಭ ಕರ್ಮಂಗಳಿಗೆ ನಿಜಸುತನೇ ||
ಕಾರಣಂ ಕೇಳನುಜರಗ್ರಜ |
ರಾರೊಲಿದು ಕರ್ಮವನೊಡರಿದೊಡೆ[೧] |
ದೂರಸದ್ಗತಿಯಿಲ್ಲದಾಗವೆ ಮುಕ್ತಿ ದೊರಕೊಳದು || ೨೨ ||

ಎಂದುದಾಮ್ನಾಯಂ ಮಗನೆ ಕೇ |
ಳೊಂದು ನಿನಗವಸಾನ ಕಾಲಂ |
ಮುಂದಣೊಂಬತ್ತನೆಯ ವರುಷಕ್ಕೊಲಿದು ನಿನಗೊರ್ವಂ ||
ಕಂದನಂ ನಾನೀವೆ ಕೈಕೊ |
ಳ್ಳೆಂದು ವಸುರುದ್ರಾರ್ಕಪಿಂಡವ |
ಮುಂದೆ ಮಂತ್ರದಿನೊದರಿ ಮಧ್ಯದ ರುದ್ರಪಿಂಡವನು || ೨೩ ||

---

೧ ಕರ್ಮಗಳ ಗೆಯ್ದೊಡೆ (ಇ.)

ಜಡೆಯು ಶಂಕರದಾಸಿಮಯ್ಯಗೆ |
ಕೊಡಲು ಕೈಕೊಂಡಾ ಶಿವನ ಮೆ |
ಲ್ಲಡಿಗೆರಗಿ ಬೀಳ್ಕೊಂಡು ನಿಜಮಂದಿರಕೆ ನಡೆತಂದು ||
ಮಡದಿಯಂ ಕರೆದೊಲಿದು ಪಿಂಡವ |
ಕೊಡಲು ಸಂತೋಷದ ಶರೀರದೊ |
ಳಿಡಿದುಕೊಂಡಳು ಪಿಂಡವನು ಪೀಳಿಗೆಕರಂಡವನು || ೨೪ ||

ಶಿವ ಶಿವಾ ಶಿವದಾಸಿಯುದರದಿ |
ಕವಳನುಂ ದಿನದಿನಕೆ ಬಲಿದುದು |
ವಿವಿಧ ಶುಕ್ತಿಕೆಯೊಳಗೆ ಮುಕ್ತಾಫಲ ಬಲಿವ ತೆರದಿ ||
ಯುವತಿಯಂಗದಿ ಗರ್ಭಚಿಹ್ನಂ |
ಪವಣಿಗೆಯೊಳೊಪ್ಪಿದುದು ಸೌಖ್ಯದಿ |
ಹವಣಿಸಲ್ಕಳವೇ ಲತಾಂಗಿಯ ಚಾರುಗಾಡಿಕೆಯ || ೨೫ ||

ಮೀರಿದುದು ದಿನದಿನಕೆ ಪೊಡೆ |
ಕಪ್ಪೇರಿದುವು ಕುಚಚೂಚುಕಂಗಳು |
ತಾರಿದುದು ವಿಮಲ ತ್ರಿವಳಿಯುಡಗಿದುವು ಬಡಬಾಸೆ ||
ಜಾರಿದುದು ಕೆಲಕಾನನಂ ಬೆ |
ಳ್ಪೇರಿದುದು ಮುಡಿ ಬೆಳೆದು ಬಳಲಿಕೆ |
ತೋರಿದುದು ಮಂದಗತಿಯಾದುದು ಬಯಕೆ ಘಟಿಸಿದುದು || ೨೬ ||

ನವಿಲೆಯೊಳಗಿಹ ಭಕ್ತಸಂಕುಳ |
ಯುವತಿಯರ ಮಣಿಗಿಚ್ಚಿಯಾದ |
ನ್ನವ ಮಹಾಸಂಭ್ರಮದೊಳಕ್ಷತೆಯಿಟ್ಟು ನೀಡುತ್ತೆ ||
ದಿವದಿವಕ್ಕೆ ವಿಶೇಷವಹ ಪ |
ರ್ವವ ವಿಲಾಸದಿ ಮಾಡುತಿರ್ದರು |
ಹವಣಿಸುವರಳವೇ ಅವರ ಸಂತೋಷದೇಳಿಗೆಯ || ೨೭ ||

ಈ ಸಗಾಢದೊಳಬ್ಜಮುಖಿ ನವ |
ಮಾಸಮಂ ಕಳೆದಮೃತಯೋಗ ವಿ |
ಶೇಷಶುಭನಕ್ಷತ್ರ ಸದ್ವೇಳೆಯ ದಿನೋದಯದಿ ||
ಭಾಸ ಪಲ್ಲವಿಸುತ ಸುತನನಭಿ |
ಲಾಷೆಯಿಂ ಪಡೆದಳು ಸುಧಾಂಬುಧಿ |
ಯಾ ಶಶಾಂಕನ ಪಡೆದವೊಲು ಶಿವ ಶಿವ ಮಹಾದೇವಾ || ೨೮ ||

ತವೆ ಶಿರೋದಯವಾದ ವೇಳೆಯೊ |
ಳವಧರಿಸಿದರು ಲಿಂಗವಂ ಮಿಗೆ |
ಹವಣಿಸಲು ಬಾರದ ವಿಭವದಿಂ ಜಾತಕರ್ಮವನು ||
ಯುವತಿಯರು ಮಾಡಿದರು ದ್ವಾದಶ |
ಯುವತಿಯರು ತೊಟ್ಟಿಲೊಳಗಿಟ್ಟಾ |
ಶಿವ ಜಡೆಯ ಶಂಕರನ ಪೆಸರಿಟ್ಟರು ನಿಜಾತ್ಮಜಗೆ || ೨೯ ||

ಬೆಳೆದ ದಿನದಿನಕಾ ಸುತಂ ಕ |
ಲ್ಪಲತೆ ಬೆಳೆವೊಲು ಶುಕ್ಲಪಕ್ಷದಿ |
ಬೆಳೆವ ಚಂದ್ರನೊಲಾ ಲತಾಂಗಿಯ ಕುಚಸುಧಾರ್ಪಿತದಿ ||
ಕಳೆಯ ಪುಂಜದವೊಲು ಪೊಡಮರಳಿ |
ಯುಳುತೆ ನಗುತರುದಿಂಗಳೊಳಗಂ |
ಬಳಿಕ ಕುಳಿತಾಡುತ್ತಲಿರ್ದೊಂಬತ್ತು ತಿಂಗಳಿಗೆ || ೩೦ ||

ಕಂಬವಂ ಪಿಡಿದೆದ್ದು ನಿಲ್ಲು |
ತ್ತಂಬೆಗರೆವುತೆ ಬಂದು ಹರುಷದೊ |
ಳುಂಬವರ ಪರಿಯಾಣವಂ ತುಡುಕುತ್ತ ಮಹ ಬಾಲ ||
ಕುಂಭಿ ನೊಸಲರಳೆಲೆಯು ಕಿವಿಯೊಳು |
ಲಂಬಿಸುತ ಪೂಗಾಯಿಗಳ ರ |
ತ್ನಂಭರಿತದುಡಿದಾರ ಕಟಕದ ಕಡೆಯದಿಂದೆಸೆವ || ೩೧ ||

ಚರಣದಂದುಗೆ ಕಿಂಕಿಣಿಗಳಿಂ |
ಚರಣದೊಂದೆರಡಡಿಯನಿಡುತಂ |
ತರುಣಿಯರು ಪಾಡಲ್ಕೆ ತೋಳಾಡುತ್ತೆ ಪಿಡಿಕಿಸುತೆ ||
ಶಿರವೊಲೆಯುತಂ ನರ್ತಿಸುತಲಿ |
ಪರಿಯ ಬಾಲ್ಯತ್ವದೊಳೆಸೆದನೊಂ |
ದೆರಡು ಮೂರ್ನಾಲ್ಕೈದು ವತ್ಸರವಾಗೆ ಗಣನಾಥ || ೩೨ ||

ಅಕ್ಷರಂಗಳ ಕಲಿಸಿ ವೇದ ಪ |
ರೀಕ್ಷೆಗಳನೋದಿಸಿ ಸುಕಾವ್ಯವ |
ಶಿಕ್ಷಿಸಿ ಮಹಾ ಶಬ್ದಶಾಸ್ತ್ರವ ಪೇಳ್ದಲಂಕಾರ ||
ಲಕ್ಷಣವ ವಿಸ್ತರಿಸಿ ನಾಟಕ |
ಶಿಕ್ಷೆಯಂತರ[೧] ಶಾಸ್ತ್ರದುತ್ತರ |
ರಕ್ಷೆಯಂ ಬೋಧಿಸಿದರಾ ಶಿವದಾಸಿಯಾತ್ಮಜಗೆ || ೩೩ ||

---

೧ ಯುತ್ತರ (ಇ, ಉ.)

ಎಂತು ಬೀಜಮುದಂತೆ ಮೊಳೆಯಂ |
ಬಂತೆ ಶಂಕರದಾಸಿಮಯ್ಯಗ |
ಳಂತೆ ಶಾಸ್ತ್ರಾಗಮ ಪುರಾಣ ಕವಿತ್ವ ಭಿತ್ತಿಗಳ ||
ಮಂತಣಮನರಿದಧಿಕ ಸಕಲ ಮ |
ತಾಂತರಂಗಳ ತಿಳಿದು ಜೀವ |
ಭ್ರಾಂತಿಯಂ ಪರಿಹರಿಸಿದಂ ದಾಸ್ಮಯ್ಯನಾತ್ಮಜನು || ೩೪ ||

ನೋಡಿದಂ ದಾಸ್ಮಯ್ಯ ಪುತ್ರನ |
ಗಾಡಿಯಂ ಶಿವದಾಸಿಯರೊಳೊಲಿ |
ದಾಡಿದಂ ನಿನ್ನಾತ್ಮಜಾತ ಸಮರ್ಥನಾದ ಕಣಾ[೧] ||
ರೂಢಿಸಿದ ಘನ ವೇದ ಶಾಸ್ತ್ರದೊ |
ಳಾಡಲಳವೇ ಆತನಿಗೆ ಸರಿ |
ಮಾಡುವರೆ ಭೂಮಿಯೊಳಗಿಲ್ಲಂ ಶಾಸ್ತ್ರಕೋವಿದರು || ೩೫ ||

ಎಂದು ಸಂತೋಷದೊಳು ತನ್ನಯ |
ನಂದನನ ಕೊಂಡಾಡಿ ಕತ್ತುರಿ |
ಗಂಧಿ ಶಿವದಾಸಿಯರೊಳಾಡಿದ ಮಂದಹಾಸದೊಳು ||
ಬಂದುದೆಮಗವಸಾನ ನಾಳಿನ |
ಚಂದವಾರೋದಯದಿ ಪುಸಿಯ |
ಲ್ಲಿಂದೊರೆದು ಗುರುಪರ್ವಮಂ ಶಶಿವಾರದೊಳು ಮಾಡ || ೩೬ ||

ಬೇಕೆನಲು ಶಿವದಾಸಿ ಮುದದಿಯ |
ನೇಕ ಸೋಪಸ್ಕಾರಮಂ ಸುವಿ |
ವೇಕದಿಂ ಮಾಡಿದಳು ಬಂದುದು ಸೋಮವಾಸರವು ||
ಈ ಕಥನಮಂ ಕೇಳ್ದೊಲಿದು ಭೂ |
ಲೋಕದೊಳಗಿಹ ಸರ್ವ ಭಕ್ತಾ |
ನೀಕ ಮಾಡಿದುದಾ ಜಡೆಂಸು ಶಂಕರನ ನಿಳಯದೊಳು || ೩೭ ||

ಶಿವ ಶಿವಾ ಬಣ್ಣಿಪರೆ ಫಣಿಪಗೆ |
ಹವಣೆ ಆದಿನ ಮಾಡಿಸಿದ ಪ |
ರ್ವವ ನ ಭೂತೋ ಭವಿಷ್ಯತೀ ಎಂಬಂತೆ ರಾಜಿಸಲು ||
ಶಿವಶರಣಮಣಿ ದಾಸಿಮಯ್ಯಂ |
ಶಿವಸಮೇತಾಚಾರ ಮಾರ್ಗವ |
ಕುವರಗೊಲವಿಂ ಬೋಧಿಸಿದ ಸದ್ಗುರು ಮಹಾತ್ಮೆಯನು || ೩೮ ||

---

೧ ನಲಾ (ಇ, ಉ.)

ಮಗನೆ ನೀನೆಚ್ಚತ್ತು ನಡೆ ಕಲಿ |
ಯುಗದೊಳಗೆ ಸತ್ಯಾಗಮದಿ ನಡೆ |
ವಗೆ ಮಹಾಭಾರಂ ವಿವೇಕಪುರಸ್ಸರದೊಳಿರೆ ಭೂ ||
ಜಗವ ಗೆಲಬಹುದಲ್ಲದೊಡೆ ಕೇಳ್ |
ನಗೆಗೆಡೆಯ ಮಾಡುವರು ಮಾನವ |
ರಗಣಿತ ಮಹಾಪುರುಷರಾದರು ನಿಮಿಷಮಾತ್ರದೊಳು || ೩೯ ||

ಮಗನೆ ಕೇವಲ ಧರ್ಮವೈ ಕೃತ |
ಯುಗದಿ ಮೂರ್ಮಡಿ ಧರ್ಮವೊಮ್ಮಡಿ |
ಯಘವಿಹುದು ತ್ರೈತಾಯುಗದಿ ಸರಿ ಧರ್ಮ ಸರಿ ಪಾಪ ||
ನೆಗಳ್ದಿಹುದು ದ್ವಾಪಾರದೊಳು ಕಲಿ |
ಯುಗದೊಳೊಮ್ಮಡಿ ಧರ್ಮ ಮೂರ್ಮಡಿ |
ಯಘಮಿಹುದು ಕೇಳದುನಿಮಿತ್ತಂ ಕಲಿಯುಗ ಕನಿಷ್ಠಂ || ೪೦ ||

ಕುಲಜ ಸೇವಕನಪ್ಪ ಕೇಳ |
ಕ್ಕಲಜ ಭೂಪತಿಯಪ್ಪ ಪಾತಕ |
ಹಲ ದಿವಸ ಬಾಳುವನು ಸುಕೃತಿಯೆ ಬೇಗಳಿವ ದೀನಂ ||
ಹಲವು ದ್ರವ್ಯಕ್ಕೊಡೆಯ ಚಾಗಿಗೆ |
ನೆಲೆ ಬಡತನಂ ಮಗನೆ ಲಾಲಿಸು |
ಕಲಿಯುಗದೊಳೀ ಷಡು [1]ಗುಣಗಳಾಶ್ರಯಿಸಿ ಮಿರುಗುವುವು[1] || ೪೧ ||

ಮರೆದು ಕಳೆವರು ತಮಗೆ ಬಂದಿಹ |
ಕೊರತೆಗಳ ಪರರಾರಿಗಾದರು |
ಕೊರತೆಯೆಳ್ಳನಿತಿರ್ದರವರಂ ತೃಣಕೆ ಕಡೆ ಮಾಡಿ ||
ಜರಿವರೀ ಕಲಿಯುಗದ ದುರ್ಜನ |
ರುರಿ(ಲಿ)ಯಲೀಸರು ಸತ್ಯಪುರುಷರ |
ನರಿಯರದರಿಂ ತಮಗೆ ಪಾತಕ ಬಹುದನೆಲೆ ಮಗನೆ || ೪೨ ||

ಕಡಿವರಮವಾಸಿಯೊಳರಳಿಯುಂ |
ಸುಡುವರದ ಸಮಯದೊಳು ದೇವರ |
ಗುಡಿಯ ಬಲು ಬೇಸಿಗೆಯೊಳಗೆ ತುಂಬಿದ ತಟಾಕಗಳ ||
ಒಡೆವರೊಲವಿಂದಗ್ರಹಾರವ |
ಕೆಡಿಸುವರು ಕೇಳ್ ಪುಣ್ಯಕಾಲದಿ |
ಮಡದಿಯರ ತರ್ಕೈಸಿ ನೆರೆವರು ಧೂರ್ತರೆಲೆ ಮಗನೆ || ೪೩ ||

---

೧-೧ ಗುಣಗಳಾಕ್ರಮಿಸಿಹವು ಮಗನೇ (ಇ, ಉ.)

ತೀರ ಕಂಡರೆ ತೊಲಗಬೇಕೈ |
ಮಾರು ತುರಗಂ ಮುಂಬರಲು ದಶ |
ಮಾರು ತೊಲಗಲ್ವೇಳ್ಕು ಮತ್ತಗಜಂ ಬರಲು ಸಹಸ್ರ ||
ಮಾರು ತೊಲಗಲ್ವೇಳ್ಕು ದುರ್ಜನ |
ದೂರ ವರ್ಜಿತಮಾಗಿರಲ್ವೇ |
ಳ್ಕೀ ರಹಸ್ಯವ ನಿಶ್ಚಯಿಸಿ ಕಲಿ[೧]ಸಂಗ ಜಿತನಾಗು || ೪೪ ||

ಸಕ್ಕರೆಯವೊಲು ಮಾತು ಬೇವಿನ |
ಸೆಕ್ಕೆಯೊಲು ಮನ ತಂದೆತಾಯವೊ |
ಲಕ್ಕರೆನಿಪರೆ ಶತ್ರುವರ್ಗವ ಹೃದಯದೊಳಗಿರಿಸಿ ||
ಚೊಕ್ಕರಾಗಿಹರಧಿಕ ಖುಲ್ಲವ |
ನಿಕ್ಕಿಕೊಂಡಿಹರಂತರಂಗದೊ |
ಳಕ್ಕಟಾ ದುರ್ಜನರು ಮಗನೇ ಕೂಡಬೇಡವರ || ೪೫ ||

ಕಂಡರೇಳುವರಾ ಪತಿತರಂ |
ಕಂಡರೇಳುವ ಚೋರರಂದದಿ |
ಮಂಡಿಸುವರತಿ ಕೊಡಲಿ ಕಾಲ್ಗಳ ಮೇಲೆ ಬಿದ್ದಂತೆ ||
ಅಂಡಲೆವರಾಶ್ರಿತರ ಮಿಗೆ ತರಿ |
ಗೆಂಡದೊಲು ದುರ್ಜನರವರ ನೀ |
ಕಂಡು ನುಡಿಸದಿರವರ ಸಂಗವ ಮಾಡದಿರು ಮಗನೇ || ೪೬ ||

ಹುಲು ಮೃಗವ ಪಿಡಿವುಜ್ಜುಗದಿ ಪೆ |
ರ್ಬುಲಿ ಹುದುಗುವೊಲು ದುರ್ಜನಂ ಮಿಗೆ |
ಹುದುಗಿಕೊಂಡಿಹ ಕಾರ್ಯ ಬಪ್ಪನ್ನವರ ಮೌನದೊಳು ||
ಕೊಲುವನಿದಿರರಿಯದೊಲು ಸಜ್ಜನ |
ನೊಲು ವಿರಾಜಿಸುತಿರ್ಪನವನೊಳು |
ಬಲಿಯದಿರು ಮಿತ್ರತ್ವಮಂ ಬಲ್ಲರೆ ಮಗನೆ ನೀನು || ೪೭ ||

ಆಡದಿರು ಪುಸಿ ನಿಂದ್ಯ ನಿಷ್ಠುರ |
ಚಾಡಮಂ ಕೊಲೆಯನ್ಯದೈವವ |
ಗಾಡಿವೆತ್ತಿಹ ಪರಸತಿಯರಂ ದೂಷ್ಯವರ್ತಕರ ||
ನೋಡದಿರು ಕೃಪಣರ ಭವಿಗಳಂ |
ಬೇಡದಿರು ಕಾರ್ಪಣ್ಯದೊಳಗೊಡ |
ಗೂಡು ಮನವಂ ಶ್ರೀಗುರುಪದಾಂಬುಜದೊಳೆಲೆ ಮಗನೆ || ೪೮ ||

---
೧ ಖಲ (ಇ.)

ಪರಮ ಸ್ವರ್ಗಕ್ಕಾಪವರ್ಗ |
ಕ್ಕರಸನಂ ಮಾಳ್ಪುದು ಭವಿಷ್ಯೋ |
ತ್ಕರದಿ ಭೂತದೊಳಾದ ವಿದ್ಯಾಸ್ಮಿತ ಮುಖಕ್ಲೇಶ ||
ದಿರವ ಭಂಜಿಸಿ ವರ್ತಮಾನದಿ |
ಪರಮ ಸೌಖ್ಯವನೀವುದೀ ಶ್ರೀ |
ಗುರುಪದಧ್ಯಾನಂ ಮಗನೆ ಕೇಳದರ ಮಹಿಮೆಯನು || ೪೯ ||

ಶ್ರೀತ್ವ ಮಾಂಗಲ್ಯಸ್ವರೂಪಂ |
ಗುತ್ವ ಗುಣರಹಿತಾಮಲತ್ವಂ |
ರುತ್ವ ರುಣರುಜೆಯಾಶ್ರಯಿಸದಿಹ ಮಂತ್ರಿಕಾಮೂರ್ತಂ[1] ||
ಶ್ರೀತ್ವ ಗುತ್ವ ರುಕಾರ ದ್ವ್ಯಾವಾ |
ಪೃಥ್ವಿಪೂರಣ ಕೇವಲ ಬ್ರ |
ಹ್ಮತ್ವಮಿಾ ಶ್ರೀಗುರುಪದಧ್ಯಾನವನು ಬಲಿ ಮಗನೇ || ೫೦ ||

ಶಶವಿಷಾಣದವೋಲು ಶೂನ್ಯಮೆ |
ನಿಸದು ಶ್ರೀಗುರುರೂಪಕ ಮಹಾ |
ನಸದಿ ತೋರುವ ಧೂಮದೊಲು ತೋರಿಕೆಯದಾಗಿರದು ||
ಪೊಸಬನಕ್ಷಿಗೆ ಸ್ಥಾಣು ಚೋರನೊ |
ಲೆಸೆವ ಶೂನ್ಯಾಶೂನ್ಯವೆರಡರ |
ಬೆಸುಗೆಯಾಗದು ಕೇಳ್ ಮಗನೆ ಗುರುಪದವ ಮರೆವೊಗಲು || ೫೧ ||

ಪರಮಪರಮಣುಮಹತುವಾಗಿಹ |
ಧರಣಿಮುಖ ತತ್ವಗಳ ಗರ್ಭೀ |
ಕರಿಸಿಕೊಂಡಿಹ ಗುಣದಿ ಮಹಿಮಾಪದಮವರೊಳೊಲಿದು ||
ಬೆರೆದಿಹುದರಿಂದಣಿಮಮಂತಃ |
ಕರಣವಾಸದಿಮಾವಗಂ ಕೇ |
ಳರು[2]ವಿಡಿದು ತತ್ವಗಳಿಗಿಂ ಗೌರವಗುಣಂ ಬೆತ್ತು || ೫೨ ||

ಗುರುವೆನಿಸಿದುದು ನಾಲ್ಕು ಪದಗಳ್ |
ಬೆರೆದಿಹುದರಿಂದಾಮಲ ಶ್ರೀ |
ಗುರುವೆನಿಸಿದುದು ಪಂಚವಿಂಶತಿ ತತ್ವದುತ್ತರದ ||
ಪರಮೆನಿಸಿದುದು ಮುಕ್ತಿಲಕ್ಷ್ಮೀ |
ವರಮೆನಿಸಿದುದು ಶಿವಮಯೂರಾ |
ಗರಮೆನಿಸಿದುದು ಸದ್ಗುರುಪದಂ ಮಗನೆ ಕೇಳೆಂದ || ೫೩ ||

---

೧ ಮಂತ್ರ ಕಾಮ್ಯಾರ್ಥಂ (ಉ.) ೨ ಳ್ತರ (ಇ, ಉ.)

ವೇದ ನಾಲ್ಕವತರಿಸಿದ ಸ್ಥಲ |
ಮಾದುದಾ ಗಾಯತ್ರಿ ವರಮಂ |
ತ್ರೋದಯಸ್ಥಲಮಾದುದಾ ಪ್ರಣವಂ ಸಮಸ್ತ ಜಗ ||
ದಾದಿಮಧ್ಯಾಕೃತ್ಯಕಾರಣ |
ಮಾದುದೀ ಸದ್ಗುರುಪದಂ ಪರ |
ಮಾದುದಿಲ್ಲೀ ಗುರುಪದಕ್ಕೆ ವಿಶೇಷ ಸಂಪದವು || ೫೪ ||

ಶಿವಗೆ ತಾ ಕೈಲಾಸಪದ ಮಾ |
ಧವಗೆ ವೈಕುಂಠಪದಮಂ ವಾ |
ಗ್ಭವಗೆ ಸಾಕ್ಷಾತ್ಸತ್ಯಲೋಕವನಿತ್ತು ಗೀರ್ವಾಣ ||
ಧವಗೆ ದಿವ್ಯ ಸ್ವರ್ಗಭೋಗದ |
ಸವಿಯ ತೋರಿಸಿ ವಿವಿಧ ಮಹಿಮಾ |
ರ್ಣವಮೆನಿಸಿದುದು ಸದ್ಗುರುಪದಧ್ಯಾನವೆಲೆ ಮಗನೆ || ೫೫ ||

ಗುರುಪದಧ್ಯಾನದೊಳು ವಿಘ್ನಂ |
ಹರಿವುದಾ ಕ್ಷಣದೊಳಗೆ ನಾಮ |
ಸ್ಮರಣೆಯಿಂ ಪರಿಹಾರಮಪ್ಪುದು ಪಂಚ ಮಹಪಾಪಂ ||
ದರುಶನದಿ ಭವಪಡಗುವುದು ಶ್ರೀ |
ಚರಣ ಸೋಂಕಿಂ ಸ್ವರ್ಗಮಪ್ಪುದು |
ಪಿರಿದು ಶುಶ್ರೂಷೆಯಿಂದ ಮೋಕ್ಷಂ ಮಗನೆ ನೀನೊಲಿದು || ೫೬ ||

ಗುರುಪದಾಬ್ಜವ ನಿನ್ನ ನಿಟಿಲದಿ |
ಗುರುಸೂಮೂರ್ತಿಯ ನಿನ್ನ ನಯನದಿ |
ಗುರುಪದಧ್ಯಾನವನು ನಿನ್ನಯ ಮನದ ಕೊನೆಯೊಳಗೆ ||
ಗುರುಸ್ಮರಣೆಯಂ ನಿನ್ನ ರಸನದಿ |
ಧರಿಸೆನುತ ಬೋಧಿಸಿ ಮಹಾ ಶಿವ |
ಶರಣ ಶಂಕರದಾಸಿಮಯ್ಯಂ ತನ್ನ ನಿಜ ಸುತನ || ೫೭ ||

ಪೊಡವಿಯೊಳಗಿಹ ಭಕ್ತರಿಗೆ ಕೆ |
ಯ್ಯೆಡೆಯ ಕೊಟ್ಟನು ರಕ್ಷಿಸೆಂದವ |
ರಡಿಗೆರಗಿ ಬೀಳ್ಕೊಂಡು ಶಂಕರದಾಸಿಮಯ್ಯಗಳು ||
ಜಡೆಯ ಶಂಕರ ದೇವರಿದಿರೊಳು |
ಮಃಡದಿಗಣವರಸಹಿತ ಮಂಡಿಸಿ |
ನುಡಿದ ಬೇಗದೊಳೆಮ್ಮನೊಳಕೊಳ್ಳೆಂದು ಶಿವನೊಡನೆ || ೫೮ ||

ಸರಸಿಜದ ಕುಟ್ಮಳ ಮಹಾಭಾ |
ಸ್ಕರನ ಮೂರ್ತಿಯ ಕಂಡು ಬೇಗದೊ |
ಳರಳುವಂದದಿ ದಾಸಿಮಯ್ಯನ ಕಂಡ ಮಾತ್ರದೊಳು ||
ಪರಮ ಲಿಂಗಂ ಬಾಯ್ದೆರೆಯಲತಿ |
ಹರುಷದಿಂದೊಳಪೊಕ್ಕನೊಡನಾ |
ತರುಣಿ ಪೊಕ್ಕಳು ವಕ್ತ್ರಪಾದಗಣೇಶನೊಡವೆರೆದ || ೫೯ ||

ಉರಿಯೊಳಗೆ ಕರ್ಪೂರ ಭೊಂಕನೆ |
ಬೆರಸುವಂದದಿ ಜಲದೊಳಗೆ ಜೇನ್[1] |
ಬೆರಸುವಂದದಿ ಸೈಂಧಲವಣಂ ಕ್ಷಾರವಾರಿಯೊಳು ||
ಬೆರಸುವಂದದಿ ಬಲಿದೆಸೆವ ಪಾ |
ದರಸಘುಟಿಕೆಯೊಳಮಲ ಸುಧೆ ಮಿಗೆ |
ಬೆರಸುವಂದದಿ ಬೆರೆದರವರೊಲವಿಂದೆ ಲಿಂಗದೊಳು || ೬೦ ||

ನವಿಲೆಯೊತ್ತಿನ ಪುರದೊಳಿರ್ದಾ |
ಶಿವನ ಸಾಲೋಕ್ಯವ ಪಡೆದನಾ |
ನವಿಲೆಗೊಕ್ಕಲು ಬಂದು ಶಿವಸಾಮಿಪ್ಯಮಂ ಪಡೆದ ||
ಹವಿನಯನಮಂ ಪಡೆದು ಗಿರಿಜಾ |
ಧವನ ಸಾರೂಪ್ಯವ ಪಡೆದನಾ |
ಶಿವನೊಳಗೆ ಬೆರೆದೀಶಸಾಯುಜ್ಯವ ಪಡೆದ ಶರಣ || ೬೧ ||

ದುಂದುಭಿ ಧ್ವನಿಗೈದು ಸುಮನಸ |
ವೃಂದ ಪೂಮಳೆಗರೆಯಲುಘೆ ಉಘೆ |
ಎಂದುದೀಶ್ವರಶರಣತತಿ ಮಣಿಪುಷ್ಪಕವ ಕೊಂಡು ||
ಬಂದರೊಲವಿಂ ರುದ್ರಕನ್ಯೆಯ |
ರಂದು ಶಂಕರದಾಸಿಮಯ್ಯನ |
ನಿಂದುಮುಖಿ ಶಿವದಾಸಿಯಂ ಗಣನಾಯಕನನೊಲಿದು || ೬೨ ||

ಸದು ವಿಮಾನದೊಳಿರಿಸಿ ಕೊಂಡೈ |
ದಿದರು ಶಿವಲೋಕಕ್ಕೆ ಖಂಡೇಂ |
ದುಧರನಂ ಕಾಣಿಸಿದರಾ ಮೂವರು ಮಹಾತ್ಮಕರ ||
ಹೃದಯದೊಳಗಿಂಬಿಟ್ಟು ಕಂಗೊ |
ಪ್ಪಿದ ಶಿವಂ ಸಾಕ್ಷಾದನುಪಮಂ |
ಮದನಹರ ಸನ್ಮುಕ್ತಿಕಾಂತಾಕಾಂತ ಗಿರಿಜೇಶ || ೬೩ ||

---

೧ ಜಲ (ಎ.)

ದೇವನೊಪ್ಪಿದ ಸಕಲಭಕ್ತರ |
ಜೀವನೊಪ್ಪಿದ ವಿವಿಧತತ್ವಾ |
ಭಾವನೊಪ್ಪಿದನಖಿಲ ಬ್ರಹ್ಮಾಂಡಾತ್ಮನೊಪ್ಪಿರ್ದ ||
ಪಾವಕಾಂಬಕನೊಪ್ಪಿದಂ ವಿ |
ದ್ಯಾವರಣನೊಪ್ಪಿರ್ದ ದಾನವ |
ದೇವಜನವಂದಿತಪದಾಂಭೋಜಾತನೊಪ್ಪಿರ್ದ || ೬೪ ||

ವ್ಯೋಮಕುಂತಳನೊಪ್ಪಿದಂ ನಿ |
ಸ್ಸೀಮನೊಪ್ಪಿದ ಸಕಲದೇವಲ |
ಲಾಮನೊಪ್ಪಿದ ನಾಗಲೀಕಕುಲಾಮೃತಾರ್ಣವಕೆ ||
ಸೋಮನಹ ಸಂಗಯ್ಯ ಪರ್ವತ |
ಸ್ವಾಮಿ ಶ್ರೀಗುರು ಮಲ್ಲಿಕಾರ್ಜುನ |
ಪ್ರೇಮದಿಂದೊಪ್ಪಿರ್ದ ಕೈಲಾಸದೊಳು ಸಂತಸದಿ || ೬೫ ||

ಪರಮ ಪುರುಷಂ ವೀರಶೈವೋ |
ದ್ಧರಣ ಜಗದಾರಾಧ್ಯ ಶಾಂತಾ |
ಭರಣ ಶಿವತತ್ವಾನುಬಂಧಕನಾ ಮಹಾಮಹಿಮ ||
ಗುರುಪದಾಂಬುಜಭೃಂಗ ಭಕ್ತ್ಯಾಂ |
ಕುರನೆನಿಪ ಚಿಕವೀರ ಶಾಂತೇ |
ಶ್ವರನ ಮಂದಿರದೊಳಗೆ ಪಂಡಿತ ಮಲ್ಲಿಕಾರ್ಜುನನು || ೬೬ ||

ಒಪ್ಪಿರಲು ಸಂತೋಷದಿಂದಂ |
ಚಿಪ್ಪಿಗರ ಶಿರಮಣಿಯೆನಿಪ ಕಂ |
ದರ್ಪಸನ್ನಿಭ ಸಂಗಿಸೆಟ್ಟಿಯ ಪರ್ವನೈತಂದು ||
ಚಿಪ್ಪಿಗರ ವಂಶಕ್ಕೆ ಗುರುವಾ |
ಗಿಪ್ಪ ಶಂಕರದಾಸಿಮಯ್ಯಗ |
ಳೊಪ್ಪಿ ನಡೆದ ಚರಿತ್ರಮಂ ಪೇಳೆನಲು ಕೈಕೊಂಡು || ೬೭ ||

ಸೊಲ್ಲಿಸಿದೆ ಸಂತೋಷದೊಳು ನಾ |
ಬಲ್ಲನಿತು ಯುಕ್ತಿಯೊಳು ಬಲ್ಲವ |
ರೊಳ್ಳಿತೆಂಬೊಲು ಶ್ರೀಪೊಳಲ್ಗುಂದಪುರದಧಿನಾಥಂ ||
ಕಲ್ಲಿನಾಥನ ಭೃತ್ಯ ಪಂಡಿತ |
ಮಲ್ಲಿಕಾರ್ಜುನ ವೀರಶೈವದ |
ರೆಲ್ಲರಾತ್ಮಾನಂದ ಶಂಕರದಾಸಿಮಯ್ಯಗಳ || ೬೮ ||

ಚರಿತೆಯಂ ಮಿಗೆ ಪ್ರಭವಸಂವ |
ತ್ಸರದೊಳೆಸೆದಿಹ ಪುಷ್ಯಮಾಸಾಂ |
ತರದಿ ಬಹುಳ ದ್ವಾದಶಿಗೆ ಮುಗಿದುದು ಮಹಾಕೃತಿಯು ||
ಹರಶರಣರೀ ಕೃತಿಯನಂಗೀ |
ಕರಿಸಿ ಲಾಲಿಸಿ ಕೇಳಿ ಕಡೆಯೊಳು |
ಪಿರಿದು ಪರ್ವಂಗಳನೊಡರಿ ಸಂತೋಷದೊಳು ಸುಖಿಸಿ || ೭೯ ||

ನೆನೆದ ಕಾರ್ಯಂ ಸಿದ್ಧಿಸಲಿ ಯಶೌ |
ವನಮುದಾಗಲಿ ರಿಪುಗಳಡಗಲಿ |
ತನತನಗೆ ಬೆಸಗೆಯ್ಯಲತಿ ಮಿತ್ರಜನ ರುಜೆದೋಷ ||
ತನುವ ವೇಧಿಸದಿರಲಿ ಭಾಗ್ಯಂ |
ದಿನದಿನಕ್ಕೆ ವಿಶೇಷವಾಗಲಿ |
ಘನ ಪುರಾಣವನೋದಿದವರಿಗೆ ಕೇಳ್ವ ಸುಜನರಿಗೆ || ೭೦ ||

## ಅಂತು ಸಂಧಿ ೧೬ಕ್ಕಂ ಪದ ೧೧೭೪ ಕ್ಕಂ ಮಂಗಳಂ

– ಮುಗಿದುದು –

ಶ್ರೀ ಶಂಕರಲಿಂಗಾರ್ಪಣಂ

# ಕಠಿಣ ಶಬ್ದಗಳ ಕೋಶ

ಸೂಚನೆ : ಪ್ರತಿಶಬ್ದಾರ್ಥದ ಕೊನೆಗೆ ಕೊಟ್ಟ ಅಂಕೆಗಳು ಸಂಧಿ ಮತ್ತು ಪದ್ಯ ಇವುಗಳನ್ನು ಕ್ರಮವಾಗಿ ಸೂಚಿಸುತ್ತವೆ

### ಅ

ಅಗ್ರಘುರಟ್ಟ - ಬೀಸುಕಲ್ಲಿನ ಮೇಲಿನ ಪಾಳಿ ೧, ೧೪
ಅಂಕ - ಕಾಳಗ ೧, ೫
ಅಂಗವಾಗು - ನಿಜವೆನಿಸು ೪, ೬೪
ಅಜಿನ - ಚರ್ಮ ೨, ೧
ಅಟಮುಟ - ಕಪಟ ೩, ೪೦
ಅಟ್ಟಣಿಸು - ಕೂಡಿಸು ೫, ೫೩
ಅಟ್ಟಣೆ - ಎದೆಯೆತ್ತರ ಗೋಡೆ ೨, ೨೩
ಅಡಸು - ಒತ್ತಿಹಿಡಿ ೧೨, ೫೦
ಅಡೆ - ಗಂಟುಗಟ್ಟಿದ, ದಟ್ಟ ೮, ೪
ಅಡೆಮಾಡು - ಪೂರಯಿಸು ೮, ೨೮
ಅಡ್ಡ - ಒಂದು ಸಣ್ಣ ನಾಣ್ಯ ೬, ೨೦
ಅಣಕ - ತಿರಸ್ಕಾರದ ಮಾತು ೧೧, ೩೫
ಅಣಬೆ - ನಾಯಿಬಚತ್ತರಿಗೆ ೧೩, ೫೧
ಅಂಡಲೆ - ಪೀಡಿಸು ೨, ೧೪
- ಒತ್ತು ೧೩, ೬೬
ಅದ್ದನ - ಒಂದ ಸಣ್ಣ ಅಳತೆ ೭, ೧೮
ಅನು - ಹಾದಿ ೭, ೧೭
ಅನುಲೋಮ - ಕ್ರಮವುಳ್ಳ ೫, ೪೭
ಅನ್ವಯ - ವಂಶ ೧, ೪೭
ಅಂತು - ಪಾವುಡ ೧೫, ೪
ಅಪವರ್ಗ - ಮೋಕ್ಷ ೮, ೫೪
ಅಮರ್ - ಕೂಡಿಕೊಳ್ಳು ೧, ೪೫
ಅಮಲೇಂದುಕಾಂತಗ್ರಾವ - ಚಂದ್ರಕಾಂತ ಶಿಲೆ ೧, ೩೨
ಅಮೇಧ್ಯ - ಮಲ ೧೦, ೩೭
ಅರತರೆ (ಅರ್ - ಧಾ) - ಒಣಗಿದರೆ, ಇಲ್ಲವಾದರೆ ೬, ೨೯
ಅರಿ - ಕತ್ತರಿಸು ೧೩, ೬೧
ಅಲಸು - ಬೇಸರಾಗು ೧೨, ೨೯
ಅವಗವಿಸು - ಪೂರಯಿಸು ೮, ೫೬
ಅವಧರಿಸು - ಸ್ಮರಿಸು ೮, ೩೭
ಅವ್ವಳಿಸು - ಮೇಲೆ ಹಾರು ೫, ೧೩
- ಜಿಗಿದಾಡು ೯, ೫೪
ಅಷ್ಟಾಪದ - ಬಂಗಾರ ೩, ೮೪
ಅಸಿ ಮಸಿ ಕೃಷಿ- ಕ್ಷಾತ್ರಕರ್ಮ ಬರೆಯುವ ಕಾರ್ಯ ಒಕ್ಕಲತನ ೫, ೯
ಅಳಿವು - ಮರಣಗಾಲ ೧೦, ೫೦

### ಆ

ಆಕಾಂಶೆ - ಆಕಾಂಕ್ಷೆ, ಇಚ್ಛೆ ೧೪, ೩೧
ಆಕೆ - ಶಕ್ತಿ ೫, ೫೦
ಆಗರ (ಆಗಾರ-ದ್ಭ) - ತೋಟ ೬, ೪೮
ಆನು - ಹತ್ತು ೨, ೧೧
ಆಮ್ನಾಯ - ವೇದ ೧೧, ೪೨
ಆಯತ - ಯೋಗ್ಯತೆ ೭, ೭೫
ಆಯಸ್ಕರ - ಸೂಜಿಗಲ್ಲು ೧೪, ೬೧
ಆರವೆ (ಆರಾಮ-ದ್ಭ) - ತೋಟ ೭, ೯
ಆರಡಿ - ದುರ್ವಾರ್ತೆ ೧, ೪೨
ಆರೈ - ತಿದ್ದು ೨, ೬೪
ಆಲವಟ್ಟ (ಆಲಾವರ್ತ-ದ್ಭ) - ಬೀಸಣಿಕೆ ೨, ೪೬
ಆವುಜ - ಒಂದು ವಾದ್ಯ ೨, ೪೬
ಆಹರ - ಬೇಕೆಂದು ತೆಗೆದು ಕೊಳ್ಳುವುದು ೩, ೬೭
ಆಳವಾಡು - ತುಚ್ಛ ಮಾತಾಡು ೯, ೬೪

### ಇ

ಇಂದ್ರಗೋಪ - ಹೊನ್ನೆಹುಳ ೫, ೧೨
ಇರಕು - ಹಿಚುಕು ೧೪, ೨೮

ಇರ್ಕುಳಿಯಂತಳಿ (ಇಳ್ಕುಳಿಗೊಳ್ಳು) - ಸೆಳೆಯಲ್ಪಡು ೪, ೨

### ಈ

ಈಡಿರಿ - ಹೆಚ್ಚಾಗು ೧, ೧೬
ಈಷಣ - ಇಚ್ಛೆ ೨, ೪
ಈಷಣತ್ರಯ - ಹೆಂಡತಿ ಮಗ ದ್ರವ್ಯಗಳ ಆಸೆ ೧, ೨೮

### ಉ

ಉತ್ಕಟ - ಉತ್ಕೃಷ್ಟ ೪, ೬
- ದೊಡ್ಡಸ್ತಿಕೆ ೧೧, ಸೂ
ಉತ್ತರಕಕ್ಷೆ - ಉತ್ತರಭಾಗ (ವೇದಾಂತ) ೧೬, ೩೩
ಉದಂಚಿನ - ಮೇಲೆ ಹೋಗುವ ೨, ೪೫
ಉದ್ಗಮ - ಹೂವಿನ ಮೊಗ್ಗೆ ೧, ೩೫
ಉದ್ಗಾರಿಸು - ಹೊರಚೆಲ್ಲು ೩, ೬೬
ಉಪಕರಣ - ಸಾಹಿತ್ಯ ೮, ೨೬
ಉಪಾಧಿ - ಪ್ರಾಪಂಚಿಕ ಗುಣ ೨, ೫

### ಊ

ಊಡಿಸು - ಉಣಿಸು ೮, ೩೪
ಊಳ್ - ದನಿಮಾಡು, ಒದರು ೨, ೫೩
ಊಳಿಗ - ಸೇವೆ, ಕೆಲಸ ೬, ೯

### ಎ

ಎಕ್ಕಟಿ - ಆಶ್ಚರ್ಯ ೧೨, ೫೩
ಎಕ್ಕಲ - ಕಾಡಹಂದಿ ೧೨, ೫೩
ಎಕ್ಕಲೆ - ಅದ್ಭುತ ೧೨, ೪೪
ಎಡ್ಡ - ದಡ್ಡ ೮, ೪
ಮನೋಹರ ೨, ೩೨
ಎಣೆವಕ್ಕಿ - ಚಕ್ರವಾಕಪಕ್ಷಿ ೧೬, ೮
ಎರಪರ - ನಮಸ್ಕಾರ ಮಾಡುವವರ ೯, ೨೨
ಎಸಕ - ಪ್ರಕಾಶ, ಸ್ಥಿತಿ ೧೪, ೭೨
ಎಸು - ಬಾಣಹೊಡೆ ೭, ೫೩
ಎಳೆವೆರೆ (ಎಳೆ+ಪೆರೆ) - ಮೂಡಲಚಂದ್ರ ೨, ೪೦

### ಒ

ಒಗ್ಗ - ಮೈಲಾರನ ಭಕ್ತ ೧೩, ೩೪
ಒಚ್ಚರ - ಒಂದು ಸರ ೧೩, ೩೩
ಒಚ್ಚಿ - ಒಂದು ೧೪, ೧೬
ಒಟ್ಟಿಲ್ - ರಾಶಿ ೧೨, ೫೨
ಒಡರು - ಮಾಡು ೪, ೩
ಒಡರಿಚು - ಕೂಡು, ಸೇರು ೧೬, ಸೂ
ಒಡ್ಡಣೆ - ರಾಶಿ ೯, ೧೫
ಒತ್ತು - ಸಮೀಪ ೯, ೪
ಒಂದು - ಒಟ್ಟಾಗು ೫, ೧೪
ಒಬ್ಬುಳಿ - ದಟ್ಟವಾದ ೨, ೪೫
ಒರ - ವರ ೨, ೪೮
ಒರೆ - ಲೇಪಿಸು ೧೨, ೩೧
ಒರೆದೊರೆದು - ಒತ್ತೊತ್ತಿ ೭, ೧೫
ಒಸಗೆ - ಉತ್ಸವ ೭, ೭೭

### ಓ

ಓಡು - ಮಣ್ಣಿನ ಹರಿವಾಣ ೧೫, ೩೯

### ಕ

ಕಕೋಕ - ಕಾಮಶಾಸ್ತ್ರ ೨, ೩೫
ಕಕ್ಷ - ಬಗಲು ೩, ೭೩
ಕಕ್ಷಪಾಳ - ಬಗಲಚೀಲ ೧೫, ೫
ಕಟ - ದಂಡೆ ೪, ೬
ಕಡವಸ - ತೊಗಲಪಾಸಿಗೆ ೧೫, ೩೩
ಕಡುಹಿ - ದುಷ್ಟ ೧೪, ೩೫
ಕಡ್ಡ - ದಿಟ್ಟತನ ೮, ೪
ಕಣಿ - ಗಂಟು ೧೫, ೨೧
ಕಣೆಯುಳು - ದೇವರ ಹೇಳುವವಳು ೯, ೩೬
ಕದುಕು - ಹಿಚುಕು ೫, ೫೧
ಕಮ್ಮರಿ - ಕೊಳ್ಳ ೧೪, ೨೩
ಕರಟಿ - ಆನೆ ೫, ೬೦
ಕರಗ (ಕರಕ-ದ್ಭ) - ಒಂದುತರದ ನೀರಿನ ಪಾತ್ರೆ ೬, ೩೪
ಕರುಬು - ಮತ್ಸರಪಡು ೮, ೫೪
ಕಲ್ಯಾಣ - ಲಗ್ನ ೧, ೧೩
ಕವಿ - ಶುಕ್ರ ೧೫, ೧
ಕಳ್ - ಸಿಂದಿ ೯, ೩೮
ಕಾಕ - ಸುಳ್ಳು ೧೫, ೧೦
ಕಾಮಾಕ್ಷಿ - ಒಂದು ತರದ ವೀಣೆ ೧೫, ೪

ಕಾರ್ಬೊನ್ನ – ಕಬ್ಬಿಣ ೩, ೭೪
ಕಾಶೆ – ಚಡ್ಡಿ ೨, ೪೭
ಕಾಸಾ – ಚಂದ ೧೦, ೭೩
ಕಾಸೆ – ಚಡ್ಡಿ ೧೦, ೭೩
ಕಾಹು – ರಕ್ಷಣೆಯ ಕವಚ ೧೨, ೫೨
ಕಾಳು – ಕಾಡು ೮, ೪೯
ಕಾಳುಗೆಡೆ – ಕೆಟ್ಟಮಾತಾಡು, ಬೈಯು ೯, ೬೪
ಕಾಂಸ್ಯ – ಕಂಚು ೩, ೮೫
ಕಿನಿಸು – ಸಿಟ್ಟು ೧೨, ೧೫
ಕೀರಣೆಯ – ಹಬ್ಬಿರುವ ೧೨, ೩೮
ಕೀಲಾಲ – ನೀರು ೧, ೧
ಕುಕ್ಕುರ – ನಾಯಿ ೧೩, ೩೮
ಕುಕ್ಷಿ – ಸ್ಥಾನ ೩, ೨೯
ಕುಡಿತೆಗಣ್ – ವಿಶಾಲವಾದ ಕಣ್ಣು ೨, ೩೬
ಕುಂತಣ – ಕುಂತಲ, ಕೂದಲು ೧೦, ೧
ಕುಂದಣೆ – ಬಾಯ್ಕುಟ್ಟು ೯, ೪೬
ಕುಂಭಿ – ಆನೆ ೧೬, ೩೧
ಕುರು – ಗಿಡ್ಡ ೫, ೬೦
ಕುರುಜೆ – ಒಂದು ಜಾತಿಯ ಹಣ್ಣು ೫, ೧೫
ಕುಲಿಶ – ವಜ್ರ ೧, ೨
ಕುಳಿರ್ – ತಂಪು ೨, ೧೯
ಕೃತಿ – ಗ್ರಂಥ, ಕಾವ್ಯ ೧೬, ೧೯
ಕೃಷ್ಣಪಶು – ಎರಳೆ ೧೧, ೭೧
ಕೃಷ್ಣವರ್ತ್ಮ – ಅಗ್ನಿ ೩, ೮೫
ಕೆಯ್ಗುಡಿತೆ – ಬೊಗಸೆ ೯, ೬೬
ಕೇಸರ – ಏಣ ೭, ೧೦
ಕೈಪಿಡಿ – ಕನ್ನಡಿ ೨, ೨೪
ಕೈರವ – ರಾತ್ರಿಕಮಲ ೧, ೧
ಕೊಟ್ಟಣ – ಬತ್ತ ಕುಟ್ಟಿ ಅಕ್ಕಿ ಮಾಡುವುದು ೯, ೪೦
ಕೋಡಿ – ಕೊರತೆ ೧೨, ೫
ಕೋಡುಂಗಲ್ಲು – ಗುಡ್ಡದ ತುದಿ ೧೫, ೧೯
ಕೋರದಾಡೆ – ಹದನಾದ ಉದ್ದ ಹಲ್ಲು ೧೪, ೬೮
ಕೋಷ್ಠ – ತೊನ್ನು ೭, ೨೯
– ಕೊಟ್ಟಿಗೆ ೯, ೬೨
ಕ್ರಮುಕ – ಅಡಿಕೆ ೨, ೬೨
ಕ್ಷೇತ್ರಜ್ಞ – ಜೀವಾತ್ಮ ೧೪, ೪೨

## ಖ

ಖುಲ್ಲ – ಸಿಟ್ಟು, ನೀಚತನ ೧೬, ೪೫

## ಗ

ಗಡಾವಣೆ – ಸಂಭ್ರಮ ೪, ೩
ಗಭಸ್ತಿ – ಕಿರಣ ೯, ೬
ಗರ ಹೊಡೆ – ಪಿಶಾಚ ಹಿಡಿ ೧೨, ೬೬
ಗಾಡಿಕಾರ್ತಿ – ಮನೋಹರ ಸ್ತ್ರೀ ೮, ೫೩
ಗಾನ (ಢ್ವ) – ಗಹನ ೧೦, ೩೨
ಗಾಂಪ – ಹೆಡ್ಡ ೧, ೨೧
ಗೀರ್ವ (ಗೀರ್ವಾಣ) – ದೇವತೆ ೧, ೨
ಗುಡಿ – ಪತಾಕೆ ೨, ೩೯
ಗುಡಿಗಟ್ಟು – ರೋಮಾಂಚವುಂಟಾಗು ೪, ೨
ಗೂಡೆ – ಬುಟ್ಟಿ ೯, ೪೦
ಗೊಂತು – ಗೊತ್ತು ೪, ೭೧
ಗೊಂತುಗೊಳ್ಳು – ನಡು ೪, ೨
ಗೋಧೂಮ – ಗೋದಿ ೫, ೫೫
ಗೋವಿಂದಗತಿ – ಮಾಟ ೧೦, ೧೬
ಗೋಳಕ – ವಿಧವೆಯ ಸಂಗ ಮಾಡುವವ ೭, ೫೫

## ಘ

ಘಟೆ – ಸಮೂಹ ೯, ೨೧
ಘುಟಿಕಾಸಿದ್ಧಿ – ಮಂತ್ರಿಸಿದ ಗುಳಿಗೆಯನ್ನು ಬಾಯಲ್ಲಿಟ್ಟು ಬೇಕಾದಲ್ಲಿ ಹೋಗುವ ಶಕ್ತಿ ೧೦, ೬೩

## ಚ

ಚಡಾಳಿಸು – ಬೆದರಿಸಿ ನುಡಿ ೭, ೯೧
ಚಢಾಳಿಸು – ವಿಲಾಸವನ್ನು ಹೆಚ್ಚಿಸು ೨, ೬೪
ಚಂಡೇಶ – ಶಿವ ೬, ೪೬
ಚಂದ್ರಿಕೆ – ಸುರುಳಿ ೯, ೫

## ಜ

ಜರ – ಜೀವನ ೧೧, ೯
ಜರು – ಹವಿಸ್ಸು ೧೩, ೬೦
ಜೆಳ್ಳು – ಉದ್ದ ೧೨, ೩೨

ಜಗುಳು - ಹೋಗು ೬, ೨೯
ಜಡ - ಜಲ ೨, ೨೮
ಜಡಿ - ಅಲ್ಲಾಡು ೧೦, ೭೩
ಜಲಜಾತ - ಸಿಂಪಿ ೧೧, ೨೨
ಜಲೂಕ - ಜಿಗುಳಿ ೧, ೩೦
ಜಲೋಪಲ - ಆಣೆಕಲ್ಲು ೫, ೧೨
ಜಲ್ಲಿ - ಜಾಲರು ೫, ೨೫
ಜವಾದಿ - ಪುನುಗು ೨, ೪೩
ಜಳ - ಕಾಂತಿ ೧೫, ೩೪
ಜೀವಧನ - ಪಶು ೬, ೪೨
ಜೀವಿತ - ಉಪಜೀವನದ ಸಾಧನ ೧೩, ೭
ಜೊನ್ನ - ಬೆಳದಿಂಗಳು ೧, ೪೭
ಜೊಂಪ - ಗೊಂಚಲು ೨, ೨೭
ಜೋದ (ಯೋಕ್ತೃ - ದ್ಭ) - ಮಾವುತ ೧೦, ೭

## ಟ

ಟವುಳಿ - ಮೋಸ ೧, ೪೨

## ಠ

ಠಕ್ಕೆ - ಪತಾಕೆ ೬, ೩೭

## ಡ

ಡಂಬ - ಊರು ೧, ೩೮
ಡವಕೆ - ಕಾಳಂಜಿ, ಉಗುಳುಬಟ್ಟಲ ೨, ೪೬
ಡಿಂಡಿಮ - ಒಂದು ವಾದ್ಯ ೨, ೪೭
ಡೆಂಡಣಿಸು - ದುಃಖಿಸು, ೩, ೧೫
ಗಾಬರಿಯಾಗು ೫, ೩

## ತ

ತಂಗದಿರ - ಚಂದ್ರ ೧೩, ೩೦
ತಟಲ್ಲತೆ - ಟಸಲ್ಮಿಂಚು ೫, ೧೧
ತಮಾಲ - ಕತ್ತಲೆ ೪, ೧
ತರ್ಕೈಸು - ಆಲಿಂಗಿಸು ೧೬, ೪೩
ತಲ್ಲಣ - ಭಯಂಕರ ೧, ೧೪
ತವಿಸು - ತಗ್ಗಿಸು ೭, ೭೩
ತಳತಂತ್ರ - ಸೇನಾಪತಿಯ ಅಧೀನದ ೧೩, ೭
ತಳಪ - ಹೊಳಪು ೧೫, ೩೪
ತಳಿ - ಹರವು ೮, ೩೦
ತಳ್ಪಂಕ - ಭೀತಿ ಹುಟ್ಟಿಸುವವ ೧, ೩೧
ತಾರ್ - ಕಡಿಮೆಯಾಗು ೧೬, ೨೬
ತಿಣ್ಣ - ದೊಡ್ಡ ೩, ೬೮
ತಿಣ್ಣದಿಂದ - ವಿಶೇಷವಾಗಿ ೫, ೫೬
ತಿಸಿ - ಊಟ ೮, ೧೭
ತಿನಿಸು - ತಿಂಡಿ, ಕಜ್ಜ ೧೪, ೬೧
ತಿಂತಿಣಿ - ಸಮೂಹ ೬, ೧೭
ತಿಮಿ - ಮೀನ ೧, ೧೦
ತುಡುಕು - ಗಟ್ಟಿಹಿಡಿ ೧೬, ೩೧
ತುರುಂಬು - ಸೇರಿಸು ೧೩, ೬೭
ತೂಪಿರಿ - ಉಗುಳು ೧೪, ೭೦
ತೂಳ - ಉತ್ಕಂಠ ೭, ೫೯
ತೂಳದ - ತುಂಬಿದ ೨, ೬೮
ತೂಳು - ಒತ್ತರಿಸಿ ಬರು ೩, ೮೦
- ಆವೇಶ ೫, ೨
- ಹಾರಿಹೋಗು ೧೫, ೧೨
ತೇಂಕಾಡು - ಈಸಾಡು ೪, ೩೬
ತೆತ್ತಿಸು - ಹಾಕು, ಇಡು ೪, ೬
ತೊಟ್ಟು - ತುಂಬ ೫, ೫೧
ತೊಡ - ಆಭರಣ ೪, ೮
ತೊರಳೆ - ಪ್ಲೀಹ ೩, ೩೬
ತೊರೆ - ಹೊಳೆ ೫, ೧೪
ತೊಳಸು - ಕುಟ್ಟು ೯, ೬೪
ತೋಟಿ - ಜಗಳ ೨, ೪೨
ತೋಯ+ಓಕಸ - ನೀರಿನ ಸ್ಥಾನ ೧, ೩೦
ತ್ರಸ - ಹುಳು ೪, ೨೯

## ದ

ದಂಡಧರ - ಯಮ ೬, ೧೦
ದಂಡಿಗೆ - ವೀಣೆ ೨, ೫೫
ದಂತಾವಲ - ಆನೆ ೯, ೨೧
ದಂದುಗ - ತ್ರಾಸ ೭, ೧೩
ದವಳಾರ (ಧವಲಾಗಾರ-ದ್ಭ) - ಮರ್ಯಾದೆಗೆ ತಕ್ಕ, ವೈಭವದ ೫, ೨೬
ದಳ್ಳುರಿ - ಮಹಾಜ್ವಾಲೆ ೨, ೧೧
ದಾಮೋದರ - ಕೃಷ್ಣ ೮, ೩೯
ದಾಯ - ಉಪಾಯ ೭, ೧೭

ದಾರು – ಕಟ್ಟಿಗೆ ೫, ೫೨
ದಿಗಿಲಿಸು - ದಂಗಾಗುವಂತೆ ವರ್ಣಿಸು ೫, ೨೮
– ಅಲ್ಲಾಡಿಸು ೧೩, ೩೩
ದಿಟ್ಟಗಿಡಿ – ಅಗ್ನಿನೇತ್ರವುಳ್ಳ ೭, ೧೬
ದಿಂಡುಗೆಡೆ – ಅಡ್ಡಬೀಳು ೬, ೨
ದಿಂಡೆ – ಮೂರ್ಖ ೧೩, ೬೬
ದಿಮ್ಮಿದ - ದೊಡ್ಡಸ್ತನದ ೧೫, ೧೦
ದುಗುಡ – ಚಿಂತೆ ೭, ೪
ದೂರ್ವೆ – ಕರಿಕೆ ೭, ೨೧
ದ್ಯಾವಾಪೃಥ್ವಿ - ಸ್ವರ್ಗ ಮತ್ತು ಭೂಮಿ ೪, ೫೮

ಧರಿತ್ರೀಧವ – ಅರಸ ೧೧, ೬
ಧಾಮ – ಪ್ರಕಾಶ ೧, ೪೭
- ಮನೆ ೬, ೫೦
ಧೌತ – ಶುದ್ಧ ೧೦, ೬೦

## ನ

ನಕ್ತ - ರಾತ್ರಿ ೫, ೬೬
ನಗಧರ – ಕೃಷ್ಣ ೧೧, ೫೩
ನಂದನ - ಆನಂದ, ಮಗ ೧೬, ೧೦
ನಾಗಲಿಕ – ಚಿಪ್ಪಿಗ ೧, ೨೨
ನಿಕುರುಂಬ - ಸಮೂಹ ೧೨, ೬೪
ನಿಮ್ನ - ಆಳ ೨, ೨೩
ನಿರಾಳ - ಶಾಂತ ೪, ೧
ನಿರ್ಕುಳಿಗೊಳ್ಳು - ಆಕರ್ಷಿಸು ೨, ೧೪
ನೆಗಳ್ - ಪ್ರಸಿದ್ಧಿಪಡೆ ೧, ೧೧
ನೆರಕೆ - ಬೇಲಿ ೩, ೩೬
ನೇಜಯ - ಬರ್ಚಿ ೬, ೩೭
ನೇವಳ - ಬಂಗಾರದ ಕೊರಳಹಾರ ೨, ೧೧

## ಪ

ಪಕ್ಕೆ – ಸ್ಥಾನ ೨, ೪
ಪಕ್ಷಿದ್ವಿ – ಭೇರುಂಡ ೧೩, ೭೭
ಪಜ್ಜಳಿಸು (ದೃ) - ಪ್ರಜ್ವಲಿಸು ೫, ೫
ಪಂಚ - ಅಪೂರ್ವ ೯, ೭೪
ಪಂಚಮುದ್ರಾ - ಲಿಂಗ, ಜಡೆ, ರುದ್ರಾಕ್ಷಿ, ಭಸಿತ, ಉಪವೀತ (೩, ೩೨), ೭, ೧೨
ಪಟೀರ – ಚಂದನ ೧೩, ೧೬
ಪಟ್ಟ - ರೇಶಿಮೆ ೫, ೪೧
ಪಟ್ಟವಳಿ – ರೇಶಿಮೆಯ ಬಟ್ಟೆ ೭, ೬೪
ಪತಿ – ಸರಿ ೨, ೧೨
ಪತ್ತಿ – ಸಂಬಂಧ ೪, ೩೧
ಪಡಿ - ರೀತಿ ೧೦, ೩೨
ಪರಮಹಂಸ – ಪರಬ್ರಹ್ಮ ೪, ೫೯
ಪರಾಕು - ಅಲಕ್ಷ ೭, ೧೪
– ಲಕ್ಷ ೮, ೫೬
ಪರಿಕೆ - ಪರೀಕ್ಷೆ ೧೪, ೫
ಪರಿಖೆ – ಕಂದಕ ೨, ೨೩
ಪರಿವೇಷ್ಟನ - ವರ್ತುಲ ೧, ೪೫
ಪರುಟವಿಸು - ವಿವರವಾಗಿ ಹೇಳು ೨, ೪೮
ಪರ್ವ - ಶ್ರೇಷ್ಠ ೧, ೨೪
- ಉತ್ಸವ ೧, ೨೫
ಪಲಪತ್ರ – ಮಾಂಸ ೧೪, ೨೮
ಪಲಲ - ಮಾಂಸ ೧೪, ೨೪
ಪವಣಿಗೆ - ಕೂಡಿಕೊಳ್ಳೋಣ ೧೬, ೨೫
ಪಸೆ - ಅಂದವಾದ ಆಸನ ೯, ೨೮
ಪಳುಕ - ಸ್ಫಟಿಕ ೫, ೬೦
ಪಾಡಳಿ – ಕಳೆಗುಂದು ೭, ೩
ಪಾಯಕ - ಕಾಲ್ದಳ ೬, ೩೫
ಪಾಯು - ಮುಕುಳಿ ೩, ೫೩
ಪಾವುಗೆ - ಪಾದುಕ ೬, ೩೩
ಪಿತಾಮಹ - ಬ್ರಹ್ಮ ೧, ೧
ಪಿಪಾಸೆ – ನೀರಡಿಕೆ ೧೦, ೬೦
ಪಿಪೀಲಿಕ - ಇರಿವೆ ೩, ೪೮
ಪಿಸಿತ - ಮಾಂಸ ೧೦, ೩೬
ಪೀನ - ವಿಶೇಷ ೧, ೫೪
– ಪುಷ್ಟ ೮, ೨೪
ಪೀಲಿ - ನವಿಲಗರಿ ೧೩, ೩೩
ಪುಗ್ಗಿ – ಹುಗ್ಗಿ ೮, ೬
ಪುಂಗವಧ್ವಜ - ಶಿವ ೨, ೩೦
ಪುಟಮಿಗೆ - ಹೆಚ್ಚೆಚ್ಚು ೫, ೩
ಪುದಿ - ಸೇರಿಸು ೧೫, ೨೩
ಪುದೆ - ರಾಶಿ ೩, ೩೬

ಮರುಕ - ಪ್ರೀತಿ ೮, ೮
ಮರುಳ್ - ರಾಕ್ಷಸ ೧೫, ೪೫
ಮಲೆ - ಎದುರಿಸು ೯, ೪೮
ಮಸಗು - ಚಾಪಲ್ಯತೋರು,
ತೋರು ೧೨, ೩
ಮಾಗಧ - ಹೊಗಳುವವ ೯, ೨೫
ಮಾಟಕೂಟ - ಸಾಮರಸ್ಯ ೭, ೯
ಮಾಣು - ನೆಟ್ಟಗಾಗು,
ನೆಟ್ಟಗೆಮಾಡು ೯, ೩೯
ಮಾದು (ಮಾರ್ಯ್-ಧಾ) (ಮಾಣ್ದು) -
ಬಿಟ್ಟು ೮, ೩೭
ಮಾಸ - ಬಟಗಡಲೆ ಮುಂತಾದುವು ೫, ೫೫
ಮಾಸತಿ - ಮಹಾಲಕ್ಷ್ಮಿ ೧, ೫೩
ಮಿತ್ತು (ದೃ) - ಮೃತ್ಯು ೯, ೫೧
ಮಿದಿ - ಕುಟ್ಟು ೯, ೪೪
ಮುಂಚು - ಮೀರಿನಡೆ ೭, ೧೨
- ಮೊದಲು ಹೋಗು ೮, ೧೨
ಮುಡುಹು - ಹೆಗಲು ೯, ೩೮
ಮುರಜ - ಮದ್ದಳೆ ೧೩, ೪೬
ಮೂಕೊರತಿ - ಮೂಗಿಲ್ಲದವಳು ೧, ೨೧
ಮೂದಲಿಸು - ಹೀಯಾಳಿಸು ೧, ೪
ಮೃತ್ಯುನಿಶಾಟ - ಮೃತ್ಯುಂಜಯ ೬, ೧
ಮೇದಸ್ಸು - ನೆಣ ೩, ೬೩
ಮೇರು - ಮಧ್ಯದಲ್ಲಿರುವ ಮಣಿ ೭, ೧೩
ಮೊರಹು - ಮರಮರಧ್ವನಿ ೧ ೩೧
ಮೊರೆ - ಸಹಾಯ ೧೧, ೩೦
ಮೊಳೆ - ಹುಟ್ಟು, ಹೊರಬೀಳು ೫, ೫೮
ಮೋದು - ಹೊಡೆ ೬, ೧೧
ಮೋಹರ - ವಾದ್ಯದ ಗತ್ತು ೨, ೬೫
- ದಂಡು ೯, ೫೭
ಮೌಲ್ಯನಹ - ದೊಡ್ಡಸ್ತನದವ ೧, ೨೫

## ರ

ರಾಜ - ಯತಿ ೧೧, ೨೪
- ಚಂದ್ರ ೧೫, ೪೫
ರಾಜರಾಜ - ಕುಬೇರ ೧೫, ೪೫
ರಾಯಸ - ಆಜ್ಞಾಪತ್ರ ೯, ೪

## ಲ

ಲಲಾಮ - ಆಭರಣ ೧೦, ೧
ಲಾಕುಳ - ಯೋಗದಂಡ ೧೫, ೫
ಲೋಚು - ಚಿಮುಟಗೆ ೧೩, ೬೧

## ವ

ವಂಧ್ಯ - ಮಕ್ಕಳಿಲ್ಲದವ ೧೬, ೧೬
ವಲವರ - ಆನಂದ ೧೬, ೧೧
ವಸ್ತ್ರಭಿನ್ನಕ - ಚಿಪ್ಪಿಗ ೭, ೬೬
ವಾರಕ - ಅರ್ಧಶರೀರದಲ್ಲಿ ಧರಿಸಿದ ೫, ೬೧
ವಾರುವ (ವಾಡವ-ದೃ) - ಕುದುರೆ ೭, ೮೯
ವಿಡಾಯು - ದೊಡ್ಡಸ್ತನ, ಸೊಗಸು ೪, ೩೭
ವಿಪ್ರಯೋಗ - ವಿಯೋಗ ೨, ೩೩
ವಿಪ್ರಾವತಿ - ಅಗ್ರಹಾರ ೧೬, ೧೯
ವೀಜನ - ಬೀಸಣಿಕೆ ೧೦, ೪
ವೀಸ - ತುಸು ಹಣ ೮, ೫೭
ವೆಗ್ಗಳ - ಅಧಿಕ, ಹೆಚ್ಚಿನ ೭, ೫
ವೇದಂಡ - ಆನೆ ೨, ೧೪
ವೈಖಾನಸ - ವೈಷ್ಣವರ ಒಂದು ಮತ ೯, ೧೬
ವೈಲೋಮಿ - ವಿರುದ್ಧಕ್ರಮವುಳ್ಳ ೫, ೪೭
ವೈಶ್ವದೇವ - ಎಲ್ಲ ದೇವತೆಗಳಿಗೆ
ತರ್ಪಣಕೊಡುವುದು ೧, ೫೪
ವ್ಯಂಗ್ಯ - ಕೊಂಕುಮಾತು ೭, ೨

## ಶ

ಶಕುಲ - ಮೀನ ೮, ೨೦
ಶಚಿ - ಇಂದ್ರಾಣಿ ೩, ೩
ಶಾರ್ಙ್ಗಿ - ವಿಷ್ಣು ೧೨, ೧
ಶಿಂಶುಮಾರ - ಮೊಸಳೆ ೧, ೩೦
ಶೇಷ - ವಿಶೇಷ ೬, ೪೦
ಶ್ರವ - ಹೆಣ ೧೬, ೧೨

## ಷ

ಷಡೂರ್ಮಿ - ಹಸಿವು, ನೀರಡಿಕೆ,
ಶೋಕ, ಮೋಹ, ಜನನ,
ಮರಣವೆಂಬ ಆರು ತೆರೆಗಳು
೨, ೪

## ಸ

ಸಗಾಢ - ವೈಭವ ೧೬, ೨೮
ಸಗ್ಗಳೆ - ಚೆಂಬು ೧೦, ೪

## ಹ



